# ಸ್ವರವಚನ

## ವಿಚಾರ ಸಂಕಿರಣ ಸಂಪುಟ





ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ

ಮೈಸೂರು.

ಶ್ರೀ ಶಿವರಾತ್ರೀಶ್ವರ ಧಾರ್ಮಿಕ ದತ್ತಿ ಪ್ರಕಟಣೆ: ವಿಚಾರ ಸಂಕಿರಣ ಮಾಲೆ-೪

# ಸ್ವರವಚನ
# ವಿಚಾರ ಸಂಕಿರಣ ಸಂಪುಟ

ಸಂಪಾದಕರು

ಡಾ. ಎಂ.ಎಂ. ಕಲಬುರ್ಗಿ
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಪೀಠ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ,
ಜೆ.ಎಸ್.ಎಸ್. ಮಹಾವಿದ್ಯಾಪೀಠ, ಮೈಸೂರು

SWARAVACHANA VICHARA SANKIRANA SAMPUTA: A collection of papers presented at the Seminar on "Swaravachana Sahitya" held at Mysore on 18th and 19th November 1995. Edited by Dr. M.M. Kalaburgi, M.A. Ph.d. Published by Jagadguru Sri. Shivarathreeswara Granthamale Mysore- First Edition - 1997, pages: 201 + 9

Price: Rs.75=00





ಪ್ರಥಮ ಮುದ್ರಣ: ೧೯೯೭

ಪ್ರತಿ: ೭೦೦



ಬೆಲೆ ರೂ: ೭೫=೦೦

ಅಕ್ಷರ ಜೋಡಣೆ: ಅಖಿಲ ಗ್ರಾಫಿಕ್ಸ್
ಜಯನಗರ,
ಧಾರವಾಡ - ೫೮೦ ೦೦೧

ಮುದ್ರಕರು : ಚೆನಕ ಇಂಪ್ರೆಷನ್ಸ್
4ನೇ ಅಡ್ಡರಸ್ತೆ, ಎಂ.ಜಿ. ರಸ್ತೆ
ತುಮಕೂರು. ಫೋನ್: 0816-72439

# ಶುಭ ಹಾರೈಕೆ

ವೀರಶೈವ ಧಾರ್ಮಿಕ ಪೀಠಗಳ, ವಿಶ್ವವಿದ್ಯಾಲಯಗಳ ಮತ್ತು ವಿದ್ವಾಂಸರ ಒಂದು ಶತಮಾನದ ದುಡಿಮೆಯಿಂದಾಗಿ 'ವಚನ ಸಾಹಿತ್ಯ'ದ ಸಂಶೋಧನೆ-ಪ್ರಕಟನೆ ಒಂದು ಹಂತಕ್ಕೆ ಬಂದು ನಿಂತಿದೆ. ಇದೀಗ ಅಷ್ಟೇ ವಿಪುಲವಾಗಿರುವ, ಅದಕ್ಕಿಂತ ಹೆಚ್ಚು ಜನಪ್ರಿಯವಾಗಿರುವ 'ಸ್ವರವಚನಸಾಹಿತ್ಯ"ದ ಸಂಶೋಧನೆ-ಪ್ರಕಟನೆ ವ್ಯಾಪಕವಾಗಿ, ವ್ಯವಸ್ಥಿತವಾಗಿ ನಡೆಯಬೇಕಾದುದು ಅಗತ್ಯ.

ಕಳೆದ ೮೦೦ ವರ್ಷಗಳ ಅವಧಿಯಲ್ಲಿ ಮೌಖಿಕ ಮತ್ತು ಗ್ರಾಂಥಿಕ ಸ್ವರೂಪದಲ್ಲಿ ಹುಟ್ಟಿಬಂದ ಈ ಸಾಹಿತ್ಯ, ನಮ್ಮ ಕೈತಪ್ಪಿ ಹೋಗಲು ಬಿಡಬಾರದು. ಇದನ್ನು ಉಳಿಸುವ ಮೂಲಕ ವೀರಶೈವಕ್ಕೆ ತನ್ನದೇ ಆದ ಹಾಡುಗಬ್ಬಪರಂಪರೆ ಇರುವ ಸತ್ಯವನ್ನು ಸ್ಥಾಪಿಸುವುದು, ಶರಣ ಸಂಸ್ಕೃತಿಯ ಕೇಂದ್ರಗಳಾದ ವೀರಶೈವ ಮಠಗಳ ಜವಾಬ್ದಾರಿಯಾಗಿದೆ.

ಡಾ. ಫ.ಗು.ಹಳಕಟ್ಟಿಯವರು ಮೊದಲು ಮಾಡಿ, ಹಲವರಿಂದ ಜರುಗಿದ ಈ ಸಾಹಿತ್ಯದ ಪ್ರಕಟನೆಯ ಇತಿಹಾಸದಲ್ಲಿ ಡಾ. ಎಲ್. ಬಸವರಾಜು ಸಂಪಾದಿತ "ಶಿವದಾಸ ಗೀತಾಂಜಲಿ"ಯನ್ನು ಬೆಳಕಿಗೆ ತರುವ ಮೂಲಕ "ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ" ಒಂದು ಮೈಲುಗಲ್ಲನ್ನು ಸ್ಥಾಪಿಸಿದೆ. ಈಗ ಈ ದಾರಿಯ ದೊಡ್ಡ ಸಾಧನೆಯೆಂಬಂತೆ "ಸಮಗ್ರ ಸ್ವರವಚನ ಸಾಹಿತ್ಯ ಪ್ರಕಟನ ಯೋಜನೆ"ಯನ್ನು ಕೈಗೆತ್ತಿಕೊಳ್ಳಲಾಗಿದೆ.

ಈ ಯೋಜನೆ ಎರಡು ಹಂತಗಳಲ್ಲಿ ಬೆಳೆದು ಪೂರ್ಣಗೊಳ್ಳಲಿದೆ. ಎಲ್ಲ ಬಗೆಯ ಮೂಲಗಳಿಂದ ಎಲ್ಲ ಸ್ವರವಚನಗಳನ್ನು ಬಿಡಿ ಸಂಪುಟ ಸ್ವರೂಪದಲ್ಲಿ ಪ್ರಕಟಿಸುವುದು ಮೊದಲ ಹಂತವಾದರೆ, ಹೀಗೆ ಪ್ರಕಟವಾದ ಎಲ್ಲ ಸಂಪುಟಗಳಲ್ಲಿಯ ಎಲ್ಲ ಸ್ವರವಚನಗಳನ್ನು ವ್ಯವಸ್ಥಿತವಾಗಿ ವರ್ಗೀಕರಿಸಿ, ಇನ್ನೂ ಪರಿಷ್ಕರಿಸಿ, ಒಂದು 'ಮಾಲೆ'ಯಾಗಿ ಪ್ರಕಟಿಸುವುದು ಎರಡನೆಯ ಹಂತವಾಗಿದೆ.

ಮೊದಲನೆಯ ಹಂತದ ಅಂಗವಾಗಿ ೧೯೯೫ನೆಯ ನವೆಂಬರ್ ತಿಂಗಳಲ್ಲಿ ೫೨ ಸ್ವರವಚನ ಸಂಪುಟಗಳನ್ನು ಪ್ರಕಟಪಡಿಸಲಾಯಿತು. ಆ ಸಂದರ್ಭದಲ್ಲಿ ಹಮ್ಮಿಕೊಳ್ಳಲಾಗಿದ್ದ "ಸ್ವರವಚನ ಸಾಹಿತ್ಯ ವಿಚಾರ ಸಂಕಿರಣ"ದಲ್ಲಿ ವಿದ್ವಾಂಸರು ಮಂಡಿಸಿದ ಪ್ರಬಂಧಗಳನ್ನು ಈಗ ಪುಸ್ತಕರೂಪದಲ್ಲಿ ಹೊರತರಲಾಗುತ್ತಿದೆ. ಸುತ್ತೂರು ಶ್ರೀಮಠದ ಇಪ್ಪತ್ತು ಮೂರನೆಯ ಜಗದ್ಗುರುಗಳಾದ ಪರಮ ಪೂಜ್ಯ ಡಾ. ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರು ಜ್ಞಾನದಾಸೋಹ, ಅನ್ನದಾಸೋಹಗಳ ಜೊತೆಗೆ "ಸಾಹಿತ್ಯ-ಸಂಸ್ಕೃತಿ ಧಾರ್ಮಿಕ ದತ್ತಿ" ಹೆಸರಿನಲ್ಲಿ ಶಾಶ್ವತ ಯೋಜನೆಯೊಂದನ್ನು

ರೂಪಿಸಿದರು. ಈ ದತ್ತಿಯ ಆಶ್ರಯದಲ್ಲಿ ಈವರೆಗೆ ಅನೇಕ ಮಹತ್ವದ ಕೃತಿಗಳು ಪ್ರಕಟವಾಗಿವೆ; ವಿಚಾರ ಸಂಕಿರಣ ಸಂಪುಟಗಳು ಬೆಳಕು ಕಂಡಿವೆ. ಈಗ ಪ್ರಕಟವಾಗುತ್ತಲಿರುವ "ಸ್ವರವಚನ ವಿಚಾರ ಸಂಕಿರಣ ಸಂಪುಟ" ಅಪ್ರಕಾಶಿತ ಸಾಹಿತ್ಯ ಪ್ರಕಾರವೊಂದನ್ನು ಕುರಿತುದಾಗಿರುವ ಕಾರಣ, ತುಂಬ ಮಹತ್ವದ್ದೆನಿಸಿದೆ. ಈ ವಿಚಾರ ಸಂಕಿರಣದ ಯೋಜಕರೂ, ಈ ಸಂಪುಟದ ಸಂಪಾದಕರೂ ಆದ ಡಾ. ಎಂ.ಎಂ. ಕಲಬುರ್ಗಿ ಅವರಿಗೂ, ಪ್ರಬಂಧಗಳನ್ನು ಪೂರೈಸಿದ ಎಲ್ಲ ವಿದ್ವಾಂಸರಿಗೂ, ವಿಚಾರಸಂಕಿರಣವನ್ನು ಯೋಜಿಸಿ, ಕಾರ್ಯರೂಪಕ್ಕೆ ತರಲು ದುಡಿದ ಮಹನೀಯರಿಗೂ ಸಕಲ ಶ್ರೇಯಸ್ಸನ್ನು ಹಾರೈಸುತ್ತೇವೆ.

೭ ಜನವರಿ ೧೯೯೭ — ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮಿಗಳು

# ಸಂಪಾದಕರ ನುಡಿ

ಅನುಭಾವದ ವಾಚನಪಾತಳಿಗಾಗಿ "ವಚನ"ಗಳನ್ನು ಬರೆದ ಶರಣರು, ಶ್ರವಣ ಪಾತಳಿಗಾಗಿ "ಸ್ವರವಚನ"ಗಳನ್ನು ಬರೆದರು. ಹನ್ನೆರಡನೆಯ ಶತಮಾನದಿಂದ ಇಪ್ಪತ್ತನೆಯ ಶತಮಾನದ ವರೆಗೆ ನೂರಾರು ಜನ ಶಿವಶರಣರು, ಶಿವಕವಿಗಳು ಸೃಷ್ಟಿಸಿದ ಈ ಸಾಹಿತ್ಯ, ಲಿಖಿತ ಮತ್ತು ಮೌಖಿಕ ಪರಂಪರೆಗಳಲ್ಲಿ ಸಾಗಿಬಂದಿದೆ.

ಸ್ವರವಚನವು ಹಾಡುಗಬ್ಬ ಪರಂಪರೆಯ ದೇಶೀ ಸಾಹಿತ್ಯ ಪ್ರಕಾರವಾಗಿದೆ. ಮಾರ್ಗಸಾಹಿತ್ಯದ ಆಗಮನದಿಂದಾಗಿ ೧೦ನೆಯ ಶತಮಾನದ ಸುಮಾರಿಗೆ ಕತ್ತಲೆಗೆ ತಳ್ಳಲ್ಪಟ್ಟ ಈ ಸಾಹಿತ್ಯವನ್ನು ೧೨ನೆಯ ಶತಮಾನದ ಶರಣರು ಮತ್ತೆ ಬೆಳಕಿಗೆ ತಂದರು. ಈ ದಾರಿಯಲ್ಲಿ ನಡೆದು ೧೫ನೆಯ ಶತಮಾನದ ದಾಸರು ಕೀರ್ತನೆಗಳನ್ನು ಬರೆದರು. ಈವರೆಗೆ ಕರ್ನಾಟಕದಲ್ಲಿ ಕೀರ್ತನೆಗಳನ್ನು ಶೋಧಿಸಿ ಪ್ರಕಟಿಸುವ, ಅನೇಕ ಬಗೆಯ ಮಾಧ್ಯಮಗಳ ಮೂಲಕ ಪ್ರಸಾರ ಮಾಡುವ ಕೆಲಸವು ತುಂಬ ತೃಪ್ತಿಕರವಾಗಿ ಜರುಗಿದೆ. ಆದರೆ, ಅದಕ್ಕಿಂತ ಹಳೆಯದಾಗಿರುವ, ಅದರಷ್ಟೇ ಜನಪ್ರಿಯವಾಗಿರುವ, ಸಾಹಿತ್ಯಿಕವಾಗಿ ಒಂದಿಷ್ಟು ಮಿಗಿಲಾಗಿರುವ "ಸ್ವರವಚನ"ಗಳ ಪ್ರಕಟನೆ ತುಂಬ ಅಲಕ್ಷ್ಯಕ್ಕೆ ಗುರಿಯಾಗುತ್ತ ಬಂದುದು ತುಂಬ ವಿಷಾದದ ಸಂಗತಿ.

ಡಾ. ಫ.ಗು. ಹಳಕಟ್ಟಿ ಅವರು ಮೊದಲು ಮಾಡಿ ಹಲವರು ಸ್ವರವಚನ ಸಾಹಿತ್ಯವನ್ನು ಪ್ರಕಟಿಸುತ್ತ ಬಂದಿದ್ದರೂ, ಡಾ. ಎಲ್. ಬಸವರಾಜು ಸಂಪಾದಿತ "ಶಿವದಾಸ ಗೀತಾಂಜಲಿ"ಯನ್ನು ಬೆಳಕಿಗೆ ತರುವ ಮೂಲಕ ಈ ಸಾಹಿತ್ಯದ ಪ್ರಕಟನೆಯಲ್ಲಿ ಒಂದು ಮೈಲಿಗಲ್ಲನ್ನು ಸ್ಥಾಪಿಸಿದ ಕೀರ್ತಿ ಶ್ರೀ ಸುತ್ತೂರು ಮಹಾಸಂಸ್ಥಾನಮಠದ ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಗೆ ಸಲ್ಲುತ್ತದೆ. ಇಂಥ ಹಲವು ಮೈಲುಗಲ್ಲುಗಳನ್ನು ಸ್ಥಾಪಿಸಿ, ಹೆದ್ದಾರಿಯನ್ನು ರೂಪಿಸುವ ಉದ್ದೇಶದಿಂದ "ಸಮಗ್ರ ಸ್ವರವಚನ ಸಾಹಿತ್ಯ ಪ್ರಕಟನ ಯೋಜನೆ"ಯನ್ನು ಕೈಗೆತ್ತಿಕೊಳ್ಳಲಾಗಿದ್ದು, ಇದರ ಅಂಗವಾಗಿ ೧೯೯೫ ನವೆಂಬರ್‌ನಲ್ಲಿ ಈ ಕೆಳಗಿನ ೫ ಸ್ವರವಚನ ಸಂಪುಟಗಳನ್ನು ಪ್ರಕಟಿಸಲಾಗಿದೆ:

೧. ಸ್ವರವಚನ ಸಂಪುಟ: ಒಂದು (ಬಿಡಿ ಸ್ವರವಚನ) - ಸಂ. ಎಸ್.ಶಿವಣ್ಣ

೨. ಸ್ವರವಚನ ಸಂಪುಟ: ಎರಡು (ಬಿಡಿ ಸ್ವರವಚನ) - ಸಂ. ಎಸ್.ಶಿವಣ್ಣ

೩. ಸ್ವರವಚನ ಸಂಪುಟ: ಮೂರು (ಕಲಿಬಸವೇಶ್ವರನ ಸ್ವರವಚನ) - ಜಿ.ಜಿ. ಮಂಜುನಾಥನ್

೪. ಸ್ವರವಚನ ಸಂಪುಟ: ನಾಲ್ಕು ( ಬಿಡಿ ಸ್ವರವಚನ) - ವೈ.ಸಿ. ಭಾನುಮತಿ

೫. ಸ್ವರವಚನ ಸಂಪುಟ: ಐದು ( ನೀಲಗ್ರೀವನ ಸ್ವರವಚನ) - ಕೆ.ಆರ್. ಶೇಷಗಿರಿ

ಈ ಐದೂ ಸಂಪುಟಗಳು ಸೇರಿ (೨೬೭+೩೦೦+೧೨೮+೨೪೭+೨೯೯) ಒಟ್ಟು ೧೨೪೧ ಸ್ವರವಚನಗಳು ಏಕಕಾಲಕ್ಕೆ ಪ್ರಕಟವಾದುದು ಕರ್ನಾಟಕದ ಸ್ವರವಚನ ಪ್ರಕಟನೆಯ ಇತಿಹಾಸದಲ್ಲಿಯೇ ಒಂದು ದಾಖಲೆ. ಈ ೫ ಸಂಪುಟಗಳ ಬಿಡುಗಡೆ ಕಾರ್ಯಕ್ರಮದ ಅಂಗವಾಗಿ ೧೮, ೧೯ ನವೆಂಬರ್ ೧೯೯೫ರಂದು "ಸ್ವರವಚನ ಸಾಹಿತ್ಯ ವಿಚಾರ ಸಂಕಿರಣ"ವನ್ನು ಹೀಗೆ ಹಮ್ಮಿಕೊಳ್ಳಲಾಗಿದ್ದಿತು:

## ಗೋಷ್ಠಿ: ಒಂದು

೧. ಸ್ವರವಚನಗಳ ಉಗಮ-ಸ್ವರೂಪ ಲಕ್ಷಣ: ವೀರಣ್ಣ ರಾಜೂರ

೨. ಅಪ್ರಕಟಿತ ಸ್ವರವಚನಗಳು: ಎಸ್. ಶಿವಣ್ಣ

೩. ಪ್ರಕಟಿತ ಸ್ವರವಚನ ಸಾಹಿತ್ಯ: ಗೌ.ಮ. ಉಮಾಪತಿಶಾಸ್ತ್ರಿ

೪. ಸ್ವರವಚನ: ಹಾಡುವ-ಪ್ರಸಾರಮಾಡುವ ಬಗೆ: ಸದಾನಂದ ಕನವಳ್ಳಿ

## ಗೋಷ್ಠಿ: ಎರಡು

೧. ಸ್ವರವಚನದ ವಸ್ತುಸ್ವರೂಪ: ಜಿ.ಎ. ಶಿವಲಿಂಗಯ್ಯ

೨. ಸ್ವರವಚನದ ಸಾಹಿತ್ಯಸ್ವರೂಪ: ಈಶ್ವರಯ್ಯ ಮಠ

೩. ಸ್ವರವಚನದ ಸಂಗೀತಸ್ವರೂಪ: ಸರ್ವಮಂಗಳಾಶಂಕರ್

೪. ಸ್ವರವಚನ - ಛಂದೋಸ್ವರೂಪ: ಬಿ.ವಿ. ಮಲ್ಲಾಪುರ

## ಗೋಷ್ಠಿ: ಮೂರು

೧. ಬಸವಯುಗದ ಸ್ವರವಚನ ಸಾಹಿತ್ಯ: ಎಂ.ಬಿ. ನೇಗಿನಹಾಳ

೨. ನೂರೊಂದು ವಿರಕ್ತಯುಗದ ಸ್ವರವಚನ ಸಾಹಿತ್ಯ: ಬಿ.ಆರ್. ಹಿರೇಮಠ

೩. ತೋಂಟದ ಸಿದ್ಧಲಿಂಗಯುಗದ ಸ್ವರವಚನಸಾಹಿತ್ಯ: ಶ್ರೀಮತಿ ವೈ.ಸಿ. ಭಾನುಮತಿ

೪. ತೋಂಟದ ಸಿದ್ಧಲಿಂಗೋತ್ತರ ಕಾಲೀನ ಸ್ವರವಚನ ಸಾಹಿತ್ಯ: ಜಿ.ಜಿ. ಮಂಜುನಾಥನ್

## ಗೋಷ್ಠಿ: ನಾಲ್ಕು

೧. ಹೈದ್ರಾಬಾದ ಕರ್ನಾಟಕದ ಮೌಖಿಕ ಸ್ವರವಚನಗಳು: ವೀರಣ್ಣ ದಂಡೆ

೨. ಮುಂಬಯಿ ಕರ್ನಾಟಕದ ಮೌಖಿಕ ಸ್ವರವಚನಗಳು: ಶ್ರೀರಾಮ ಇಟ್ಟಣ್ಣವರ

೩. ಮೈಸೂರು ಕರ್ನಾಟಕದ ಮೌಖಿಕ ಸ್ವರವಚನಗಳು: ಡಿ.ಎಂ. ಮಹಾದೇವಮೂರ್ತಿ

೪. ಮದ್ರಾಸ ಕರ್ನಾಟಕದ ಮೌಖಿಕ ಸ್ವರವಚನಗಳು: ಬಸವರಾಜ ಮಲಶೆಟ್ಟಿ*

---

* ಈ ವಿಷಯಕುರಿತು ಪ್ರಬಂಧ ಬರೆದುಕೊಟ್ಟವರು ಹೊಸಪೇಟೆ ಕಾಲೇಜಿನ ಕನ್ನಡ ಅಧ್ಯಾಪಕ ಡಾ| ಮೃತ್ಯುಂಜಯ ರುಮಾಲೆ.

ಪೂಜ್ಯ ಜಗದ್ಗುರು ಶ್ರೀ ಮಹಾಶಿವರಾತ್ರಿ ದೇಶಿಕೇಂದ್ರ ಸ್ವಾಮಿಗಳ ಸನ್ನಿಧಿಯಲ್ಲಿ ಜರುಗಿದ ಈ ಗೋಷ್ಠಿಗಳ 'ಉದ್ಘಾಟನೆ'ಗೆ ಡಾ. ಎಲ್. ಬಸವರಾಜು ಅಧ್ಯಕ್ಷರಾಗಿ, ಡಾ. ಸಾ.ಶಿ. ಮರುಳಯ್ಯ ಉದ್ಘಾಟಕರಾಗಿ ಆಗಮಿಸಿದ್ದರು. ಶ್ರೀ ನೆಲಮನೆ ದೇವೇಗೌಡರು ಐದೂ ಸ್ವರವಚನ ಸಂಪುಟಗಳನ್ನು ಬಿಡುಗಡೆ ಮಾಡಿದರು. ಪೂಜ್ಯ ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರಸ್ವಾಮಿಗಳ ಸನ್ನಿಧಿಯಲ್ಲಿ ಜರುಗಿದ ಈ ಕಾರ್ಯಕ್ರಮದ ಸಮಾರೋಪ ಡಾ. ಎಂ.ಎಂ. ಕಲಬುರ್ಗಿ ಅವರಿಂದ ಪೂರೈಸಲ್ಪಟ್ಟಿತು. ಅಂದಿನ ಅತಿಥಿಗಳು ಶ್ರೀ ಗೊ.ರು. ಚನ್ನಬಸಪ್ಪ ಅವರು.

ಮೇಲೆ ಪ್ರಸ್ತಾಪಿಸಿದ ಗೋಷ್ಠಿಗಳಲ್ಲಿ ಮಂಡಿಸಿದ ಪ್ರಬಂಧಗಳ ಮೂಲಕ ಸ್ವರವಚನದ ಎಲ್ಲ ಆಯಾಮಗಳ ಅಧ್ಯಯನ ಜರುಗಬೇಕೆಂಬುದು ನಮ್ಮ ಉದ್ದೇಶವಾಗಿದ್ದಿತು. ಹೀಗಾಗಿ ಅವುಗಳನ್ನು ಸಿದ್ಧಾಂತ, ಸಾಹಿತ್ಯ, ಚರಿತ್ರೆ ಇತ್ಯಾದಿ ನೆಲೆಗಳಿಂದ ನೋಡಿದ ವಿವೇಚನೆ ಇಲ್ಲಿದೆ. ಸ್ವರವಚನಗಳ ಹುಟ್ಟು, ಬೆಳವಣಿಗೆ, ವಸ್ತು ಇತ್ಯಾದಿಗಳನ್ನು ಕುರಿತು ನಮ್ಮ ನಾಡಿನಲ್ಲಿ ನಡೆದ ಮೊದಲ ವಿಚಾರಸಂಕಿರಣ ಇದಾಗಿದೆ.

ಸಾಹಿತ್ಯದ ಸೃಷ್ಟಿ, ಪೋಷಣೆ, ಪ್ರಸಾರ ಮಠಗಳ ಕರ್ತವ್ಯವಾಗಿದ್ದು, ಈ ಕರ್ತವ್ಯಗಳನ್ನು ಮೊದಲಿನಿಂದಲೂ ಉನ್ನತ ರೀತಿಯಲ್ಲಿ ಪೂರೈಸುತ್ತ ಬಂದ ಕೀರ್ತಿ ಸುತ್ತೂರು ಶ್ರೀ ಶಿವರಾತ್ರೀಶ್ವರ ಮಠಕ್ಕೆ ಸಲ್ಲುತ್ತದೆ. ಈಗ ಈ ಜಗದ್ಗುರುಪೀಠದ ಅಧ್ಯಕ್ಷರಾಗಿರುವ ಪೂಜ್ಯ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಸಾಹಿತಿಗಳೂ ಸಾಹಿತ್ಯಭಕ್ತರೂ ಆಗಿರುವ ಕಾರಣ ಉಪನ್ಯಾಸ, ವಿಶೇಷೋಪನ್ಯಾಸ, ವಿಚಾರಸಂಕಿರಣ, ಕಮ್ಮಟ, ಪ್ರಕಟನೆ ಇತ್ಯಾದಿ ಕಾರ್ಯಗಳನ್ನು ಯೋಜನಾಬದ್ಧವಾಗಿ ಮುನ್ನಡೆಸುತ್ತಲಿದ್ದಾರೆ. ಈ ಮಹಾಮಣಿಹದ ಭಾಗವಾಗಿರುವ "ಸಮಗ್ರ ಸ್ವರವಚನಸಾಹಿತ್ಯ ಪ್ರಕಟನ ಯೋಜನೆ"ಯ ಮಂತ್ರಶಕ್ತಿಯೆನಿಸಿದ ಪೂಜ್ಯರಿಗೆ ಭಕ್ತಿಪೂರ್ವಕ ಪ್ರಣಾಮಗಳು.

ವಿಚಾರಸಂಕಿರಣದಲ್ಲಿ ಭಾಗವಹಿಸಿದ ವಿದ್ವಾಂಸಮಿತ್ರರಿಗೂ, ಮುದ್ರಣ ಕಾರ್ಯದಲ್ಲಿ ನೆರವಾದ ಡಾ. ವೀರಣ್ಣ ರಾಜೂರ ಅವರಿಗೂ ಅಕ್ಷರ ಜೋಡಣೆ ಪೂರೈಸಿದ ಧಾರವಾಡದ ಅಖಿಲ ಗ್ರಾಫಿಕ್ಸ್‌ನವರಿಗೂ, ಮುದ್ರಿಸಿದ ಚನಕ ಇಂಪ್ರೆಷನ್ಸ್‌ನ ಮಾಲೀಕರಿಗೂ ನಾವು ಋಣಿಯಾಗಿದ್ದೇವೆ.

೭ ಜನವರಿ ೧೯೯೭ — ಎಂ. ಎಂ. ಕಲಬುರ್ಗಿ

# ಪರಿವಿಡಿ

# ಸ್ವರವಚನಗಳ ಉಗಮ-ಸ್ವರೂಪ-ಲಕ್ಷಣ

*ವೀರಣ್ಣ ರಾಜೂರ*

'ಸ್ವರವಚನ' ಶರಣರು ಕನ್ನಡ ಹಾಡುಗಬ್ಬ ಪರಂಪರೆಗೆ ಕೊಟ್ಟ ವಿಶಿಷ್ಟ ಕೊಡುಗೆ. ಇದರ ಉಗಮ-ವಿಕಾಸ,ಸ್ವರೂಪ - ಲಕ್ಷಣ- ಪರಂಪರೆ ಕುರಿತು ಈವರೆಗೆ ವ್ಯವಸ್ಥಿತವಾದ ಅಧ್ಯಯನ ನಡೆದಿಲ್ಲ. ತಾತ್ವಿಕ, ಸಾಮಾಜಿಕ, ಸಾಹಿತ್ಯಿಕ ನೆಲೆಗಳಲ್ಲಿ ತಲಸ್ಪರ್ಶಿಯಾದ ವಿಚಾರ ವಿಮರ್ಶೆ ಹಾಗೂ ಮೌಲ್ಯಮಾಪನ ನಡೆದು ಇದರ ನಿಜವಾದ ಸ್ಥಾನ ಮಾನಗಳನ್ನು ಗುರುತಿಸಲಾಗಿಲ್ಲ. ಆದರೆ ಕೆಲವು ವಿದ್ವಾಂಸರು[೧] ನೇರವಾಗಿ ಮತ್ತೆ ಕೆಲವರು ಪ್ರಾಸಂಗಿಕವಾಗಿ ಈ ಕುರಿತು ಕೆಲವು ಸಂಗತಿಗಳನ್ನು ತಿಳಿಸಿರುವುದು; ಸ್ವರವಚನಗಳ ಸಂಗ್ರಹ - ಪರಿಷ್ಕರಣ ಪ್ರಕಟಣ ಕಾರ್ಯ ನಡೆದು ಕೆಲವು ಕೃತಿಗಳು ಬೆಳಕಿಗೆ ಬಂದಿರುವುದು[೨] ಆಶಾದಾಯಕ ಸಂಗತಿಯಾಗಿದೆ. ಹೀಗೆ ಈವರೆಗೆ ವ್ಯಕ್ತಪಡಿಸಿದ ವಿದ್ವಾಂಸರ ಅಭಿಪ್ರಾಯಗಳನ್ನು ಹಾಗೂ ಪ್ರಕಟಿತ ಸ್ವರವಚನಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಒಟ್ಟು ಸ್ವರವಚನ ಸಾಹಿತ್ಯದ ಉಗಮ-ವಿಕಾಸ, ಸ್ವರೂಪ-ಲಕ್ಷಣಗಳನ್ನು ಸ್ಥೂಲವಾಗಿ ಇಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ.

**ಹೆಸರು:**

'ಸ್ವರವಚನ'ವು ಪದ, ಪದನು, ಸ್ವರಪದ, ಬೆಡಗಿನ ಸ್ವರಪದ, ಅನುಭಾವಪದ, ಸ್ವರಬೊಲ್ಲಿ, ಗೀತ, ವಚನ, ರಾಗ ಲಲಿತ ವಚನ, ಸ್ವರವಚನ ಎಂದು ವಿವಿಧ ನಾಮಾಂತರಗಳಿಂದ ಗುರುತಿಸಿಕೊಳ್ಳುತ್ತ ಬಂದಿದೆ.

ಮಹಾಲಿಂಗದೇವ (೧೪೩೦) ಮೊದಲಬಾರಿಗೆ ತನ್ನ ಏಕೋತ್ತರಶತಸ್ಥಲ ಮತ್ತು ಸೂಕ್ಷ್ಮ ಮಿಶ್ರಷಟ್‌ಸ್ಥಲ ಕೃತಿಗಳಲ್ಲಿ ಸ್ಥಲವೊಂದಕ್ಕೆ ಒಂದರಂತೆ ಬಳಸಿದ ಸ್ವರವಚನಗಳಿಗೆ 'ಆ ಸ್ಥಲದ ನಿರ್ದೇಶನದ ಪದನು' ಎಂದು ಕರೆಯುತ್ತಾನೆ. ಅದೇ ಕಾಲದ ಶಿವಗಣ ಪ್ರಸಾದಿ ಮಹಾದೇವಯ್ಯ ತನ್ನ ಶೂನ್ಯಸಂಪಾದನೆಯಲ್ಲಿ ವಚನಗಳ ಮಧ್ಯ ಸ್ವರವಚನಗಳನ್ನು

೧. ಡಾ. ಎಲ್. ಬಸವರಾಜು, ಡಾ. ಚಿದಾನಂದಮೂರ್ತಿ, ಡಾ. ವಿ. ಶಿವಾನಂದ, ಡಾ. ಎಂ.ಎಂ. ಕಲಬುರ್ಗಿ, ಡಾ. ವೀರಣ್ಣ ರಾಜೂರ ಮುಂ.

೨. ಈ ದಿಸೆಯಲ್ಲಿ ಗದುಗಿನ ತೋಂಟದಾರ್ಯಮಠ, ಮೈಸೂರಿನ ಸುತ್ತೂರುಮಠ ಮಾಡುತ್ತಿರುವ ಕಾರ್ಯ ಗಮನಾರ್ಹವೆನಿಸಿದೆ.

ಬಳಸಿಕೊಂಡು ಅವುಗಳಿಗೆ 'ಪದಂಗಳು' ಎಂದು ಕರೆದಿದ್ದಾನೆ. ಅನಂತರ ಬಂದ ಮೂರು ಶೂನ್ಯಸಂಪಾದನೆಗಳಲ್ಲಿಯೂ[೬] 'ಪದಂಗಳು' ಎಂಬ ನಾಮನಿರ್ದೇಶನವೇ ಮುಂದುವರಿದಿದೆ. ಕೇವಲ ಸ್ವರವಚನಗಳಿಂದ ಸಂಕಲಿಸಿದ ಶಿವಯೋಗಪ್ರದೀಪಿಕೆಯಲ್ಲಿ ಗೀತ, ಸ್ವರಬೊಲ್ಲಿ, ಬೆಡಗಿನ ಸ್ವರಬೊಲ್ಲಿ ಎಂದು ಇದನ್ನು ಗುರುತಿಸಿದರೆ, ಗಣವಚನ ರತ್ನಾವಳಿಯಲ್ಲಿ ವಚನ, ರಾಗ ಲಲಿತ ವಚನ, ಸ್ವರವಚನ ಎಂದು ಮೂರು ವಿಧವಾಗಿ ಹೆಸರಿಸಲಾಗಿದೆ. ಸ್ವರವಚನಗಳನ್ನು ಅಪ್ರಧಾನವಾಗಿ, ವಚನಗಳನ್ನು ಪ್ರಧಾನವಾಗಿ ಅಳವಡಿಸಿಕೊಂಡ ಪರಮಮೂಲ ಜ್ಞಾನ ಷಟ್‌ಸ್ಥಲ, ವೀರಶೈವ ಚಿಂತಾಮಣಿಗಳಲ್ಲಿ 'ವಚನ' ಎಂದು, ಶೀಲಸಂಪಾದನೆ, ಜ್ಞಾನಷಟ್‌ಸ್ಥಲಸಾರ, ಚಿದೈಶ್ವರ್ಯ ಚಿದಾಭರಣಗಳಲ್ಲಿ 'ಸ್ವರವಚನ' ಎಂದು, ಚೆನ್ನಬಸವಣ್ಣನವರ 'ಅನುಭಾವ ಷಟ್‌ಸ್ಥಲದ ವಚನಗಳು' ಕೃತಿಯ ಅಂತ್ಯಸ್ಥಲದ ಅಂತ್ಯದಲ್ಲಿ ಕೊಟ್ಟಿರುವ 'ಶಾಂತಮಲಹರಿ' ರಾಗದಲ್ಲಿರುವ ಒಂದು ಹಾಡಿಗೆ 'ಅನುಭಾವಪದ' ಎಂದು ಕರೆಯಲಾಗಿದೆ. ಮುಂದೆ ಬಂದ ನಿಜಗುಣಾದಿ ತತ್ವಪದಕಾರರ ಹಾಡುಗಳಿಗೆ 'ವಚನ'ಗಳೆಂದೇ ಗುರುತಿಸಲಾಗಿದೆ. ಬಿಡಿಯಾಗಿ ಹಸ್ತಪ್ರತಿಗಳಲ್ಲಿ ದೊರೆಯುವ ಕೆಲವು ಸ್ವರವಚನಗಳಿಗೆ ಹಣೆಯ ಮೇಲೆ 'ಸ್ವರಪದ' ಎಂದು ಬರೆದಿರುವುದು ಕಂಡುಬರುತ್ತದೆ.

ಬಸವಾದಿ ಶರಣರು ರಚಿಸಿದ ಅನುಭಾವ ಸಾಹಿತ್ಯಕ್ಕೆ ಒಟ್ಟಾಗಿ ಮೊದಲು 'ವಚನ' ಎಂದು ಕರೆಯುತ್ತಿದ್ದಂತೆ ಕಂಡುರುತ್ತದೆ.[೭] ಡಾ. ಎಂ.ಎಂ. ಕಲಬುರ್ಗಿ ಅವರು ಅಭಿಪ್ರಾಯ ಪಟ್ಟಂತೆ 'ವಚನ' ಎಂಬುದು ನಿರ್ದಿಷ್ಟ ರೂಪ(Form) ಇಲ್ಲವೆ ನಿರ್ದಿಷ್ಟ ವಸ್ತು(Content)ವನ್ನು ನಿರ್ದೇಶಿಸುವುದಿಲ್ಲ. ಅದು ಶುದ್ಧ ಆಚಾರ, ಶುದ್ಧ ವಿಚಾರಗಳಲ್ಲಿ ಅನ್ಯೋನ್ಯತೆಯನ್ನು ಸಾಧಿಸಿದವನ ಅಭಿವ್ಯಕ್ತಿ ಎಂಬುದನ್ನು ನಿರ್ದೇಶಿಸುತ್ತದೆ.[೮] ಹೀಗಾಗಿ ಇಂಥ ವ್ಯಕ್ತಿಗಳ ಅಭಿವ್ಯಕ್ತಿಗಳಾದ ಮುಕ್ತಕರೂಪದ ವಚನ, ರಾಗ ತಾಳ ಸಮನ್ವಿತವಾದ ಹಾಡುಗಳು, ಕಂದ, ತ್ರಿಪದಿ, ಷಟ್ಪದಿ, ಸಾಂಗತ್ಯ ಕಾಲಜ್ಞಾನ-ಎಲ್ಲವನ್ನು 'ವಚನ' ಎಂದು ಕರೆದಿರುವುದು ವೇದ್ಯವಾಗುತ್ತದೆ. ಕಾಲಕ್ರಮದಲ್ಲಿ ಗದ್ಯಗಂಧಿಯಾದ ಮುಕ್ತಕ ರೂಪದ ವಚನಗಳಿಂದ ರಾಗ-ತಾಳ ಸಮನ್ವಿತವಾದ ರಚನೆಗಳನ್ನು ಬೇರ್ಪಡಿಸಿ, ಹಾಡು, ಗೀತ, ಸ್ವರ, ಪದ, ಸ್ವರವಚನ ಎಂದು ಮುಂತಾಗಿ ಕರೆಯತೊಡಗಿದರೆಂದು ಕಾಣುತ್ತದೆ. ಅದರಲ್ಲಿಯೇ ಗೀತ, ಹಾಡು, ಪದ ಎಂದು ಸಾಮಾನ್ಯವಾಗಿ ಎಲ್ಲ ವಿಧದ ಹಾಡುಗಳಿಗೂ ಕರೆಯುವುದರಿಂದ ವಿಶಿಷ್ಟ ಭಾವ, ಭಾಷೆ, ರೂಪ-ಎಲ್ಲಕ್ಕೂ ಮಿಗಿಲಾಗಿ ಹೇಳಿದ ವ್ಯಕ್ತಿಯ ನಡೆನುಡಿಗಳ ಸಾಮರಸ್ಯದ ಹಿನ್ನೆಲೆಯಲ್ಲಿ ರಚಿತವಾದ ಶರಣರ ಹಾಡುಗಳನ್ನು 'ಸ್ವರವಚನ' ಎಂದು ಕರೆಯುವುದು ಹೆಚ್ಚು ಸೂಕ್ತವೆನಿಸುತ್ತದೆ. ಇದರಿಂದ 'ವಚನ'ದ ಅರ್ಥವನ್ನೂ, ಅದರಿಂದ ಭಿನ್ನವಾದ ರೂಪವನ್ನೂ ಈ ಹೆಸರಿನಲ್ಲಿ ಏಕಕಾಲಕ್ಕೆ ಸಮರ್ಥವಾಗಿ ಸಮೀಕರಿಸಿದಂತೆ ಆಗುತ್ತದೆ.

---

೬. ಹಲಗದೇವ, ಗುಮ್ಮಳಾಪುರದ ಸಿದ್ಧಲಿಂಗ, ಗೂಳೂರ ಸಿದ್ಧವೀರಣ್ಣೊಡೆಯರು ರಚಿಸಿದವು.
೭. ನೋಡಿ 'ವಚನ ಅಧ್ಯಯನ' - ವೀರಣ್ಣ ರಾಜೂರ ಪು. ೧೮ ಅ.ಟಿ. ೭.
೮. ಸ್ವರವಚನ ಸಾಹಿತ್ಯ: ಡಾ. ಎಂ.ಎಂ. ಕಲಬುರ್ಗಿ. (ಗೌರವ-ಪು. ೨೦೬).

'ಸ್ವರವಚನ' ಎಂಬುದು 'ಸ್ವರ' ಮತ್ತು 'ವಚನ' ಎಂಬ ಎರಡು ಪದಗಳು ಸೇರಿ ಆದ ಸಮಸ್ತಪದ. 'ಸ್ವರ' ಎಂದರೆ ನಾದ, ಧ್ವನಿ ಎಂದು ಅರ್ಥ.[೬] ಸಂಗೀತ ಪರಿಭಾಷೆಯಲ್ಲಿ "ಸ್ವಕೀಯವಾಗಿ ರಂಜನೆಯನ್ನುಂಟುಮಾಡುವುದು; ಶ್ರುತಿಗೆ ಸರಿಯಾಗಿ ಹೊಂದತಕ್ಕುದಾಗಿಯೂ ಸ್ನಿಗ್ಧವಾಗಿಯೂ ಅನುರಣನಾತ್ಮಕವಾಗಿಯೂ ಇರುವುದು"[೭] ಎಂದು ಅರ್ಥೈಸಲಾಗುತ್ತದೆ. ಶ್ರುತಿಯಿಂದ ಸ್ವರ, ಸ್ವರದಿಂದ ರಾಗ ರೂಪಿತವಾಗಿವೆ. ಈ ರಾಗಬದ್ಧವಾದ ಶರಣರ ರಚನೆಯೇ 'ಸ್ವರವಚನ'. ಅಂದರೆ ರಾಗ-ತಾಳ ಸಮನ್ವಿತವಾಗಿ ಹಾಡಲು ಯೋಗ್ಯವಾದ ಪದ್ಯಪ್ರಕಾರ 'ಸ್ವರವಚನ' ಎಂಬ ಅರ್ಥವನ್ನು ಈ ಪದ ಪ್ರಕಟಿಸುತ್ತದೆ.

ಇನ್ನು 'ಸ್ವರವಚನ' ಎಂಬ ಈ ಪದವನ್ನು ಮೊದಲು ಟಂಕಿಸಿದವರು ಯಾರು? ಎಂಬ ಜಿಜ್ಞಾಸೆಗೆ ತೊಡಗಿದರೆ, ಸ್ವತಃ ಶರಣರೇ ಈ ಹೆಸರನ್ನು ರೂಪಿಸಿ, ರೂಢಿಗೊಳಿಸಿರಬಹುದಾಗಿದೆ. ಸೋಮೇಕಟ್ಟೆ ಚೆನ್ನವೀರಸ್ವಾಮಿಯ (೧೭೪೦) ಒಂದು ಸ್ವರವಚನದಲ್ಲಿ[೮] "ಸ್ವರವಚನವ ಪಾಡೆ ಸಮರಸವನು ಬೇಡೆ" ಎಂಬ ಮಾತು ಬರುತ್ತದೆ. ಇದು ಸ್ವತಃ ಕರ್ತೃವೇ ತನ್ನ ರಚನೆಗೆ ಸ್ವರವಚನವೆಂದು ಕರೆದುಕೊಂಡ, ಸದ್ಯಕ್ಕೆ ದೊರೆತ ಮೊದಲ ಉದಾಹರಣೆ. ಆದರೆ, ಸಂಕಲನಕಾರರಲ್ಲಿ ಈ ಪದವನ್ನು ಮೊದಲು ಬಳಸಿದವನು ಸು. ೧೬೦೦ರಲ್ಲಿದ್ದ ಕಂಬಾಳ ಶಾಂತಮಲ್ಲೇಶ.[೯]

ಮುಕ್ತಕ ರೂಪದ ವಚನಗಳಿಗೆ 'ಬೊಲ್ಲಿಯ ವಚನ' ಎಂದು, ಸ್ವರವಚನಗಳಿಗೆ 'ಸ್ವರಬೊಲ್ಲಿ' ಎಂದು ಕರೆಯುವುದರ ಮೂಲಕ ವಚನ ಮತ್ತು ಹಾಡುಗಳ ಭೇದವನ್ನು ಗುರುತಿಸಲು ಪ್ರಯತ್ನಿಸಿದುದೂ ಉಂಟು.[೧೦] ಆದರೆ ವಚನ-ಸ್ವರವಚನ ಎಂಬ ಪದಗಳಿಗಿರುವ ಸಾಮರಸ್ಯ, ಸಾರ್ಥಕತೆಗಳು ಇವುಗಳಿಗಿಲ್ಲ. ಕಾರಣ ಇನ್ನು ಮುಂದೆ ಮುಕ್ತಕರೂಪದ ಶರಣರ ರಚನೆಗಳನ್ನು 'ವಚನ' ಎಂದು, ಸ್ವರಸಹಿತವಾದ ಹಾಡುಗಳನ್ನು 'ಸ್ವರವಚನ' ಎಂದು ಖಚಿತವಾಗಿ ಬಳಸುವುದು ಯಥಾರ್ಥವೆನಿಸುತ್ತದೆ.

---

೬. ಸಂಕ್ಷಿಪ್ತ ಕನ್ನಡ ನಿಘಂಟು (ಕಸಾಪ) ಪು. ೯೦೮.

೭. ಕರ್ನಾಟಕ ಸಂಗೀತ ಸುಧಾ: ವಿ. ರಾಮರತ್ನಂ ಮತ್ತು ವಿ.ಎಸ್. ಸಂಪತ್ಕುಮಾರಾಚಾರ್ಯ (ಮೈವಿವಿ). ಪು. ೧೧.

೮. ಇತ್ತೀಚೆಗೆ ದೊರೆತ ಹತ್ತು ಸ್ವರವಚನಗಳು: ವೀರಾ (ಬ.ಪ. ೧-೧; ೯೭೪) ಸ್ವವ. ೮. ನುಡಿ. ೩

೯. ಗಣವಚನರತ್ನಾವಳಿ: ಸಂ. ಎಸ್. ಉಮಾಪತಿ, ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯ ಮಠ ಗದಗ,

- ಇದಕ್ಕೂ ಪೂರ್ವದಲ್ಲಿ ರಚಿತವಾದ ಜಕ್ಕಣಾರ್ಯನ 'ಏಕೋತ್ತರ ಶತಸ್ಥಲ'ಕ್ಕೆ ಕೆಲವು ಹಸ್ತಪ್ರತಿಗಳಲ್ಲಿ 'ಏಕೋತ್ತರ ಶತಸ್ಥಲ ಸ್ವರವಚನ' ಎಂದು ಬರೆದುದು ಕಂಡುಬರುತ್ತದೆ. (ಪ್ರಾ.ದೇ. ಕಾ.ಕ.ಸಾ. ಪು. ೨೪೯)

೧೦. 'ನಂಜುಂಡ ಶಿವಾ' ಅಂಕಿತದ ರಚನೆಗಳಲ್ಲಿ ವಚನಗಳಿಗೆ 'ಬೊಲ್ಲಿಯ ವಚನ', ಹಾಡುಗಳಿಗೆ 'ಸ್ವರವಚನ' ಎಂದು ಕರೆಯಲಾಗಿದೆ. (ನಂಜುಂಡ ಶಿವಾ ಅಂಕಿತದಲ್ಲಿ ಹೊಸದಾಗಿ ದೊರೆತ ಕೆಲವು ವಚನಗಳು (ಬಸವ ಜರ್ನಲ್ ೩-೨); ಚೆನ್ನಬಸವಣ್ಣನವರ ೧೦ ವಚನಗಳನ್ನು ಆಯ್ದು ಸಂಗ್ರಹಿಸಿ ಅವುಗಳಿಗೆ 'ಬೊಲ್ಲಿಯ ವಚನ' ಎಂದು ಕರೆಯಲಾಗಿದೆ. (ಚೆನ್ನಬಸವಣ್ಣನವರ ಬೊಲ್ಲಿಯ ವಚನಗಳು- ಬ.ಪ. ೧೨-೫); ಶಿವಯೋಗ ಪ್ರದೀಪಿಕೆಯ ಆರಂಭದ ಷಟ್ಪದಿಗೆ 'ಟೀಕಾ ಸ್ವರಬೊಲ್ಲಿ' ಎಂದೂ ಅಂತ್ಯ ಗದ್ಯದಲ್ಲಿ 'ಬೆಡಗಿನ ಸ್ವರಪದಗಳು' ಎಂದೂ ಕರೆಯಲಾಗಿದೆ.

## ಉಗಮ-ವಿಕಾಸ:

ಸ್ವರವಚನಗಳ ಉಗಮ ಎಂದು? ಯಾರಿಂದ? ಎಂಬ ವಿಷಯದ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಈವರೆಗೆ ಮೂರು ಬಗೆಯ ಅಭಿಪ್ರಾಯಗಳು ಮಂಡಿತವಾಗಿವೆ. ಅವುಗಳನ್ನು ಮೊದಲು ಉಲ್ಲೇಖಿಸಿ, ಈಚೆಗೆ ದೊರೆತ ಹೆಚ್ಚಿನ ಆಧಾರಾಂಶಗಳನ್ನು ಗಮನದಲ್ಲಿಟ್ಟುಕೊಂಡು, ಈ ಅಭಿಪ್ರಾಯಗಳ ಸತ್ಯಾಸತ್ಯತೆಯನ್ನು ವಿಮರ್ಶಿಸಿ, ಸ್ವರವಚನಗಳ ಉಗಮದ ಸ್ಪಷ್ಟ ಚಿತ್ರವನ್ನು ಕೊಡಲು ಪ್ರಯತ್ನಿಸುತ್ತೇನೆ.

ಡಾ. ಎಲ್. ಬಸವರಾಜು ಅವರು (೧೯೬೩) "ಇಡೀ ಭಾರತೀಯ ಸಾಹಿತ್ಯಕ್ಕೆ ವಚನವೆಂಬ ಅಭೂತಪೂರ್ವ ಕಾಣಿಕೆಯನ್ನು ಕೊಟ್ಟ ಶಿವದಾಸರು ತಮ್ಮ ಕಾಲಕ್ಕೆ ಅಥವಾ ತತ್ಪೂರ್ವಕ್ಕೆ ಕನ್ನಡದಲ್ಲಿಲ್ಲದಿದ್ದ ಹಾಡುಗಳನ್ನು ಬರೆಯಲೂ ಮೊದಲಿಗರಾದರು. ಶಿವಶರಣರು ಬರೆದ ಈ ಹಾಡುಗಳು ಪಲ್ಲವದಿಂದ ಕೂಡಿ ಬೇರೆ ಬೇರೆ ರಾಗಗಳಲ್ಲಿ ಹಾಡಲು ಅನುವರಿತು ರಚಿತವಾದ ಗೇಯಕೃತಿಗಳು. ಮುಂದೆ ೧೫-೧೬ನೆಯ ಶತಮಾನಗಳಲ್ಲಿ ಹರಿದಾಸರು ಯಾವ ಕೀರ್ತನ ಸಾಹಿತ್ಯ ಪ್ರಕಾರದಿಂದ ಇಡೀ ದಕ್ಷಿಣ ಭಾರತದ ಸಂಗೀತ ಮತ್ತು ಸಾಹಿತ್ಯ ಪ್ರಪಂಚಗಳೆರಡರಲ್ಲೂ ಅದ್ವಿತೀಯ ಕೀರ್ತಿಯನ್ನು ಗಳಿಸಿದರೋ ಆ ಕೀರ್ತನ ಪ್ರಕಾರಕ್ಕೆ ೧೨ನೆಯ ಶತಮಾನದ ಬಸವಾದಿ ಶಿವದಾಸರ ಈ ಗೀತಾ (ಹಾಡುಗಳು) ಪ್ರಕಾರವು ಮೂಲವೂ ಮಾದರಿಯೂ ಆಗಿದ್ದವು.[೧೧]

"ಮಹಾಲಿಂಗನಾಗಲಿ, ಜಕ್ಕಣ್ಣನಾಗಲಿ ಬಸವಾದಿ ಪ್ರಮಥರ ವಚನ (ಹಾಡು)ಗಳನ್ನು ಪಿಂಡಾದಿ ಜ್ಞಾನಶೂನ್ಯಾಂತವಾದ ನೂರೊಂದು ಸ್ಥಲದ ಪರಿವಿಡಿಯಲ್ಲಿ ಜೋಡಿಸಿರುವರೇ ಹೊರತು, ಆ ವಚನಗಳನ್ನಾಗಲಿ, ಆ ಹಾಡುಗಳನ್ನಾಗಲಿ ರಚಿಸಿದವರು ಅವರಲ್ಲ. ವಚನಗಳು ಹೇಗೆ ಬಸವಾದಿ ಶರಣರಿಂದ ರಚಿತವಾದುವೋ ಹಾಗೆಯೇ ಹಾಡುಗಳೂ ಆ ಬಸವಾದಿ ಪ್ರಮಥರಿಂದಲೇ ರಚಿತವಾದವು. ಅವನ್ನು ಸಂಕಲನ ಮಾಡಿ ಒಂದು ಕ್ರಮದಲ್ಲಿ ಜೋಡಿಸಿ ಅವುಗಳ ಅಭಿಪ್ರಾಯವನ್ನೂ ಆಯಾ ಸ್ಥಲದ ಸ್ವರೂಪವನ್ನೂ ಸ್ಪಷ್ಟಪಡಿಸುವುದಕ್ಕಾಗಿ ಪ್ರತಿಯೊಂದು ಸ್ಥಲದ ಮೊದಲಿಗೆ ಕೊಟ್ಟಿರುವ ಸೂತ್ರ(ಗದ್ಯ) ಮಾತ್ರ ಮಹಾಲಿಂಗ ಮತ್ತು ಜಕ್ಕಣ್ಣರು ರಚಿಸಿದುದು" ಎಂದು ಹೇಳಿ, ಏಕೋತ್ತರಶತಸ್ಥಲಕಾರರ ಒಕ್ಕಣೆ ಮತ್ತು ಜಕ್ಕಣ್ಣನ ಏಕೋತ್ತರಶತಸ್ಥಲಕ್ಕೆ ಬರೆದ ವ್ಯಾಖ್ಯಾನಕಾರರ ಹೇಳಿಕೆಗಳ ಆಧಾರದಿಂದ ತಮ್ಮ ಮಾತಿಗೆ ಸಮರ್ಥನೆಯನ್ನೊದಗಿಸಿದ್ದಾರೆ.[೧೨]

ಡಾ. ಎಲ್. ಬಸವರಾಜು ಅವರಿಗಿಂತ ಪೂರ್ವದಲ್ಲಿ (೧೯೪೯) ಪ್ರೊ. ಶಿ.ಶಿ. ಬಸವನಾಳ ಅವರು ಸರ್ಪಭೂಷಣರ 'ಕೈವಲ್ಯ ಕಲ್ಪವಲ್ಲರಿ' ಕೃತಿಯ ಪ್ರಸ್ತಾವನೆಯಲ್ಲಿ "ಹಾಡುಗಬ್ಬಗಳಿಗೆ ಮೊದಲಾದುದು ದಾಸಸಾಹಿತ್ಯದಿಂದಲೇ ಎಂದು (೧೪-೧೫ ಶತಮಾನ) ಸಾಮಾನ್ಯವಾಗಿ ಹೇಳುವುದುಂಟು. ಆದರೆ ಈ ಊಹೆಗೆ ಬಲವಾದ, ನಂಬಲರ್ಹವಾದ ಆಧಾರಗಳಾವವೂ ಇಲ್ಲ .... ಕನ್ನಡ ಸಾಹಿತ್ಯದ ಆರಂಭಕಾಲದಿಂದ ವೀರಶೈವ ಸಾಹಿತ್ಯದ

---

೧೧. ಶಿವದಾಸ ಗೀತಾಂಜಲಿ: ಪೀಠಿಕೆ ಪು.೭೭.

೧೨. ಅದೇ.

ಉದಯದ ವರೆಗೆ ನಿಜವಾದ ಹಾಡುಗಬ್ಬಗಳು ನಮ್ಮ ಕಣ್ಣಿಗೆ ಬೀಳುವುದಿಲ್ಲವೆಂದೇ ಹೇಳಬಹುದು.... ಹಾಡುಗಳ ರಚನೆಯಲ್ಲಿಯೂ ವೀರಶೈವ ಬರಹಗಾರರಿಗೇ ಅಗ್ರಸ್ಥಾನ ಸಲ್ಲುವುದು. ಅಷ್ಟೇ ಅಲ್ಲ ಈ ಕಾರ್ಯದಲ್ಲಿಯೂ ಬಸವಾದಿಗಳೇ ಪುರಸ್ಕರ್ತರು ಎಂಬುದು ಕರ್ನಾಟಕ ಕವಿಚರಿತೆಯನ್ನು ಅವಲೋಕಿಸುವುದರಿಂದ ಸ್ಪಷ್ಟವಾಗಿ ಗೊತ್ತಾಗುತ್ತದೆ." ಎಂದು ಚೆನ್ನಬಸವಣ್ಣ, ಪ್ರಭುದೇವರ ಮಂತ್ರಗೋಪ್ಯ, ಪದಮಂತ್ರಗೋಪ್ಯ, ಸಿದ್ಧರಾಮ, ಅಕ್ಕಮಹಾದೇವಿಯರ ತ್ರಿವಿಧಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಹೇಳುತ್ತಾರೆ.[೧೩]

ಡಾ. ಎಂ. ಚಿದಾನಂದಮೂರ್ತಿ (೧೯೭೫) ಅವರು "ವಚನಕಾರರಾದ ಬಸವ ಅಲ್ಲಮ ಅಕ್ಕಮಹಾದೇವಿ ಮುಂತಾದವರು ಬರೆದ ಹಾಡುಗಳು ಅವರ ಅಂಕಿತದೊಡನೆ ದೊರೆತಿವೆ. ಈ ಹಾಡುಗಳನ್ನು ಅವರೇ ರಚಿಸಿದರೆಂಬುದಕ್ಕೆ ಆಧಾರಗಳಿಲ್ಲ. ಅವರು ಬರೆದ ವಚನಗಳನ್ನು ಈಚಿನವರು ತಮ್ಮ ಅನುಕೂಲಕ್ಕಾಗಿ ಹಾಡುಗಳಿಗೆ ತಿರುಗಿಸಿಕೊಂಡರು ಎಂಬುದಕ್ಕೆ ಆಧಾರಗಳಿವೆ"[೧೪] ಎಂದು ಹೇಳಿ ಚೆನ್ನಬಸವಣ್ಣ ಮತ್ತು ಸಿದ್ಧರಾಮರ ಒಂದೊಂದು ವಚನಗಳನ್ನು ಉದಾಹರಿಸಿ, ಅವು ಹೇಗೆ ಹಾಡುಗಳಾಗಿ ಪರಿವರ್ತನಗೊಂಡವು ಎಂಬುದನ್ನು ತೋರಿಸಿ, "ಮೂಲತಃ ವಚನಗಳಾಗಿದ್ದುವನ್ನು ಈಚಿನವರು ಹಾಡಿಗೆ ತಿರುಗಿಸಿರುವುದು ಸ್ಪಷ್ಟ. ಇಂತಹ ಇನ್ನೂ ಹತ್ತಾರು ಉದಾಹರಣೆಗಳಿವೆ. ಎಂದರೆ ಹಾಡುಗಳು ಒಂದು ದೃಷ್ಟಿಯಿಂದ ಶಿವಶರಣರವೇ; ಇನ್ನೊಂದು ದೃಷ್ಟಿಯಿಂದ ಅವರವಲ್ಲ"[೧೫] ಎಂದು ಅಭಿಪ್ರಾಯಪಡುತ್ತಾರೆ.

ಡಾ. ವಿ. ಶಿವಾನಂದ ಅವರು (೧೯೭೮) ಡಾ. ಎಲ್. ಬಸವರಾಜು ಅವರ ಅಭಿಪ್ರಾಯವನ್ನು ಅಲ್ಲಗಳೆದು, ಸ್ವರವಚನಗಳ ಪುನಶ್ಶೋಧನೆಗೆ ತೊಡಗಿ, ಅವು ಬಸವಾದಿ ಶರಣರಿಂದ ರಚಿತವಾದುವಲ್ಲ, "ಶರಣರ ವಚನಗಳನ್ನು ಸ್ವರವಚನಗಳಲ್ಲಿ ದುಡಿಸಿಕೊಳ್ಳುವ ವಿಶಿಷ್ಟ ಪರಂಪರೆಗೆ ಏಕೋತ್ತರಶತಸ್ಥಲಕಾರರು ಆದ್ಯಪ್ರವರ್ತಕರೆನ್ನಬಹುದು. ಇದನ್ನೇ ಶೂನ್ಯಸಂಪಾದನೆ ಗ್ರಂಥಗಳು ಅನುಸರಿಸಿವೆ"[೧೬] "ಮೂಲತಃ ವಚನಗಳಲ್ಲಿದ್ದ ಲಯ-ಭಾವಗಳಿಗೆ ಸಂಗೀತದ ಲಕ್ಷ್ಯ-ಲಕ್ಷಣಗಳು ಪ್ರಾಪ್ತವಾಗಿ ಸ್ವರವಚನಸಾಹಿತ್ಯವೆಂಬ ಪ್ರಕಾರ ಸ್ವತಂತ್ರವಾಗಿ ೧೫ನೆಯ ಶತಮಾನದಲ್ಲಿ ಬೆಳೆದಿದೆ"[೧೭] ಎಂದು ತಿಳಿಸಿದ್ದಾರೆ.

ಡಾ. ಎಂ.ಎಂ. ಕಲಬುರ್ಗಿ ಅವರು (೧೯೮೭) ಈ ವಾದ-ವಿವಾದಗಳನ್ನು ಗಮನಿಸಿ "೧೭ನೆಯ ಶತಮಾನದ ಶಿವಶರಣರ ಹೆಸರಿನಲ್ಲಿ ಕಂಡುಬರುವ ಸ್ವರವಚನಗಳ ಪ್ರಾಮಾಣಿಕತೆಯ ಬಗ್ಗೆ ಕೆಲವು ವಿದ್ವಾಂಸರು ಸಂದೇಹ ವ್ಯಕ್ತಪಡಿಸುತ್ತಲಿದ್ದಾರೆ. ವಚನಗಳ ಸಾಹಿತ್ಯಗುಣ ಸ್ವರವಚನಗಳಲ್ಲಿ ಇಲ್ಲ. ವಚನಗಳ ಭಾವ-ಭಾಷೆಗಳ ಛಾಯೆ ಒಮ್ಮೊಮ್ಮೆ

---

೧೩. ಕೈವಲ್ಯ ಕಲ್ಪವಲ್ಲರಿ: ಪ್ರಸ್ತಾವನೆ. ಪು. xviii-xx.

೧೪. ವಚನ ಸಾಹಿತ್ಯ: ಪು. ೨೪೩

೧೫. ಅದೇ ಪು. ೨೪೭

೧೬. ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ: ಪು. ೨೨೮

೧೭. ಶಿವದೀಪ್ತಿ: ಪು. ೧೨೮

ಇವುಗಳಲ್ಲಿ ಕಂಡುಬರುವುದರಿಂದ, ಮೂಲ ವಚನಗಳನ್ನು ತರುವಾಯದವರು ಸ್ವರವಚನಗೊಳಿಸಿರಬಹುದು ಎಂಬುದು ಇವರ ವಾದ. ಮೊದಲ ನೋಟಕ್ಕೆ ಇದು ಸರಿ ಎನಿಸಬಹುದಾದರೂ ಇಲ್ಲಿ ಕೆಲವು ಅಂಶಗಳನ್ನು ಅವಶ್ಯ ಗಮನಿಸಬೇಕು" ಎಂದು ಹೇಳಿ ಈ ಕೆಳಗಿನ ಐದು ಅಂಶಗಳನ್ನು ಸೂಚಿಸಿ - ಇವುಗಳ ಹಿನ್ನೆಲೆಯಲ್ಲಿ ವಿದ್ವಾಂಸರು ಇವುಗಳ ಕರ್ತೃತ್ವ ಪ್ರಶ್ನೆಯನ್ನು ಇನ್ನೊಮ್ಮೆ ಪರಿಶೀಲಿಸುವುದು ಅವಶ್ಯ ಎಂದು ತಿಳಿಸುತ್ತಾರೆ.[೧೮]

೧. ಮೂಲತಃ ಸ್ವರವಚನ, ಗೀತಮಾಧ್ಯಮದ ಸಾಹಿತ್ಯ. ಗೀತಮಾಧ್ಯಮವನ್ನು ಬಿಟ್ಟು ಲೇಖನಮಾಧ್ಯಮದ ಮೂಲಕ ನೋಡಿದರೆ ಇವುಗಳ ಸತ್ವ-ಪರಿಣಾಮಗಳಲ್ಲಿ ಕೊರತೆ ಕಾಣುವುದು ಸಹಜ. ಈ ಮಾತು ದಾಸರ ಕೀರ್ತನೆಗಳಿಗೂ, ಜನಪದ ಹಾಡುಗಳಿಗೂ ಅನ್ವಯಿಸುತ್ತದೆ. ಹೀಗಾಗಿ ಇದರ ನಿಜವಾದ ಸ್ವರೂಪ ಕಾಣಬೇಕಾದರೆ ಓದಬಾರದು, ಹಾಡಬೇಕು. 'ನೋಡು ನೋಡು ನೋಡು ನೋಡು ನೋಡು ಲಿಂಗವ' ಎಂಬ ನೀಲಲೋಚನೆಯ ಸ್ವರವಚನವನ್ನು ಒಮ್ಮೆ ಓದಿಸಿ, ಒಮ್ಮೆ ಹಾಡಿಸಿ ಕೇಳಿದಾಗ ಈ ಮಾತಿನ ಸತ್ಯ ಹೊಳೆಯುತ್ತದೆ. ಅಂದರೆ ಒಂದು ಮಾಧ್ಯಮದ ಸಾಹಿತ್ಯವನ್ನು ಇನ್ನೊಂದು ಮಾಧ್ಯಮದಲ್ಲಿಟ್ಟು ನೋಡುವುದು ಸರಿಯಾದ ತೀರ್ಪು ಎನಿಸುವುದಿಲ್ಲ.

೨. ವಚನ, ಸ್ವರವಚನಗಳ ವಸ್ತು ವೀರಶೈವ ತತ್ವ. ಕರ್ತೃ ವೀರಶೈವ ಶರಣರು ಹೀಗಾಗಿ ಇವುಗಳ ಭಾವ ಭಾಷೆಗಳಲ್ಲಿ ಸಮಾನ ಅಂಶಗಳು ಕಂಡುಬರುವುದು ಸಹಜ.

೩. ಹರಿಹರನ ರಗಳೆಗಳಲ್ಲಿ ಬರುವ 'ಆಗಳಾಗಳಿನ ಸಂಗತಿಗಳಿಗೆ ಗೀತಂಗಳಂ ಪಾಡುತ್ತಂ' ಮೊದಲಾದ ಮಾತುಗಳು ವಚನಗಳಂತೆ ಸ್ವರವಚನಗಳಿಗೂ ಅನ್ವಯಿಸುತ್ತದೆ. ಇಲ್ಲಿಯ 'ಗೀತ' ಎಂಬ ಶಬ್ದ ವಚನಕ್ಕಿಂತ ಸ್ವರವಚನಕ್ಕೆ ಹೆಚ್ಚು ಒಪ್ಪುತ್ತದೆ. ಸಿದ್ಧರಾಮನು ಗೀತಗಳನ್ನು ಶುದ್ಧಭೈರವಿಯಲ್ಲಿ ಹಾಡಿದ ಉಲ್ಲೇಖಗಳು ಸಿದ್ಧರಾಮ ಪುರಾಣದಲ್ಲಿ ಬರುತ್ತವೆ.

೪. ಒಂದು ವೇಳೆ ಉತ್ತರಕಾಲೀನರು ವಚನಗಳನ್ನು ಸ್ವರವಚನಗಳನ್ನಾಗಿ ಮಾರ್ಪಡಿಸಿದ್ದರೆ ಪ್ರಮುಖ ಶರಣರ ವಚನಗಳನ್ನು ಮಾತ್ರ ಸ್ವರವಚನಗಳನ್ನಾಗಿಸುವುದು ಸಹಜ. ಆದರೆ 'ಅಪ್ರಮುಖ' ಶರಣರ ಸ್ವರವಚನಗಳೂ ಸಿಗುತ್ತವೆ.

೫. ಕೆಲವರ ಹೆಸರಿನಲ್ಲಿ ವಚನಗಳು ಸಿಗುತ್ತಿಲ್ಲ; ಸ್ವರವಚನಗಳು ಮಾತ್ರ ಸಿಗುತ್ತವೆ.

ಮೇಲೆ ಉಲ್ಲೇಖಿಸಿದ ಐದು ಜನ ವಿದ್ವಾಂಸರಲ್ಲಿ ಪ್ರೊ. ಶಿ.ಶಿ. ಬಸವನಾಳ ಮತ್ತು ಡಾ. ಎಲ್. ಬಸವರಾಜು ಅವರು ೧೨ನೆಯ ಶತಮಾನದ ಬಸವಾದಿ ಶರಣರಿಂದಲೇ ಸ್ವರವಚನ ಹುಟ್ಟುಪಡೆಯಿತೆಂದು ಹೇಳಿದರೆ,[೧೯] ಡಾ. ಎಂ. ಚಿದಾನಂದಮೂರ್ತಿ ಮತ್ತು

೧೮. ಸ್ವರವಚನ ಸಾಹಿತ್ಯ: ಗೌರವ ಪು. ೨೦೬-೨೦೮

೧೯. ಪ್ರೊ. ತೀ. ನಂ. ಶ್ರೀಕಂಠಯ್ಯ ಅವರು ಮಹಾದೇವಿಯಕ್ಕನ ಹಾಡುಗಳನ್ನು ಗುರುತಿಸುತ್ತ ಸ್ವರವಚನಸೃಷ್ಟಿ ೧೨ನೆಯ ಶತಮಾನದಲ್ಲಿಯೇ ಆರಂಭವಾಯಿತು ಎಂಬ ಅರ್ಥ ಬರುವ ಅಭಿಪ್ರಾಯವನ್ನು ಡಾ. ಎಲ್. ಬಸವರಾಜು ಅವರಿಗಿಂತ ಪೂರ್ವದಲ್ಲಿಯೇ ವ್ಯಕ್ತಪಡಿಸಿದ್ದಾರೆ. (ಕಾವ್ಯ ಸಮೀಕ್ಷೆ: ಪು. ೧೧೯)

ಡಾ. ವಿ. ಶಿವಾನಂದ ಅವರು ನಂತರದವರು (ಏಕೋತ್ತರಶತಸ್ಥಲಕಾರರು) ವಚನಗಳನ್ನು ಸ್ವರವಚನಗಳನ್ನಾಗಿ ಪರಿವರ್ತಿಸಿದರು ಎಂದು ಹೇಳುವ ಮೂಲಕ ೧೨ನೆಯ ಶತಮಾನದ ಅದರ ಹುಟ್ಟನ್ನು ಅಲ್ಲಗಳೆದು ೧೫ನೆಯ ಶತಮಾನಕ್ಕೆ ಒಯ್ದು ನಿಲ್ಲಿಸುತ್ತಾರೆ. ಡಾ. ಎಂ.ಎಂ. ಕಲಬುರ್ಗಿ ಅವರು ಐದು ಅಂಶಗಳ ಹಿನ್ನೆಲೆಯಲ್ಲಿ ಅವರ ಅಭಿಪ್ರಾಯಗಳನ್ನು ಪುನರ್ ಪರಿಶೀಲಿಸಬೇಕೆಂದು ಸೂಚಿಸುತ್ತ, ೧೨ನೆಯ ಶತಮಾನದಲ್ಲಿ ಅದರ ಉಗಮ ಆಗಿರಬಹುದೆಂಬುದರತ್ತ ತಮ್ಮ ಒಲವನ್ನು ತೋರುತ್ತಾರೆ.

೧೯೪೧ರಲ್ಲಿ ಪ್ರಕಟವಾದ ಚೆನ್ನವೀರಾರ್ಯನ ಶಿವಯೋಗ ಪ್ರದೀಪಿಕೆಯ ಪ್ರಸ್ತಾವನೆಯಲ್ಲಿ ನಾನು ಡಾ. ಎಲ್. ಬಸವರಾಜು, ಡಾ. ಚಿದಾನಂದಮೂರ್ತಿ ಮತ್ತು ಡಾ.ವಿ. ಶಿವಾನಂದ ಅವರ ಈ ಅಭಿಪ್ರಾಯಗಳನ್ನು ವಿಮರ್ಶಿಸುತ್ತ ಸ್ವರವಚನಗಳ ಉಗಮ ೧೨ನೆಯ ಶತಮಾನದಿಂದಲೇ ಎಂಬ ನನ್ನ ಸ್ಪಷ್ಟ ಅಭಿಪ್ರಾಯವನ್ನು ಸಾಧಾರಪೂರ್ವಕ ತಿಳಿಸಿದ್ದೆ. ಈಗಲೂ ಅದೇ ನಿಲವಿಗೆ ನಾನು ಬದ್ಧನಾಗಿ, ಈಚೆಗೆ ದೊರೆತ ಇನ್ನಷ್ಟು ಆಧಾರಗಳನ್ನು ಸೇರಿಸಿಕೊಂಡು ಅದನ್ನು ಮತ್ತಷ್ಟು ಗಟ್ಟಿಗೊಳಿಸಲು ಪ್ರಯತ್ನಿಸುತ್ತೇನೆ.

ಚೆನ್ನವೀರಾರ್ಯನ (೧೬ಶ.) 'ಶಿವಯೋಗ ಪ್ರದೀಪಿಕೆ' ಮತ್ತು ಕಂಬಾಳ ಶಾಂತಮಲ್ಲೇಶ(೧೬೦೦)ನ 'ಗಣವಚನ ರತ್ನಾವಳಿ' ಕೇವಲ ಸ್ವರವಚನಗಳಿಂದ ಸಂಯೋಜಿಸಿದ ಎರಡು ಮಹತ್ವದ ಕೃತಿಗಳು. ಅವುಗಳಲ್ಲಿ ಬಸವಾದಿ ಶರಣರ ಸ್ವರವಚನಗಳು ಸಮಾವೇಶಗೊಂಡಿದ್ದು ಅವುಗಳ ಕರ್ತೃಗಳು ಸಕಲ ಪುರಾತನರು ಎಂದು ತಿಳಿಸಲಾಗಿದೆ.

ಶಿವಯೋಗ ಪ್ರದೀಪಿಕೆಯ ಆದಿಯ 'ಪೀಠಿಕಾ ಸ್ವರಬೊಲ್ಲಿ' ಎಂಬ ಷಟ್ಪದಿಯಲ್ಲಿ ಹೀಗೆ ಹೇಳಲಾಗಿದೆ:

ಶ್ರೀಮದ್ದೇಶಿಕ ಚೆನ್ನವೀರಾರ್ಯಂ
ಆ ಮಹಾ ಸಕಲಪುರಾತನರ ಗೀತನೆ
ನೇಮಿಸಿಯು ಸೂಚನಾರ್ಥ ಪದಂಗಳವಜಿಂ ಸ್ಥಲವಿಟ್ಟು।
ಈ ಮಹಿಯೊಳು ಪೊಸತೆನೆ ಸಂಗ್ರಹಿಸಿಯು
ಪ್ರೇಮದಿ ಶಿವಲಿಂಗದೇವಂಗೊಜೆದನು
ನಾಮವಿದರ ಶಿವಯೋಗಪ್ರದೀಪಿಕೆ ಶರಣರು ಅವಧರಿಸಿ॥

ಈ ಕೃತಿಯಲ್ಲಿ ೧೮ ಜನ ಶರಣರ ಒಟ್ಟು ೭೩ ಸ್ವರವಚನಗಳು ಸಂಗ್ರಹವಾಗಿವೆ. ಅವರಲ್ಲಿ ೧೧ ಜನ ೧೨ನೆಯ ಶತಮಾನದ ಬಸವಾದಿ ಶರಣರಾದರೆ, ಉಳಿದ ೭ ಜನ ೧೫ನೆಯ ಶತಮಾನಕ್ಕೆ ಸೇರಿದ ಕರಸ್ಥಲನಾಗಿದೇವಾದಿ ನೂರೊಂದು ವಿರಕ್ತರು.

'ಗಣವಚನ ರತ್ನಾವಳಿ'ಯ ಆದಿ ಮತ್ತು ಅಂತ್ಯದ ಕಂದ, ಷಟ್ಪದಿಗಳಲ್ಲಿ ಹೀಗೆ ಹೇಳಲಾಗಿದೆ:

ಇಳೆಗೆ ಗಣವಚನ ರತ್ನಾ-
ವಳಿಯೆಂಬುದು ಪೆಸರಿದರ್ಕೆ ಗುಣ ವಾಗ್ಮಣಿ ಸಂ
ಕುಳದೊಳಗಾಯ್ದೊಂದೊಂದಂ
ವಿಳಸತ್ ಸೂತ್ರಂಗಳಿಂದೆ ಪವಣಿಸಿದುದರಿಂ॥ (ಆದಿ-೩)

ಸ್ಥಳವೊಂದೊಂದರ್ಕೊಂದೊಂ
ದಳವಡೆ ಕಿಱಿದಱೊಳೆ ಸತ್ಪುರಾತರ ವಚನಾ
ವಳಿಯಿಂದೆ ಷೋಡಶೋತ್ತರ
ವಿಳಸ ದ್ವಿಶತ ಸ್ಥಳಂಗಳಿಂ ವಿರಚಿಸುವೆಂ ॥ (ಆದಿ-೭)

"ಷೋಡಶಾಂತ ದ್ವಿಶತ ಸುಸ್ಥಲಂಗಳನೊಲ್ದು
ರೂಢಿಯ ಪುರಾತನರ ವಚನಂಗಳಿಂದರ್ಥ
ಗೂಡಿ ರಂಜಿಸುವಂತೆ ಸಂಗ್ರಹಂಗೈದು ಮಾಡುವೆ...." ॥ (ಆದಿ-೧೬)

ಬಸವೇಶ ನೀಲಾಂಬೆ ಸಿದ್ಧರಾಮಂ ಚನ್ನ
ಬಸವನಲ್ಲಮ ಕರಸ್ಥಲವೀರ ನಾಗಾರ್ಯ
ರಸಮ ಮಾಯಿದೇವಪ್ಪಣ್ಣ ಮಹದೇವಿ ದಾಸಯ್ಯ ಬಹುರೂಪಿ ಚೌಡಂ
ಮಿಸುಪ ಶಾಂತಯ್ಯನಾದಯ್ಯ ಬೋಳೇಶ ಗುರು
ಬಸವ ಶಂಕರದೇವ ನಾಗಾಂಬೆ ಮೊದಲಾದ
ರುಸುರ್ದ ನಾನಾ ರಾಗ ಲಲಿತ ವಚನಂಗಳಿಂ ರಚಿತಮಾಯ್ತೀ ಶಾಸ್ತ್ರವು॥ (ಅಂತ್ಯ)

ಈ ಕೃತಿಯಲ್ಲಿ ಸು. ೬೨ ಜನ ಶರಣರ ೨೧೬ ಸ್ವರವಚನಗಳು ಸಂಗ್ರಹವಾಗಿವೆ. ಸು. ೧೫ ಜನ ಶರಣರು ೧೨ನೆಯ ಶತಮಾನದವರಾಗಿದ್ದಾರೆ.

ಈ ಎರಡೂ ಕೃತಿಗಳು, ಮೇಲಿನ ಹೇಳಿಕೆಗಳಿಂದ ತಮ್ಮಲ್ಲಿ ಅಳವಡಿಸಿಕೊಂಡ ಸ್ವರವಚನಗಳು ಬಸವಾದಿ ಶರಣರಿಂದ ರಚಿತವಾದುವೆಂದು ಸ್ಪಷ್ಟಪಡಿಸುತ್ತವೆ. ಅಲ್ಲದೆ, ಕೃತಿಕರ್ತೃಗಳೇ ಅವುಗಳನ್ನು ರಚಿಸಿದ್ದಾರೆಂದು ತಿಳಿಸುವುದಿಲ್ಲ.

ವಚನಗಳ ಜೊತೆಗೆ ಸ್ವರವಚನಗಳನ್ನೂ ಸಮ್ಮಿಶ್ರಗೊಳಿಸಿ ಸಂಯೋಜಿಸಲಾದ ಮಹಲಿಂಗದೇವನ ಏಕೋತ್ತರಶತಸ್ಥಲ, ಸೂಕ್ಷ್ಮಮಿಶ್ರಷಟ್‌ಸ್ಥಲ, ಶಿವಗಣಪ್ರಸಾದಿ ಮಹಾದೇವಯ್ಯಾದಿಯಾದ ನಾಲ್ಕು ಜನರ ಶೂನ್ಯಸಂಪಾದನೆಗಳು, ಚಿಕ್ಕವೀರಣ್ಣೊಡೆಯನ ಪರಮಮೂಲಜ್ಞಾನಷಟ್‌ಸ್ಥಲ, ಮಹದ್ದೇವಯೋಗಿಯ ವೀರಶೈವ ಚಿಂತಾಮಣಿ, ಗುರುಶಂಕರಸ್ವಾಮಿಯ ಜ್ಞಾನಷಟ್‌ಸ್ಥಲಸಾರ ಮೊದಲಾದ ಕೃತಿಗಳಲ್ಲಿ ಮತ್ತು ಜಕ್ಕಣಾರ್ಯನ ಪದ ಏಕೋತ್ತರ ಶತಸ್ಥಲ ಕೃತಿಗೆ ಬರೆದ ಟೀಕೆಯಲ್ಲಿ ಸ್ವರವಚನಗಳನ್ನು ರಚಿಸಿದವರು ಬಸವಾದಿ ಶರಣರೆಂದು ಹೇಳಿದೆಯಲ್ಲದೆ, ಸಂಯೋಜಕರೇ ವಚನಗಳನ್ನು ಸ್ವರವಚನಗಳನ್ನಾಗಿ ಪರಿವರ್ತಿಸಿ ಸೇರಿಸಿಕೊಂಡಿದ್ದಾರೆ ಎಂದು ತಿಳಿಸಿಲ್ಲ.

ಡಾ. ಚಿದಾನಂದಮೂರ್ತಿ ಅವರು ಹೇಳುವಂತೆ ವಚನ ಭಾವವನ್ನೊಳಗೊಂಡ ಕೆಲವು ಸ್ವರವಚನಗಳು ದೊರಕಬಹುದು. ಆದರೆ ಈ ವರೆಗೆ ದೊರೆತ ಎಲ್ಲ ಸ್ವರವಚನಗಳಿಗೂ ಹಾಗೆ ಮೂಲವನ್ನು ಹುಡುಕಿಕೊಡುವುದು ಸಾಧ್ಯವಿಲ್ಲ. ವಚನಗಳನ್ನು ಬರೆದ ಪ್ರಯೋಗಶೀಲರಾದ ಶರಣರು ಅದೇ ಭಾವವನ್ನು ಹಾಡಿನ ರೂಪದಲ್ಲಿಯೂ ಅಳವಡಿಸಿ ಹೇಳಿರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ತನ್ನ ಒಂದು ವಿಚಾರವನ್ನು ಹಲವು ಮಾಧ್ಯಮಗಳಲ್ಲಿ ಒಬ್ಬನೇ ವ್ಯಕ್ತಿ ಹೇಳಿದ ಉದಾಹರಣೆಗಳು ಸಾಕಷ್ಟು ಸಿಗುತ್ತವೆ. ಹಾಗೆಯೆ ಶರಣರು ವಚನಗಳಲ್ಲಿ ಹೇಳಿದ ತಮ್ಮ ವಿಚಾರಗಳನ್ನು ಇನ್ನಷ್ಟು ಪ್ರಚುರಗೊಳಿಸಲು, ಜನಪ್ರಿಯಗೊಳಿಸಲು ರಾಗ-ತಾಳಗಳಿಂದ ಕೂಡಿದ ಹಾಡಿನ ರೂಪದಲ್ಲಿ ಹೇಳಿರಬೇಕು.

ಇನ್ನು ವಚನಗಳ ಸಾಹಿತ್ಯಗುಣ ಸ್ವರವಚನಗಳಲ್ಲಿಲ್ಲ; ಕಾರಣ ಅವು ಬಸವಾದಿ ಶರಣರ ರಚನೆಗಳಲ್ಲ ಎಂಬ ವಾದ: ವಚನಗಳು ಮುಕ್ತಕ ರೂಪದ ಆಶುರಚನೆಗಳು. ಅವು ಒಂದು ಹೊತ್ತಿನ ಭಾವಕ್ಕೆ ತೀವ್ರವಾಗಿ ಪ್ರತಿಕ್ರಿಯಿಸಿದ ಪ್ರತಿಭಾಸ್ಫುರಣಗಳು. ಹೀಗಾಗಿ ಕಾವ್ಯಸತ್ವ ಸಹಜವಾಗಿ ಅಲ್ಲಿ ಮೈದಳೆದು ನಿಂತಿದೆ. ಆದರೆ ಸ್ವರವಚನಗಳು ಗೀತಮಾಧ್ಯಮದಲ್ಲಿ ಅಭಿವ್ಯಕ್ತವಾದ, ತತ್ವಪ್ರಧಾನವಾದ ಉದ್ದೇಶಿತ ರಚನೆಗಳು. ಹೀಗಾಗಿ ಇಲ್ಲಿ ಕಾವ್ಯಸತ್ವ ಗೌಣವಾಗಿ ತೋರುತ್ತದೆ. ಆದರೆ ಅವನ್ನು ರಾಗಬದ್ಧವಾಗಿ ಹಾಡಿದರೆ ನಿಶ್ಚಿತ ಪರಿಣಾಮ ತಾನಾಗಿಯೇ ಸಾಧ್ಯವಾಗುತ್ತದೆ.

ಇನ್ನು ವಚನಗಳಂತೆ ಸ್ವರವಚನಗಳು ಆಯಾ ಶರಣರ ಹೆಸರಿನಡಿಯಲ್ಲಿ ಒಂದೆಡೆ ದೊರಕುವುದಿಲ್ಲ, ಆದಕ್ಕಾಗಿ ಅವು ಅವರವಲ್ಲ ಎಂಬ ವಾದ: ಹಾಗೆ ನೋಡಿದರೆ ಯಾರ ವಚನಗಳು ತಾನೆ ಮೊದಲು ಒಂದೆಡೆ ದೊರಕುತ್ತವೆ?. ಶರಣರು ತಾವೇ ಬರೆದಿಟ್ಟ ಹಸ್ತಪ್ರತಿಗಳು ಸಿಕ್ಕುತ್ತವೆಯೆ? ಈ ಪ್ರಶ್ನೆಗಳಿಗೆ ಉತ್ತರ ಅಷ್ಟು ಸುಲಭವಲ್ಲ. ಶರಣರು ಮೊದಲು ತಮ್ಮ ಅನುಭವವನ್ನು ಬಿಡಿಬಿಡಿಯಾಗಿಯೇ ಅಭಿವ್ಯಕ್ತಪಡಿಸಿದರು; ಬಿಡಿ ಬಿಡಿಯಾಗಿಯೇ ಬರೆದಿಟ್ಟರು. ಅನಂತರ ನೂರೊಂದು ವಿರಕ್ತರ ಕಾಲದಿಂದೀಚೆಗೆ ಆ ವಚನಗಳನ್ನು ಒಂದೆಡೆ ಸಂಗ್ರಹಿಸಿ, ಸಂಕಲಿಸಿ, ಸಂಪಾದಿಸಿ, ಟೀಕೆ-ಟಿಪ್ಪಣಿ, ವ್ಯಾಖ್ಯಾನ ಬರೆಯುವ ಕಾರ್ಯ ಆರಂಭವಾಯಿತು. ಹಾಗೆ ಸಂಕಲಿಸಿದ ಕಟ್ಟುಗಳು ಕೂಡ ಕೇವಲ ಹೆಚ್ಚು ವಚನಗಳನ್ನು ಬರೆದ ಹಿರಿಯ ವಚನಕಾರರವು ಮಾತ್ರ. ಕಡಿಮೆ ಸಂಖ್ಯೆಯ ವಚನಗಳನ್ನು ಬರೆದ ಶರಣರ ವಚನಗಳ ಇಂಥ ಕಟ್ಟುಗಳು ಸಿಕ್ಕುವುದಿಲ್ಲ. ಅವು ಬೇರೆ ಬೇರೆ ಸ್ಥಲಕಟ್ಟಿನ ಕೃತಿಗಳಲ್ಲಿ ಹಿರಿಯ ವಚನಕಾರರ ವಚನಗಳ ಜತೆ ಸೇರಿಕೊಂಡವು. ಅವುಗಳನ್ನಾಯ್ದು ಒಂದೆಡೆ ಸೇರಿಸುವ ಕಾರ್ಯವನ್ನು 'ಸಕಲಪುರಾತನರ ವಚನಗಳು' ಕಟ್ಟುಗಳ ಕರ್ತೃಗಳು ಮಾಡಿದರು. ಅದರಂತೆ ಸಂಖ್ಯೆಯಲ್ಲಿ ಕಡಿಮೆಯಿದ್ದ, ಬಿಡಿಬಿಡಿಯಾಗಿ ದೊರೆತ ಈ ಸ್ವರವಚನಗಳನ್ನು ಒಟ್ಟೊಟ್ಟು ಶರಣರ ಹೆಸರಿನಡಿಯಲ್ಲಿ ಜೋಡಿಸುವ ಸಾಹಸ ಮಾಡದೆ, ಏಕೋತ್ತರಶತಸ್ಥಲ, ಸೂಕ್ಷ್ಮಮಿಶ್ರಷಟ್‌ಸ್ಥಲ, ವೀರಶೈವಚಿಂತಾಮಣಿ, ಪರಮಮೂಲ ಜ್ಞಾನಷಟ್‌ಸ್ಥಲ, ಶೂನ್ಯಸಂಪಾದನೆ, ಶಿವಯೋಗ ಪ್ರದೀಪಿಕೆ, ಗಣವಚನ ರತ್ನಾವಳಿ ಮೊದಲಾದ ಕರ್ತೃಗಳು ತಮ್ಮ ಆಶಯಕ್ಕನುಗುಣವಾಗಿ ಶರಣರ ವಚನಗಳ ಜೊತೆಗೆ, ಇಲ್ಲವೆ ಕೇವಲ ಸ್ವರವಚನಗಳನ್ನೇ ಅಳವಡಿಸಿಕೊಂಡು ಸ್ಥಲಕಟ್ಟಿನ ಕೃತಿಗಳನ್ನು

ಸಿದ್ಧಪಡಿಸಿದರು. ಮುಂದೆ ನಿಜಗುಣ ಶಿವಯೋಗಿ ಮೊದಲಾದ ಅನುಭಾವಿಗಳು ಸ್ವರವಚನಗಳನ್ನೇ ಅಧಿಕ ಸಂಖ್ಯೆಯಲ್ಲಿ ಬರೆದು ಏಕವ್ಯಕ್ತಿ ಸ್ವತಂತ್ರ ಕೃತಿಗಳನ್ನು ನಿರ್ಮಿಸಿದರ..

ಈ ಎಲ್ಲ ಕಾರಣಗಳಿಂದ ಅವರವರ ಅಂಕಿತಗಳನ್ನು ಧರಿಸಿ, ಅವರ ಭಾವ-ಭಾಷೆ-ಆಶಯಗಳನ್ನು ಅಳವಡಿಸಿಕೊಂಡ ಈ ಸ್ವರವಚನಗಳ ಕರ್ತೃತ್ವವನ್ನು ಬೇರೆಯವರಿಗೆ ಆರೋಪಿಸದೆ, ಶರಣರಿಗೆ ಒಪ್ಪಿಸಿ, ವಚನಗಳಂತೆ ಸ್ವರವಚನಗಳೂ ೧೨ನೆಯ ಶತಮಾನದ ಶರಣರು ಕನ್ನಡ ಸಾಹಿತ್ಯಕ್ಕೆ ಕೊಟ್ಟ ನೂತನ ಕೊಡುಗೆ ಎಂದು ಹೇಳುವುದು ಹೆಚ್ಚು ಸೂಕ್ತವೆನಿಸುತ್ತದೆ.

ಹಾಡು ಅಥವಾ ಗೀತ ಎಂಬ ಸಾಹಿತ್ಯ ಪ್ರಕಾರ ಅತಿ ಪ್ರಾಚೀನವಾದುದು. ಕನ್ನಡ ಸಾಹಿತ್ಯ ಗ್ರಂಥಸ್ಥರೂಪ ಪಡೆಯುವುದಕ್ಕಿಂತ ಪೂರ್ವದಲ್ಲಿಯೇ ಅದು ಜನಪದದಲ್ಲಿ ಹುಟ್ಟಿ ಕಂಠಸ್ಥವಾಗಿ ಬೆಳೆದುಬಂದಿದೆ. ಹೀಗಾಗಿ ಒಂದರ್ಥದಲ್ಲಿ ನಮ್ಮ ಜನಪದರ ಹುಟ್ಟಿನೊಂದಿಗೆ ಈ ಪ್ರಕಾರವು ಹುಟ್ಟುಪಡೆಯಿತೆಂದು ಸ್ಥೂಲವಾಗಿ ಹೇಳಬೇಕಾಗುತ್ತದೆ. ಪ್ರಾಚೀನ ಕಾವ್ಯಗಳಲ್ಲಿ ಉಲ್ಲೇಖವಾದ ಪಾಡು, ಪಾಡುಗಬ್ಬ, ಒನಕೆವಾಡು, ಪಾಡುಗಬಿತೆ, ಬೀದಿವಾಡು ಎಂಬ ಹೆಸರುಗಳು ಈ ಪ್ರಕಾರದ ಹಿಂದಿನ ಇರುವಿಕೆಯನ್ನು ಸೂಚಿಸುತ್ತವೆ. ಆದರೆ ಹಾಡುಗಳು ಲಿಖಿತರೂಪದಲ್ಲಿ ಪ್ರತ್ಯಕ್ಷವಾಗುವುದು ೧೨ನೆಯ ಶತಮಾನದಲ್ಲಿ. ಶಿವಶರಣರು ಗೈದ ಬಹುಮುಖ ಕ್ರಾಂತಿಗಳಲ್ಲಿ ಸಾಹಿತ್ಯಕ್ರಾಂತಿಯೂ ಒಂದು. ಆ ಕಾಲಕ್ಕೆ ಅನೇಕ ಹೊಸ ಪ್ರಕಾರಗಳು ಪ್ರಕಾಶಕ್ಕೆ ಬಂದವು. ಹಿಂದಿದ್ದ ಕೆಲವು ಹಳೆಯ ರೂಪಗಳು ಹೊಸಕಳೆಯನ್ನು ಪಡೆದವು. ಹಾಗೆ ತನ್ನ ಹಳೆಯ ಪರೆಯನ್ನು ಕಳಚಿ ಹೊಸ ಮೈಯನ್ನು ಪಡೆದುಕೊಂಡ ಪ್ರಕಾರಗಳಲ್ಲಿ-ಹಿಂದೆ ಜನಪದದಲ್ಲಿ ಇದ್ದಿರಬಹುದಾದ - ಈ ಗೀತಪ್ರಕಾರವೂ ಒಂದು. ಮೊದಲು ಹಗುರಾದ ಶೃಂಗಾರ, ಅತಿಯಾದ ಅಶ್ಲೀಲಭಾವಗಳನ್ನು ಪ್ರಕಟಿಸಲು ತನ್ನನ್ನು ಒಡ್ಡಿಕೊಂಡ ಇದನ್ನು ಶರಣರು ತಮ್ಮ ಶಿವಾನುಭವ, ಶಿವತತ್ವ, ಶಿವಸ್ತುತಿಗಳಿಗೆ ಮಾಧ್ಯಮವನ್ನಾಗಿ ಮಾಡಿಕೊಂಡು ಅದಕ್ಕೊಂದು ಗಂಭೀರತೆಯನ್ನು, ಸಾತ್ವಿಕತೆಯನ್ನು ತಂದುಕೊಟ್ಟರು. ಅವರ ಶುದ್ಧ ಚಾರಿತ್ರ್ಯ, ನಡೆ-ನುಡಿ, ಆಚಾರ-ವಿಚಾರಗಳಿಗನುಗುಣವಾಗಿ ಭಕ್ತಿ-ತತ್ವ-ಆಧ್ಯಾತ್ಮಾನುಭಾವಗಳನ್ನು ಅಳವಡಿಸಿಕೊಂಡು 'ಸ್ವರವಚನ' ಎಂಬ ಹೊಸ ಹೆಸರನ್ನು ಧರಿಸಿ ಅದು ತನ್ನ ಘನತೆ-ಗೌರವಗಳನ್ನು ಹೆಚ್ಚಿಸಿಕೊಂಡಿತು.

ಈಗ ಉಪಲಬ್ಧವಾದ ಸ್ವರವಚನ ಸಾಹಿತ್ಯವನ್ನು ಗಮನಿಸಿ ಹೇಳುವುದಾದರೆ-ಈಚೆಗೆ ಪ್ರಕಟವಾದ ಗಣವಚನರತ್ನಾವಳಿಯಲ್ಲಿ ಎಡೆಪಡೆದ - ಜೇಡರ ದಾಸಿಮಯ್ಯನಿಂದ ರಚಿತವಾದ ಒಂದು ಹಾಡೇ ಅತ್ಯಂತ ಪ್ರಾಚೀನವಾದುದೆಂದು ತಿಳಿದುಬರುತ್ತದೆ.[೨೦] ತರುವಾಯ ಸಕಲೇಶ ಮಾದರಸ, ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವ, ಸಿದ್ಧರಾಮ, ಮಹಾದೇವಿಯಕ್ಕ, ನೀಲಮ್ಮ, ಆದಯ್ಯ, ಮಡಿವಳ ಮಾಚಿದೇವ ಮೊದಲಾದ ಸು. ೨೫

೨೦. ಇದು ದೊರಕುವುದಕ್ಕಿಂತ ಪೂರ್ವದಲ್ಲಿ ಸಕಲೇಶ ಮಾದರಸರ ಒಂದು ಸ್ವರವಚನವೇ ಮೊದಲನೆಯದೆಂಬ ಖ್ಯಾತಿಗೆ ಭಾಜನವಾಗಿತ್ತು.

ಜನ ಹನ್ನೆರಡನೆಯ ಶತಮಾನದ ಶರಣರಿಂದ ೩೫೦ಕ್ಕೂ ಹೆಚ್ಚು ಸ್ವರವಚನಗಳು ಸೃಷ್ಟಿಯಾದುದು ಕಂಡುಬರುತ್ತದೆ.

ಹೀಗೆ ೧೨ನೆಯ ಶತಮಾನದ ಬಸವಾದಿ ಶರಣರಿಂದ ಕಿರುದೊರೆಯಾಗಿ ಆರಂಭವಾದ ಈ ಸ್ವರವಚನವಾಹಿನಿ, ಮುಂದೆ ನೂರೊಂದು ವಿರಕ್ತರ ಕಾಲದಲ್ಲಿ ಹೆದ್ದೊರೆಯಾಗಿ, ನಿಜಗುಣಾದಿ ತತ್ವಪದಕಾರರ ಕಾಲಕ್ಕೆ ಮಹಾಪೂರವಾಗಿ ಮುಂದುವರಿದು ಇಂದಿನವರೆಗೂ ಹರಿದುಬಂದಿದೆ. ಅದು ನಡೆದುಬಂದ ದಾರಿಯನ್ನು ಬಸವಯುಗ, ನೂರೊಂದು ವಿರಕ್ತರ ಯುಗ, ತೋಂಟದ ಸಿದ್ಧಲಿಂಗರ ಯುಗ, ನಿಜಗುಣರಾದಿ ತತ್ವಪದಕಾರರ ಯುಗ ಎಂದು ನಾಲ್ಕು ಘಟ್ಟಗಳಲ್ಲಿ ಗುರುತಿಸಬಹುದು.

## ಸ್ವರೂಪ-ಲಕ್ಷಣ:

ಆರಂಭದಲ್ಲಿ 'ಪಲ್ಲ' ಇರುವುದು ಸ್ವರವಚನದ ಪ್ರಥಮ ಲಕ್ಷಣ. ಇಡೀ ಪದ್ಯದ ಸಾರಸಂಗ್ರಹವನ್ನೊಳಗೊಂಡ ಇದು ಪಲ್ಲ, ಪಲ್ಲವಿ, ಪಲ್ಲವ ಎಂದು ಬಳಕೆಯಾಗಿದೆ. ಇದು ಒಂದು ಪಾದದಿಂದ ೪ ಪಾದದ ವರೆಗಿನ ವ್ಯಾಪ್ತಿಯನ್ನು ಪಡೆದಿದೆ. ಎರಡು ಪಾದದ ನುಡಿಗಳಿದ್ದರೆ ಒಂದು ಪಾದದ ಪಲ್ಲ, ನಾಲ್ಕು ಪಾದದ ನುಡಿಗಳಿದ್ದರೆ ಹೆಚ್ಚಾಗಿ ಎರಡು ಪಾದದ ಪಲ್ಲ, ಕ್ವಚಿತ್ತಾಗಿ ನಾಲ್ಕು ಪಾದಗಳ ಪಲ್ಲ, ಷಟ್ಪದಿಯಾಗಿದ್ದರೆ ಅದರ ಅರ್ಧದಷ್ಟು ಅಂದರೆ ಮೂರು ಪಾದದ ಪಲ್ಲ ಇರುವುದುಂಟು. ಇದು ಹಾಡುವಾಗ ಪ್ರತಿಯೊಂದು ನುಡಿಯ ಅಂತ್ಯಕ್ಕೆ ಪುನರುಕ್ತಗೊಳ್ಳುತ್ತ ನಡೆಯುತ್ತದೆ. ಅನುಪಲ್ಲವಿ ಕಂಡುಬರುವುದಿಲ್ಲ.

ಪಲ್ಲದ ನಂತರ ನುಡಿಗಳಿರುತ್ತವೆ.[೨೧] ಅವುಗಳಿಗೆ 'ಪದ' ಎಂದು ಕರೆಯಲಾಗಿದೆ. ಅವುಗಳ ಸಂಖ್ಯೆ ಇಷ್ಟೇ ಇರಬೇಕೆಂಬ ಕಡ್ಡಾಯವಿಲ್ಲ. ಆದರೆ ಅತಿ ಕಡಿಮೆಯೆಂದರೆ ಮೂರು, ಅತಿ ಹೆಚ್ಚೆಂದರೆ-ಹಿರಿಯ ಮಂತ್ರಗೋಪ್ಯವನ್ನೂ ಸ್ವರವಚನವೆಂದು ಅಂಗೀಕರಿಸುವುದಾದರೆ - ೨೭ ನುಡಿಗಳಿರುತ್ತವೆ. ನುಡಿಗಳು ೩, ೫, ೭, ೯, ೧೧, ೧೩, ೧೫, ೧೭, ೧೯, ೨೧, ೨೩, ೨೫, ೨೭ ಹೀಗೆ ಬೆಸಸಂಖ್ಯೆಯಲ್ಲಿರುವುದು ಒಂದು ವಿಶೇಷ. ಪ್ರತಿ ನುಡಿಯೂ ಒಂದು ಪದ್ಯದಲ್ಲಿ ಒಂದೇ ಪ್ರಮಾಣದ ಚರಣ ಸಂಖ್ಯೆಯನ್ನು ಹೊಂದಿರುತ್ತವೆ. ಅವು ೨, ೩, ೪, ೬ ಪಾದದ ವರೆಗೆ ಕಂಡುಬರುತ್ತವೆ. ಆದರೆ ನಾಲ್ಕು ಪಾದಗಳ ನುಡಿಗಳೇ ಅಧಿಕ. ನುಡಿಗಳಲ್ಲಿ ಆದಿಪ್ರಾಸ ಕಡ್ಡಾಯ. ಅಂತ್ಯ ಪ್ರಾಸ ಕ್ವಚಿತ್ತಾಗಿ ಬರಬಹುದು. ಕೊನೆಯ ನುಡಿಯಲ್ಲಿ ಅಂಕಿತ ನಿತ್ಯ. ಕೆಲವು ಸಲ ಅದು ಪಲ್ಲವಿಯಲ್ಲಿಯೂ ಕಾಣಿಸಿಕೊಳ್ಳಬಹುದು.[೨೨] ಇದು ಆಯಾ ಸ್ವರವಚನಕಾರನು ಹೇಳುವ ಮಾತ್ತಿಗೆ ಸಾಕ್ಷೀಭೂತ ಇಷ್ಟದೈವವೆನಿಸಿದೆ. ಅಂಕಿತಗಳಲ್ಲಿ ಕೆಲವು ಸಲ ವೈವಿಧ್ಯ ತೋರಬಹುದು.[೨೩]

---

೨೧. ಏಕ್ಕನಾರ್ಯರ ಏಕೋತ್ತರಶತಸ್ಥಲದ ಹಾಡುಗಳಿಗೆ ಟೀಕೆಯನ್ನು ಬರೆದ ಶ್ರೀಗಿರೀಂದ್ರ ಸ್ವರವಚನವೆಂದರೇನು? ಎಂಬುದಕ್ಕೆ 'ನಾಲ್ಕಡಿಗಳಿಂದ ಒಪ್ಪಲ್ಪಟ್ಟ ವಚನಂಗಳು' ಎಂದು ಅರ್ಥ ಕೊಡುತ್ತಾನೆ. (ಪ್ರಾ. ಕಾ.ಕ. ಸಾ. ಪು. ೨೭೯).

೨೨. ಚನ್ನಬಸವಣ್ಣನ 'ಮಂಗಳ ಪಾಡುವೆ ಚನ್ನಸಂಗಮದೇವಂಗೆ' ಎಂಬ ಸ್ವರವಚನ ಹಾಗೂ ಮುದ್ವೀರ ಸ್ವಾಮಿಯ ಕೆಲವು ಸ್ವರವಚನಗಳನ್ನು ನೋಡಬಹುದು.

೨೩. ಉದಾ: ಕೂಡಲಸಂಗಮದೇವ, ಕೂಡಲಸಂಗ, ಕೂಡಲಸಂಗಮೇಶ, ಕೂಡಲಸಂಗಮನಾಥ ಇತ್ಯಾದಿ.

ಸಾಮಾನ್ಯವಾಗಿ ಪ್ರತಿಯೊಂದು ಸ್ವರವಚನದ ಹಣೆಯ ಮೇಲೆ ರಾಗ-ತಾಳ ಸೂಚನೆ ಇರುತ್ತದೆ. ರಾಗ ಕಡ್ಡಾಯ. ತಾಳ ಸೂಚನೆ ಕೆಲವಕ್ಕೆ ಇರದೆ ಇರಬಹುದು. ಅಂಶಗಣ ಘಟಿತ ಛಂದೋಬಂಧಗಳಲ್ಲಿ ಕೇವಲ ರಾಗಸೂಚನೆ ಮಾತ್ರ ಇದ್ದುದು, ಮಾತ್ರಾಗಣ ಘಟಿತ ಛಂದೋಬಂಧಗಳಲ್ಲಿ ರಾಗ-ತಾಳ ಎರಡೂ ಕಡ್ಡಾಯವಾಗಿರುವುದು ಕಂಡುಬರುತ್ತದೆ. ಕೆಲವು ಸ್ವರವಚನಗಳಿಗೆ ರಾಗ-ತಾಳ ಸೂಚನೆ ಇಲ್ಲದೆಯೂ ಇರಬಹುದು. ಹೀಗೆಂದ ಮಾತ್ರಕ್ಕೆ ಅವು ರಾಗ-ತಾಳ ರಹಿತವಾದುವೆಂದು ಅರ್ಥವಲ್ಲ; ಹಸ್ತಪ್ರತಿಕಾರರು ಸೂಚಿಸದೆ ಬಿಟ್ಟಿರಬಹುದು; ಇಲ್ಲವೆ ಕರ್ತೃವೇ ಹಾಡುಗಾರರು ತಮಗೆ ಸರಿಕಂಡ ರಾಗ-ತಾಳಗಳಲ್ಲಿ ಹಾಡಿಕೊಳ್ಳಲಿ ಎಂದು ಬಿಟ್ಟಿರಬಹುದು.[೨೪] ಒಂದೇ ಹಾಡಿಗೆ ಬೇರೆ ಬೇರೆ ಹಸ್ತಪ್ರತಿಗಳಲ್ಲಿ ಅಥವಾ ಸಂಕಲನಗಳಲ್ಲಿ ಬೇರೆ ಬೇರೆ ರಾಗ-ತಾಳಗಳ ಸೂಚನೆ ಕಂಡುಬರುವುದು ಈ ಮಾತಿಗೆ ನಿದರ್ಶನವೆನಿಸಿದೆ.

ಪರಮಮೂಲಜ್ಞಾನ ಷಟ್‌ಸ್ಥಲ, ಜ್ಞಾನಷಟ್‌ಸ್ಥಲಸಾರ ಕೃತಿಗಳಲ್ಲಿನ ಸ್ವರವಚನಗಳಿಗೆ ರಾಗ-ತಾಳ ಸೂಚನೆಯಿಲ್ಲ. ಶಿವಯೋಗ ಪ್ರದೀಪಿಕೆ, ಏಕೋತ್ತರ ಶತಸ್ಥಲ, ವೀರಶೈವ ಚಿಂತಾಮಣಿ ಕೃತಿಗಳಲ್ಲಿನ ಸ್ವರವಚನಗಳು ಹೆಚ್ಚಾಗಿ ರಾಗ-ತಾಳ ಎರಡನ್ನೂ ಹೊಂದಿವೆ. ಈಗ ದೊರೆತ ಸಂಕಲನಾಂತರ್ಗತ ಸು. ೩೫೦ ಸ್ವರವಚನಗಳಿಗೆ ಸು. ಒಂದು ನೂರು ರಾಗಗಳು ಬಳಕೆಯಾಗಿವೆ. ತಾಳಗಳ ಸಂಖ್ಯೆ ಸು. ೧೫. ಸ್ವರವಚನಗಳು ಹೆಚ್ಚಾಗಿ ಅಂಶಗಣಘಟಿತ ಮಟ್ಟುಗಳಾಗಿದ್ದು ಕರ್ನಾಟಕ ಸಂಗೀತದ ರಾಗ-ತಾಳಗಳನ್ನು ಅಳವಡಿಸಿಕೊಂಡಿವೆ.

ಸ್ವರವಚನಗಳ ವಸ್ತು ಹೆಚ್ಚಾಗಿ ವೀರಶೈವತತ್ತ್ವ. ಅಂದರೆ ಷಟ್‌ಸ್ಥಲ, ಪಂಚಾಚಾರ, ಅಷ್ಟಾವರಣ, ಶಿವಯೋಗಗಳಿಗೆ ಸಂಬಂಧಿಸಿದ್ದು. ಜೊತೆಗೆ ಲೋಕನೀತಿ, ಶಿವಸ್ತುತಿ, ಶರಣಸ್ತೋತ್ರ, ಸಮಾಜ ವಿಮರ್ಶೆಯೂ ಕಂಡುಬರುತ್ತದೆ. ೧೨ನೆಯ ಶತಮಾನದ ಶರಣರ ರಚನೆಗಳಲ್ಲಿ ತತ್ತ್ವಪ್ರತಿಪಾದನೆ ಪ್ರಧಾನವಾಗಿದ್ದರೆ, ಮುಂದೆ ಬಂದ ಅನುಭಾವಿಗಳ ರಚನೆಗಳಲ್ಲಿ ಹೆಚ್ಚಿನದಾಗಿ ಲೋಕನೀತಿ ಕಾಣಿಸುತ್ತದೆ.

ಭಾಷೆಯ ದೃಷ್ಟಿಯಿಂದ ಸ್ವರವಚನಗಳಲ್ಲಿ ನಡುಗನ್ನಡದ ಬಳಕೆ ಸಾಮಾನ್ಯವಾಗಿ ಕಂಡುಬಂದರೂ ಹನ್ನೆರಡನೆಯ ಶತಮಾನದ ಶರಣರ ರಚನೆಗಳ ಭಾಷೆಯಲ್ಲಿ ಬೆಡಗು, ಸಾಂಕೇತಿಕತೆ ಹೆಚ್ಚು; ಸರಳತೆ ಕಡಿಮೆ. ನೂರೊಂದು ವಿರಕ್ತರು, ನಿಜಗುಣಾದಿಗಳ ಕಾಲಕ್ಕೆ ಅದು ಶಿಷ್ಟ, ಸರಳವೆನಿಸುತ್ತದೆ. ಕೆಲವರಲ್ಲಿ ಇತ್ತ ಶಿಷ್ಟವೂ ಅಲ್ಲದ, ಅತ್ತ ದೇಶೀಯೂ ಅಲ್ಲದ ಎರಡರ ಮಿಶ್ರಭಾಷೆ ಕಂಡುಬರುತ್ತದೆ. ಕಡಕೋಳ ಮಡಿವಾಳಪ್ಪ, ಕೂಡಲೂರ ಬಸವಲಿಂಗ ಶರಣರು ಮೊದಲಾದವರ ರಚನೆಗಳಲ್ಲಿ ಅಚ್ಚದೇಶೀ ಭಾಷೆಯ ಸೊಗಡು ಅಧಿಕವಾಗಿ ತೋರುತ್ತದೆ.

---

೨೪. ಹಾಡುಗಬ್ಬಗಳೆನಿಸಿದ ಷಟ್ಪದಿ, ಸಾಂಗತ್ಯ ಕಾವ್ಯಗಳ ಹಸ್ತಪ್ರತಿಗಳಲ್ಲಿ, ಕಾವ್ಯದ ಆರಂಭದಲ್ಲಿ 'ರಾಗ ತಮ್ಮಿಚ್ಛೆ', 'ರಾಗ ತನ್ನಿಚ್ಛೆ' ಎಂದು ಬರೆದುದು ಕಂಡುಬರುತ್ತದೆ. ಇದು ಹಾಡುಗಾರ ಯಾವುದೆ ರಾಗದಲ್ಲಿ ಹಾಡಬಹುದು ಎಂಬುದನ್ನು ಸೂಚಿಸುತ್ತದೆ. ಕೆಲವು ಸ್ವರವಚನಗಳಿಗೆ ರಾಗ ತಾಳ ಹಾಕದೆ ಬಿಟ್ಟಿರುವುದು ಇದೇ ಭಾವದಿಂದ ಎಂದು ಹೇಳಬಹುದು.

ರೂಪದೃಷ್ಟಿಯಿಂದ ಷಟ್ಪದಿ, ಸಾಂಗತ್ಯ, ಅಕ್ಕರ, ಏಳೆ, ಚೌಪದಗಳಂಥ ಪರಿಚಿತ ದೇಶೀಮಟ್ಟುಗಳು, ಜೊತೆಗೆ ಇನ್ನೂ ಗುರುತಿಸಲಾಗದ ಅನೇಕ-ನಾಲ್ಕು ಪಾದಗಳ - ಜಾನಪದ ಮಟ್ಟುಗಳು ಬಳಕೆಯಾಗಿರುವುದು ಕಂಡುಬರುತ್ತದೆ. ಹಾಗೆಯೇ ಕಣಿ, ಚಂದಮಾಮ ಪದ, ಕೋಲುಪದ, ಉಯ್ಯಲೆ, ಗೊಂದಲ, ಜೋಗುಳ, ಮಂಗಳಾರತಿಪದದ ಧಾಟಿಗಳು ಸಮಾವೇಶಗೊಂಡಿವೆ.

ಛಂದಸ್ಸಿನ ಹಿನ್ನೆಲೆಯಲ್ಲಿ ನೋಡಿದರೆ, ಅಂಶಛಂದಸ್ಸು ಪ್ರಥಮ, ಮಾತ್ರಾಛಂದಸ್ಸು ದ್ವಿತೀಯ ಸ್ಥಾನದಲ್ಲಿ ನಿಂತರೆ, ಇವೆರಡರ ಮಿಶ್ರಣದಿಂದ ಕೂಡಿದ ವಿಶಿಷ್ಟ ಛಂದೋಲಯಗಳು, ಆಧುನಿಕ ಭಾವಗೀತದ ಲಯ-ಮಟ್ಟುಗಳನ್ನು ಹೋಲುವ ಅನೇಕ ಉದಾಹರಣೆಗಳು ಇಲ್ಲಿ ಕಂಡುಬರುತ್ತವೆ. ಬುದ್ಧಿ-ಭಾವಗಳ ಸಮನ್ವಯದಿಂದಾಗಿ ಸ್ವರವಚನಗಳಲ್ಲಿ ರಾಗರಮ್ಯತೆ, ತಾಳಗಮ್ಯತೆಗಳೆರಡೂ ಎದ್ದು ಕಾಣುತ್ತವೆ.

ಸಾಹಿತ್ಯ ದೃಷ್ಟಿಯಿಂದ ಮುಕ್ತಕರೂಪದ ವಚನಗಳಷ್ಟು ಸ್ವರವಚನಗಳು ಶ್ರೀಮಂತವೆನಿಸದಿದ್ದರೂ ಬೆಡಗು, ಸಾಂಕೇತಿಕತೆ, ಸರಳತೆ, ವಾಚ್ಯತೆಯಿಂದ ಕೂಡಿದ ಅವು ರಾಗ-ತಾಳಗಳ ರಮ್ಯತೆಯ ಮೂಲಕ ತಮ್ಮಲ್ಲಿದ್ದ ಕೊರತೆಯನ್ನು ತುಂಬಿಕೊಂಡು ಮನಸ್ಸನ್ನು ಹಿಡಿದು ನಿಲ್ಲಿಸುವ ಶಕ್ತಿಯನ್ನು ಪಡೆದಿವೆ. ಶಿವಸ್ತುತಿ, ಶರಣಸ್ತುತಿಪರವಾದ ರಚನೆಗಳು, ಶರಣಸತಿ-ಲಿಂಗಪತಿ ಭಾವವನ್ನು ಅಳವಡಿಸಿಕೊಂಡ ಸ್ವರವಚನಗಳು ಮಧುರ ಭಾವ-ಭಾಷೆ, ನೂತನ ಅಲಂಕಾರ, ಉಚಿತ ರಾಗ ರಸಗಳನ್ನು ಮೈಗೂಡಿಸಿಕೊಂಡು ಭಾವಗೀತಗಳಂತೆ ತೋರುತ್ತವೆ.

ಸಾಹಿತ್ಯ-ಸಂಗೀತಗಳ ಸಂಬಂಧದ ಹಿನ್ನೆಲೆಯಲ್ಲಿ ನೋಡಿದರೆ, ಸ್ವರವಚನಗಳಲ್ಲಿ ಸಾಹಿತ್ಯಕ್ಕೆ ಮುಖ್ಯವಾದ ಅರ್ಥಸ್ವಾರಸ್ಯ, ಸಂಗೀತಕ್ಕೆ ಮುಖ್ಯವಾದ ಸ್ವರಲಾಲಿತ್ಯ ಎರಡೂ ಮೇಳವಿಸಿ ನಡೆದಿರುವುದು ಕಂಡುಬರುತ್ತದೆ. ಸಾಹಿತ್ಯ ಸಂಗೀತಗಳ ಈ ಸಾಮರಸ್ಯ ಸ್ವರವಚನಗಳ ಒಂದು ಪ್ರಧಾನ ಲಕ್ಷಣವಾಗಿ ಪರಿಣಮಿಸಿದೆ.

ಈ ಪ್ರಬಂಧದ ಒಟ್ಟು ಫಲಿತಗಳನ್ನು ಕ್ರೋಡೀಕರಿಸಿ ಹೀಗೆ ಹಿಡಿದಿಡಬಹುದು:

೧. ಮುಕ್ತಕ ರೂಪದ ವಚನಗಳಿಂದ ಭಿನ್ನವಾದ, ಈ ರಾಗ-ತಾಳ ಸಮನ್ವಿತ ಹಾಡುಗಳನ್ನು 'ಸ್ವರವಚನ'ಗಳೆಂದು ಕರೆಯಲಾಗುತ್ತದೆ.

೨. ಸ್ವರವಚನಗಳ ಉಗಮ ೧೨ನೆಯ ಶತಮಾನದಲ್ಲಿ ಆಗಿದೆ. ಜೇಡರ ದಾಸಿಮಯ್ಯ ಮೊದಲ ವಚನಕಾರನಾದಂತೆ, ಮೊದಲ ಸ್ವರವಚನಕಾರನೂ ಆಗಿದ್ದಾನೆ.

೩. ಏಕೋತ್ತರಶತಸ್ಥಲಾದಿ ಸಂಕಲನಗ್ರಂಥಗಳಲ್ಲಿ ಸೇರಿದ ಸ್ವರವಚನಗಳು, ಕೆಲವು ವಿದ್ವಾಂಸರು ಊಹಿಸಿದಂತೆ ಸಂಕಲನಕಾರರು ಸೃಷ್ಟಿಸಿದುವಲ್ಲ; ವಚನಗಳನ್ನು ಅವರು ಸ್ವರವಚನಗಳನ್ನಾಗಿ ಪರಿವರ್ತಿಸಲಿಲ್ಲ; ಅವು ಬಸವಾದಿ ಶರಣರ ಸ್ವತಂತ್ರ ರಚನೆಗಳು.

೪. ಹೀಗಾಗಿ ಬಸವಾದಿ ಶರಣರೇ ಹಾಡುಗಬ್ಬದ ಮೊದಲ ಪ್ರವರ್ತಕರು.

೫. ಸ್ವರವಚನ ಪರಂಪರೆ ೧೨ನೆಯ ಶತಮಾನದಿಂದ ಇಂದಿನವರೆಗೂ ನಿರಂತರವಾಗಿ ಸಾಗಿ ಬಂದಿದೆ. ಅದಗಲ್ಲಿ ಬಸವಯುಗ, ನೂರೊಂದು ವಿರಕ್ತರಯುಗ, ತೋಂಟದ ಸಿದ್ಧಲಿಂಗರಯುಗ, ನಿಜಗುಣಾದಿ ತತ್ವಪದಕಾರರಯುಗ ಎಂದು ನಾಲ್ಕು ಪ್ರಮುಖ ಘಟ್ಟಗಳನ್ನು ಗುರುತಿಸಬಹುದು.

೬. ಪಲ್ಲ, ನುಡಿಗಳು, ಕೊನೆಯ ನುಡಿಯಲ್ಲಿ ಅಂಕಿತ, ಆದಿಯಲ್ಲಿ ರಾಗ-ತಾಳ ಸೂಚನೆ, ಬೆಡಗಿನ ಹಾಗೂ ಸರಳ ಭಾಷೆಯ ಬಳಕೆ, ಆದಿಪ್ರಾಸ, ದೇಶೀ ಛಂದೋಬಂಧ, ವೀರಶೈವ ತತ್ವ, ಲೋಕನೀತಿಪರವಾದ ವಸ್ತು, ಸಂಗೀತ ಸಾಹಿತ್ಯ ಸಾಮರಸ್ಯ ಇದು ಸ್ವರವಚನಗಳ ಸ್ಥೂಲ ಸ್ವರೂಪ-ಲಕ್ಷಣ.

೭. ಈ ಸಾಹಿತ್ಯ ರಚಿಸುವುದರ ಮೂಲಕ ಕನ್ನಡ ಹಾಡುಗಬ್ಬ, ಕರ್ನಾಟಕ ಸಂಗೀತ, ದೇಶೀ ಛಂದಸ್ಸು, ತಾತ್ವಿಕ, ಆಧ್ಯಾತ್ಮಿಕ, ನೈತಿಕ ಬದುಕು - ಒಟ್ಟಾರೆ ನಮ್ಮ ಸಂಸ್ಕೃತಿ ಸಂವರ್ಧನೆ, ಶ್ರೀಮಂತಿಕೆಗಳಿಗೆ ಶರಣರು ನೆರವಾಗಿದ್ದಾರೆ.

ಹೀಗೆ ಕನ್ನಡದ ಒಂದು ಅಪೂರ್ವ ಸಾಹಿತ್ಯ ಪ್ರಕಾರವಾಗಿ ವಿಪುಲವಾಗಿ. ಬೆಳೆದು ನಿಂತ ಸ್ವರವಚನ ಸಾಹಿತ್ಯ ಈಗ ಬೆಳಕು ಕಂಡದ್ದು ಕಾಲುಭಾಗ ಮಾತ್ರ. ಇನ್ನೂ ಮುಕ್ಕಾಲುಭಾಗ ಹಸ್ತಪ್ರತಿಗಳಲ್ಲಿ, ಜನರ ಬಾಯಲ್ಲಿ ಉಳಿದಿದೆ. ಅದನ್ನು ಸಂಗ್ರಹಿಸಿ ಪರಿಷ್ಕರಿಸಿ ಪ್ರಕಟಿಸುವ, ಸಭೆ-ಸಮಾರಂಭ, ಭಜನೆಗಳಲ್ಲಿ ಹಾಡಿ, ಖ್ಯಾತ ಸಂಗೀತಗಾರರಿಂದ ಸ್ವರಜೋಡಣೆ ಮಾಡಿಸಿ, ಉತ್ತಮ ಗಾಯಕರಿಂದ ಹಾಡಿಸಿ, ಕ್ಯಾಸೆಟ್ ಮಾಡಿಸಿ ಪ್ರಚಾರಗೊಳಿಸುವ ಕಾರ್ಯ ತ್ವರಿತಗತಿಯಲ್ಲಿ ನಡೆಯಬೇಕಾಗಿದೆ.



# ಅಪ್ರಕಟಿತ ಸ್ವರವಚನಗಳು

ಎಸ್. ಶಿವಣ್ಣ

ಸಮುದ್ರದ ಮೇಲ್ಭಾಗದಲ್ಲಿ ತೇಲುತ್ತಿರುವ ಮಂಜುಗಡ್ಡೆ (Ice berg)ಗಳ ೧/೧೦ ಭಾಗ ಮಾತ್ರ ಕಣ್ಣಿಗೆ ಕಾಣುತ್ತಿದ್ದು ಉಳಿದ ೯/೧೦ ಭಾಗ ಸಮುದ್ರದ ಒಳಗೆ ಕಾಣಿಸದಂತೆ ಇರುವುದಂತೆ. ಅದರಂತೆ ಈಗ ಪ್ರಕಟವಾಗಿರುವ ಸ್ವರವಚನಗಳಿಗಿಂತ ಅಪ್ರಕಟಿತ ಸ್ವರವಚನಗಳ ಪ್ರಮಾಣವೇ ಅಧಿಕವಾಗಿದೆ. ಈ ಸ್ವರವಚನಗಳು ಓಲೆ, ಕಾಗದದ ಪ್ರತಿಗಳಲ್ಲಿ ಲಭ್ಯವಿವೆ. ಇವುಗಳನ್ನು ಸಂಗ್ರಹಿಸುವ / ಪ್ರತಿಮಾಡುವ / ಅಚ್ಚಿಗೆ ಸಿದ್ಧಪಡಿಸಬೇಕಾದ ಕಾರ್ಯಗಳು ತೀವ್ರಗತಿಯಿಂದ ಸಾಗಬೇಕಾಗಿದೆ.

ಅಲ್ಲದೇ ಎಷ್ಟೋ ಸ್ವರವಚನಗಳು/ ತತ್ತ್ವದ ಪದಗಳು ಲಿಖಿತವಾಗದೆ ಮೌಖಿಕ ಪರಂಪರೆಯಲ್ಲಿ ಪ್ರಚಲಿತವಿದ್ದು ಭಜನೆಮೇಳಗಳಲ್ಲಿ ದೊರೆಯುತ್ತವೆ. ಇವನ್ನು ಆಧುನಿಕ ವೈಜ್ಞಾನಿಕ ಸಲಕರಣೆಗಳನ್ನು ಉಪಯೋಗಿಸಿಕೊಂಡು ಧ್ವನಿಮುದ್ರಿಸಿ, ಲಿಪಿಗೊಳಿಸಿ ಸಂಗ್ರಹಿಸಬೇಕಾಗಿದೆ. ಈ ಪ್ರಯತ್ನ ಹೆಚ್ಚಾದಷ್ಟು ಹೊಸ ಹೊಸ ಅಪ್ರಕಟಿತ ಸ್ವರವಚನಗಳು ಲಭಿಸುವುದರಲ್ಲಿ ಸಂಶಯವಿಲ್ಲ.

## ಏಕಕರ್ತೃಕ ಸ್ವರವಚನ

ಸ್ವರವಚನಗಳಲ್ಲಿ ಏಕಕರ್ತೃಕ ಸ್ವರವಚನ ಸಂಗ್ರಹಗಳು ೩-೪ ಮಾತ್ರ ಉಪಲಬ್ಧವಿದ್ದು ಪ್ರಕಟಗೊಳ್ಳಬೇಕಾಗಿದೆ. ಅವುಗಳ ವಿವರ ಇಂತಿದೆ:

**ಐನೂಲಿ ಗುರುಲಿಂಗ:**

ಈ ಅಂಕಿತದ ಕರ್ತೃ ಐನೂಲಿ ಬಕ್ಕಪ್ಪಯ್ಯ. ಈತ ಐನೂಲಿ ಕರಿಬಸವಾರ್ಯನ(ಕ್ರಿ. ಶ. ೧೭೭೪ -೧೮೪೦) ಕಕ್ಕನ ಮಗ. ಈತನ ಗುರು ಗುರುಲಿಂಗಾರ್ಯ. ಪತ್ನಿ ಗಿರಿಜಮ್ಮ. ಈತನ ಲಿಂಗೈಕ್ಯವನ್ನು ಕುರಿತು ಕರಿಬಸವಾರ್ಯ ಸ್ವರವಚನವೊಂದನ್ನು ರಚಿಸಿದ್ದಾನೆ.

ಈತ ಸ್ವರವಚನಗಳೊಡನೆ 'ಜಲಕ್ರೀಡೆ ಹಾಡು', ಹಾಗೂ 'ರಾಜೇಶ್ವರ ಪುರಾಣ'ಗಳನ್ನು ರಚಿಸಿದ್ದಾನೆ. ಈತನ ಸ್ವರವಚನಗಳು 'ಕ. ಅ. ಕೇಂದ್ರ'ದ ಕಾಗದದ ಹಸ್ತ ಪ್ರತಿಗಳಲ್ಲಿ ಲಭ್ಯವಿವೆ.

**ಗುರು ಚೆನ್ನಬಸವ:**

ಈ ಅಂಕಿತದ ಕರ್ತೃ ತುಮಕೂರು ಸೋಮೇಕಟ್ಟೆ ಚೆನ್ನವೀರಸ್ವಾಮಿ. ಈತನ ಕಾಲ ಸು. ೧೭೪೦. ಸೋಮೇಕಟ್ಟೆ ಬುಡಕಟ್ಟಿಗೆ ಸೇರಿದ ಇವರ ಸ್ವರವಚನವೊಂದರಲ್ಲಿ ತುಮಕೂರ ಬಸವನ ಉಲ್ಲೇಖವಿದೆ. ಇವರು ಕಂದ, ತ್ರಿವಿಧಿ, ಷಟ್ಪದಿ, ರಗಳೆ, ಹಾಡು ಮೊದಲಾದ ಛಂದೋಪ್ರಕಾರಗಳಲ್ಲಿ ಸುಮಾರು ೨೫ ಕೃತಿಗಳನ್ನು ರಚಿಸಿದ್ದಾರೆ. ಇವರ ಕೃತಿಗಳಿಗೆ ಹಾಗೂ ಸ್ವರವಚನಗಳಿಗೆ ಸಂಬಂಧಿಸಿದ ಓಲೆ ಕಟ್ಟುಗಳೆರಡು ಹೊನ್ನವಳ್ಳಿ (ತಿಪಟೂರು ತಾ.) ಕರಿಸಿದ್ಧೇಶ್ವರ ಮಠದಲ್ಲಿವೆ. ಇವರ ಸುಮಾರು ೯೦ ಸ್ವರವಚನಗಳು ಲಭ್ಯವಿವೆ.

ಇವರ ೨೭ + ೧ ಸ್ವರವಚನಗಳು ಸ್ವರವಚನ ಸಂಪುಟ ೧, ೨ ರಲ್ಲಿ(೧೯೯೫) ಪ್ರಕಟವಾಗಿವೆ.

**ಗುರುಬಸವಲಿಂಗ / ಗುರುಬಸವೇಶ :**

ಕರ್ತೃ ಅಜ್ಞಾತ. ಈತನ ಸುಮಾರು ೧೭೦ ಸ್ವರವಚನಗಳು ಲಭ್ಯ. ಇಲ್ಲಿನ ಸ್ವರವಚನವೊಂದರಲ್ಲಿ ಇಮ್ಮಡಿ ಮುರಿಗಾ ಗುರುಸಿದ್ಧಸ್ವಾಮಿಗಳ ಉಲ್ಲೇಖವಿದೆ. ಹೀಗಾಗಿ ಈತ ಹದಿನೆಂಟನೆಯ ಶತಮಾನದ ಪೂರ್ವಾರ್ಧದಲ್ಲಿರಬಹುದು. ಈತನ ಕೃತಿಯ ಓಲೆ ಪ್ರತಿ ಚಿತ್ರದುರ್ಗದ ಬೃಹನ್ಮಠದಲ್ಲಿದೆ. ಈತನೇ ರಚಿಸಿರುವ 'ವಿರಕ್ತ ಹುಚ್ಚನ ಬೋದಡೆ ಗುರುಬಸವಪ್ಪನ ತಾರಾವಳಿ'ಯನ್ನು ಡಾ. ವೀರಣ್ಣ ರಾಜೂರ ಅವರು 'ವೀರಶೈವ ತಾರಾವಳಿ ಸಂಪುಟ' [ಪು. ೪೫೭-೪೭೦ (೧೯೯೪)] ದಲ್ಲಿ ಪ್ರಕಟಿಸಿದ್ದಾರೆ.

**ಕವಿಲಿಂಗ (೧೪೯೦):**

ಈತನ ಇತಿವೃತ್ತ, ಕೃತಿಗಳ ಬಗೆಗೆ ಸ್ವರವಚನ ಸಂಪುಟ-೨, ಮೊದಲ ಮಾತು ೧೯೯೫, ಪು. XI ನೋಡಿ. ಈತನ ಸ್ವರವಚನಗಳು 'ಸ್ವರವಚನ ಸಂಪುಟ-೧, ೨, ೪'ರಲ್ಲಿ ಕ್ರಮವಾಗಿ ೪, ೫೭, ೧ ಪ್ರಕಟವಾಗಿವೆ. ಅಲ್ಲದೆ ಈತನ ಜಾವಳಿ ರೂಪದ ೯ ರಚನೆಗಳು 'ಕನ್ನಡ ಜಾವಳಿಗಳು [(ಸಂ) ಕೆ. ವಿ. ಆಚಾರ್, ೧೯೭೭, ಪುಟ ೧೦೪-೦೯] ಕೃತಿಯಲ್ಲಿವೆ. ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಮದರಾಸಿನಿಂದ ಬಂದ ಕಾಗದದ ಹಸ್ತಪ್ರತಿಯಲ್ಲಿ ಹಲವಾರು ಅಪ್ರಕಟಿತ ರಚನೆಗಳಿವೆ.

**ಗುರು ಬಸವಸಿದ್ಧೇಶ:**

ಗುರುಬಸವಾರ್ಯ ಈ ಅಂಕಿತದ ಕರ್ತೃ. ಈತನ ಕೃತಿಯನ್ನು ಹಸ್ತಪ್ರತಿಯಲ್ಲಿ 'ಕೈವಲ್ಯ ಪದ್ಧತಿ' ಎಂದು ಹೆಸರಿಸಿದೆ. ಇದರಲ್ಲಿ ೫ ವಿಭಾಗಗಳಿದ್ದು ೧೩೧ ಸ್ವರವಚನಗಳಿವೆ. ಸ್ವರವಚನವೊಂದರಲ್ಲಿ ಈತನ ಗುರುಪೀಳಿಗೆ ಇಂತಿದೆ.

ಗುರುತೋಂಟದ ಸಿದ್ಧೇಶ
|
ಬಸವ
|
ಚೆನ್ನಬಸವ
|
ಸಂಗನಬಸವೇಶ್ವರ
|
ಗುರುಬಸವಾರ್ಯ

ಈತನ ಸ್ವರವಚನವೊಂದನ್ನು ಡಾ. ವೀರಣ್ಣ ರಾಜೂರ ಅವರು ಪರಂಜ್ಯೋತಿ ೧೭-೧೧, ೧೯೮೪, ಪು. ೫೯೩-೯೫ರಲ್ಲಿ ಪ್ರಕಟಿಸಿದ್ದಾರೆ.

**ಚೀಲಾಳೇಶ / ಚೀಲಾಳೇಶ್ವರ:**

ಕರ್ತೃ ಅಜ್ಞಾತ. ಚೀಲಾಳ ಬಗೆಯ ಪ್ರವರ್ತಕನಾದ ಚೀಲಾಳಪ್ಪನ ಹೆಸರನ್ನೇ ತನ್ನ ಸ್ವರವಚನಗಳ ಅಂಕಿತವನ್ನಾಗಿ ಬಳಸಿಕೊಂಡ ಈತನ ಕಾಲ ಸುಮಾರು ೧೮ನೆಯ ಶತಮಾನದ ಪೂರ್ವಾರ್ಧವಾಗಿರಬಹುದು. ಶ್ರೀ ಟಿ. ಎಂ. ಗಿರಿರಾಜು ಅವರ ಬಳಿ ಈತನ ಸ್ವರವಚನಗಳ ಓಲೆ ಪ್ರತಿ ಇದ್ದು ಅದರಲ್ಲಿ ಸುಮಾರು ೧೫೦ಕ್ಕೂ ಮಿಕ್ಕ ಸ್ವರವಚನಗಳಿವೆ. ಈತ 'ಲಿಂಗಾಂಗ ಸಾಮರಸ್ಯ ಪಾರಿಜಾತ'ವನ್ನು ರಚಿಸಿದ್ದಾನೆ.

ಈತನ ೧೧ ಸ್ವರವಚನಗಳು 'ಸ್ವರವಚನ ಸಂಪುಟ ೧, (ಸಂ. ಎಸ್. ಶಿವಣ್ಣ, ೧೯೯೫, ಪು. ೯೪-೧೧೦)ರಲ್ಲಿವೆ.

## ಬಿಡಿ ಸ್ವರವಚನಗಳು

ಈ ಮುಂದೆ ಕೆಲವು ಬಿಡಿ ಸ್ವರವಚನಕಾರರ ಪ್ರಕಟಿತ/ಅಪ್ರಕಟಿತ ಸ್ವರವಚನಗಳ ಬಗೆಗೆ ತಿಳಿದುಬಂದಿರುವ ಅಂಶಗಳನ್ನು ಸೂಚಿಸಿದೆ.

**ಅಮರಕುಂಡಯ್ಯ-ಮಲ್ಲಿನಾಥಯ್ಯ[೧+೧] :**

ಈತನ 'ಏತವಲ್ಲ ಬಾರೆನ್ನ ಪ್ರಿಯ . . . ' ಎಂಬ ಸ್ವರವಚನ 'ಸ್ವರವಚನ ಸಂಪುಟ-೨' ರಲ್ಲಿದೆ. 'ಸ್ವ ಸದ್ಗುರುವಿನ ದಯದಿಂದೆಲ್ಲ . . . .' ಅಪ್ರಕಟಿತ.

**ಅರೂಢಮಲ್ಲ[೩+೪]:**

ಈತನ ೩ ಸ್ವರವಚನಗಳು 'ಸ್ವರವಚನ ಸಂಪುಟ-೧'ರಲ್ಲಿವೆ. ಈ ಮುಂದಿನ ೪ ಅಪ್ರಕಟಿತ:

೧. ಆರಿಗ್ಯಾರುಯಿಲ್ಲ ಆಸತ್ತು ಬರಹೊಲ್ಲ . . . '
೨. 'ಎಂತು ತಿಳಿವರಭವನಖಿಳ ವ್ಯಾಪಕನೆಂದು . . . . '
೩. 'ಎಂಥಾ ಸೋಜಿಗವುಳ್ಳ ದೇವನೆ . . . . .'
೪. 'ಶರಣು ಶ್ರೀ ಮಹಂಮೇರುನಾಯಕಾ . . . . '

ಆರೂಢ ಶಾಂತ(೩+೩):

ಪ್ರಕಟಿತ

೧. 'ಅಹುದಹುದು ಸದ್ಗುರುವೆ. . . . '
೨. 'ಏನುಬೇಕೋ ಜೋಗಿಗೇನು ಬ್ಯಾಡ . . . .'
೩. 'ನೋಡು ನೋಡಲೆ ಆತ್ಮ ನಿಜವಾಗಿ. . . .'

ಅಪ್ರಕಟಿತ

೧. 'ಈಗ ಮುಕ್ತನಾಗಬೇಕಣ್ಣ . . . .'
೨. 'ಸುಮ್ಮನಿರು ಮನವೆ ಪರಬ್ರಹ್ಮ ನೀನಾಗುವೆ . . . .'
೩. 'ಹುಟ್ಟಿದರಳಿವಡೇನು. . . . . '

ಎತ್ತಿನ್ಹಟ್ಟಿ ಈಶ(೨೮+೧) :

ಕರ್ತೃ ಮಲ್ಲಿಕಾರ್ಜುನ. ಈತನ ೨೮ ರಚನೆಗಳು 'ಸ್ವರವಚನ ಸಂಪುಟ-೧'ರಲ್ಲಿವೆ. 'ಎಂಥ ಒಳ್ಳೆ ಗುರುವು ದೊರೆತನೆ . . . . ' ಅಪ್ರಕಟಿತ.

ಐನೂಲಿ ಕರಿಬಸವಾರ್ಯ(೧೭೪೫-೧೮೪೦):

ಈತನ ಇತಿವೃತ್ತ ಹಾಗೂ ಕೃತಿಗಳ ಬಗೆಗೆ ಸ್ವರವಚನ ಸಂಪುಟ-೨ ರ ಮೊದಲ ಮಾತು, ೧೯೯೫, ಪು. XV-XVI ನೋಡಿ. ಈತನ ಕೆಲವು ಸ್ವರವಚನಗಳು ೧೯೩೧, ೧೯೩೩ ಹಾಗೂ ೧೯೯೪ ರಲ್ಲಿ ಪ್ರಕಟವಾಗಿವೆ. ಕಲಬುರ್ಗಿ ಪರಿಸರದಲ್ಲಿನ ಹಸ್ತಪ್ರತಿಗಳಲ್ಲಿ ಈತನ ಸ್ವರವಚನಗಳು ವಿಪುಲವಾಗಿ ಲಭ್ಯವಿದ್ದು ಪ್ರಕಟವಾಗಬೇಕಾಗಿದೆ.

ಕಂಪಲಿಪುರ-ರಾಮಲಿಂಗ(೧+೧):

ಕೃತಿಕಾರ ಬಳ್ಳಾರಿಯ ಸಕ್ಕರೆ ಕರಡಪ್ಪ(೧೯ ಶ)ನವರ ಸಮಕಾಲೀನ.

ಭರಣಿ ಮಳೆಯಿಂದಾದ ಅನಾಹುತದ ಚಿತ್ರಣವನ್ನು ವಸ್ತುವಾಗುಳ್ಳ ೧೧ ನುಡಿಗಳ ಈತನ ಸ್ವರವಚನ ಅಪ್ರಕಟಿತ.

ಕೋರಾಣ್ಯದ ಶಿವಲಿಂಗ(೪+೧) :

'ಸ್ವರವಚನ ಸಂಪುಟ-೧' ರಲ್ಲಿ ೪ ಸ್ವರವಚನಗಳಿವೆ. 'ನಿಲ್ಲದೆ ಕೂಗುತಿಗೆ ಪಕ್ಷಿಯು ತಾನು . . .' ಅಪ್ರಕಟಿತ.

**ಗುರುಚೆನ್ನ(೧+೧):**

'ಆಗದಾಗದು ಶಿವಯೋಗ .. . ..' (ಎಸ್. ಉಮಾಪತಿ, ೧೯೬೪) ಶ್ರೀ. ಪಿ. ಎಂ. ಗಿರಿರಾಜು ಅವರ ಸಂಗ್ರಹದಲ್ಲಿನ 'ಮಂಗಳಂ ಮಹಂ ಮೇರುಮಂದಿರ ನಿವಾಸಗೆ' ಅಪ್ರಕಟಿತ.

**ಗುರುಪ್ರಿಯ ಶಂಕರ/ಶಂಕರೇಶ್ವರ(೧+೧):**

'ಅನವರತ ಬಿಡದೆನ್ನ . . . . ' ಪಲ್ಲವಿಯ ವಚನ ಕಂಬಾಳ ಶಾಂತಮಲ್ಲೇಶನ 'ಗಣವಚನ ರತ್ನಾವಳಿ'ಯಲ್ಲಿ ಪ್ರಕಟವಾಗಿದೆ.

'ಧರಣಿಯೊಳಗೆ ನಾನು ಸಾರ ಬಂದೆನೊ . . . .' ಅಪ್ರಕಟಿತ.

**ಗುರು ಮುದ್ದುಸಂಗ/ಸಂಗಮ-ಮುದ್ದುಸಂಗಪ್ಪ(೨+೨):**

೧೯೭೬ರಲ್ಲಿ ಶ್ರೀ ಗೌ. ಮ. ಉಮಾಪತಿ ಶಾಸ್ತ್ರಿಗಳು ಈತನ

'ತಂದು ತೋರಿಸೆ ಎನ್ನ ಮನೋಹರನ . . . ' ಹಾಗೂ
'ಶಿವನಾಮಮಂತ್ರವ ನೀ ಬಿಡದೆ . . . .'

ವಚನಗಳನ್ನು ಪ್ರಕಟಿಸಿದ್ದಾರೆ.

'ಐಕ್ಯ ಪ್ರಣವಾ ಹರಪಾದಾಂಬುಜ . . . .' ಹಾಗೂ
'ಸಾರುತ್ತೈತೆ ಅಮೃತಸಾರವ . . . . ' ಅಪ್ರಕಟಿತ.

**ಗುರುವಿರೂಪಾಕ್ಷ(೪+೧):**

'ಅರಸುತನವನು ಪಡೆದರಿನ್ನೇನು . . . ' ಸ್ವರವಚನ ಶ್ರೀ ಗೌ. ಮ. ಉಮಾಪತಿ ಶಾಸ್ತ್ರಿಗಳಿಂದ ೧೯೭೬ರಲ್ಲಿ ಪ್ರಕಟವಾಗಿದೆ.

'ಅರುವಿನ ಜ್ಯೋತಿ . . . .' , 'ತಿಳಿದು ನೋಡೆ . . .' ಹಾಗೂ
'ನಿನ್ನ ಸ್ಮರಣೆ ಎನಗಿರಲಿ . . . .'

ಸ್ವರವಚನ ಸಂಪುಟ-೧ ರಲ್ಲಿವೆ.

'ರಕ್ಷಿಸೊ ಎನ್ನ ನೀನು ರಜತನಿವಾಸ . . . ' ಅಪ್ರಕಟಿತ.

**ಗುರು ಸಂಭುಲಿಂಗ(೪+೪):**

'ಯೋಗವ ಮಾಡಬೇಕಣ್ಣ . . . ' (ಸುಕುಮಾರ, ೩.೬, ೧೯೫೩, ೨೨೧), 'ಲಿಂಗಪೂಜೆಯ ಮಾಡು ಅಲಸದೆ . . . . ' (ಬಿಡಿ ಸ್ವರವಚನಗಳು, ೧೯೭೮) ಹಾಗೂ 'ಶರಣ ಪದ್ಧತಿಗಿನ್ನು ಸರಿಮಿಗಿಲುಂಟೆ . . . ', 'ಸಲಹು ನೀನೆನ್ನ ಗೌರಿ ಸಂತತ . . . .' (ಸ್ವರವಚನ ಸಂಪುಟ-೨)

ಈ ಮುಂದಿನ ನಾಲ್ಕು ಅಪ್ರಕಟಿತ.

೧. 'ಆನಂದಮಯನಾಗಬೇಕೋ . . . . '
೨. 'ಚಿಂತೆ ಬ್ಯಾಡೆಲೆ ಮನವೆ . . . .'
೩. 'ನಿಜವೆಂದು ಪಿಡಿದು ಪೂಜಿಸು . . . '
೪. 'ಮಾಜಬ್ಯಾಡ ಮಧುರವಾಣಿ . . . . '

ಗುರುಶಾಂತವೀರೇಶ(೧+೧):

'ಕೂಸಕಂಡಿರ ಜ್ಞಾನಿಗಳೆಲ್ಲ . . . .' ಬಸವಪಥ(೧೩.೬, ೧೯೯೧, ೪೩)ದಲ್ಲಿದೆ.

'ಬಿಡುವುದೊಳ್ಳಿತೆ ಭಕ್ತಿಯ . . . .' ಅಪ್ರಕಟಿತ.

ಗುರು ಸಿದ್ಧೇಶ್ವರ(೧+೨):

'ಜಯ ಶಾಂತನೆ ಜಯ ಶಾಂತನೆ . . . ' 'ಸ್ವರವಚನ ಸಂಪುಟ-೨' ರಲ್ಲಿದೆ.

'ಮಂಗಳ ಜಯ ಜಯ ಪಾವಕನೇತ್ರಗೆ . . . .' ಹಾಗೂ 'ಶರಣು ಶರಣು ಶಿವಶರಣರಿಗೆ . . . .' ಅಪ್ರಕಟಿತ.

ಗುಹೇಶ್ವರ/ಗೊಹೇಶ್ವರ-ಅಲ್ಲಮಪ್ರಭು(೧೧೬೦):

ಈತನ ಸ್ವರವಚನಗಳು ಈಗಾಗಲೇ ಮಹಾಲಿಂಗದೇವನ 'ಏಕೋತ್ತರ ಶತಸ್ಥಲ', ಚೆನ್ನವೀರಾರ್ಯನ 'ಶಿವಯೋಗ ಪ್ರದೀಪಿಕೆ' ಮತ್ತು ಕಂಬಾಳ ಶಾಂತಮಲ್ಲೇಶನ 'ಗಣವಚನ ರತ್ನಾವಳಿ'ಗಳಲ್ಲಿ ಪ್ರಕಟವಾಗಿವೆ.

ಅಲ್ಲಿಲ್ಲದ ಈ ಮುಂದಿನ ೬ ರಚನೆಗಳು ಅಪ್ರಕಟಿತ.

೧. 'ಅಮಮ ಎಲ್ಲಿ ನೋಡಿದಡಿಲ್ಲ . . . .'
೨. 'ಇನ್ನೇನು ಇನ್ನೇನು ಇನ್ನೇನು . . . .'
೩. 'ಗೋವಿಂದ ಶಿವಗೋವಿಂದ . . . .'
೪. 'ನೋಡಿರೆ ಅಕ್ಕ ನೋಡಿರೆ . . . . '
೫. 'ಮುಂಡೆಯರಾದರೆಲ್ಲ . . . . '
೬. 'ಸಣ್ಣಮಣಿಗೊಂದು . . ..'

ಜ್ವಲತ್ಕಂಠ ಗುರುಲಿಂಗ/ಗುರುಲಿಂಗಭೂಷ(೧+೧):

'ಜಯ ಜಯ ಬೆಳಗಿರಿ ಆರತಿಯ . . . ..' (ಸ್ವರವಚನಸಂಪುಟ-೨)
'ಲಿಂಗಪೂಜೆಯ ಮಾಡದೆ ಭವಭವದಿ . . . . ' ಅಪ್ರಕಟಿತ.

ಜ್ಞಾನಲಿಂಗ (೧+೧):

'ಒದಗಿತು ಮುಂದಣ ಪಯಣ . . ..' (ಸ್ವರವಚನ ಸಂಪುಟ-೨)
'ಇಷ್ಟಲಿಂಗದಿ ಮನಮುಟ್ಟಿಯಾಡುತ . . . .' ಅಪ್ರಕಟಿತ.

ಜ್ಯೋತಿರ್ಲಿಂಗ(೧+೧):

'ಏಕೆ ಚಿಂತಿಸುವೆ ಬರಿದೆ . . . .' ೧೯೫೪ರಲ್ಲಿ ಶ್ರೀ ಎಸ್. ಉಮಾಪತಿಯವರಿಂದ ಪ್ರಕಟಿತ.

'ಹೋದರೆ ಹೋಗಿದ್ದರೆ ಇರು ಎನಗದರ . . . . .' ಅಪ್ರಕಟಿತ

ತುರುಬಿಗುಡ್ಡದ ಶಿವಲಿಂಗ (೨+೫):

'ಅರು ಬಲ್ಲರಯ್ಯ ಸ್ವಾಮಿ . . ..' (ಶಿವಾನುಭವ, ೧೦.೧, ೩೭) ಹಾಗೂ 'ಕಣ್ಣ ಮುಚ್ಚದೆ ನೋಡುವ ಬಾರೆ . . . ." ('ಸ್ವರವಚನ ಸಂಪುಟ-೨'), ಈ ಮುಂದಿನ ೫ ಅಪ್ರಕಟಿತ.

೧. 'ಎಂಥ ದೇವನು ಶಿವನು . . . . .'
೨. 'ಗೌರಿಯ ಹುಣ್ಣವೆ ಬಂದಿತಲ್ಲ . . . .'
೩. 'ದೇವ ನಿಮ್ಮ ಭಜನೆಯ . . . . '
೪. 'ಬೇಡಿಕೊಂಬುವೆ ಚಿನುಮಯರೂಪನೆ . . . . '
೫. 'ಮದಿವಿ ಮಾತ ಹೇಳುತೇನಿ . . ..'

ನಿಜಗುರುಶಾಂತ (೮+೩):

ಕಂಬಾಳ ಶಾಂತಮಲ್ಲೇಶನ 'ಗಣವಚನ ರತ್ನಾವಳಿ'ಯಲ್ಲಿ ಈತನ ೮ ರಚನೆಗಳಿವೆ.

೩ ಅಪ್ರಕಟಿತ ವಚನಗಳ ಆದಿ ಇಂತಿದೆ.

೧. 'ಅಂಗ ಮನ ಪ್ರಾಣ ಭಾವಂಗಳೊಳು . . . .'
೨. 'ಮಾಯ ಮೋಹಕೆ ಸಿಕ್ಕಿ . . . .'
೩. 'ಹೆಣ್ಣಿನ ಸಂಗದಲಿ ಮೈಮರೆದ . . ..'

ನಿಜಗುರುಶಾಂತಮಲ್ಲಯ್ಯ-ವೀರಣ್ಣದೇವ (೧+೧):

'ಲಿಂಗವಂಗವನಮರ್ದಿರೆ . . . .' ಗಣವಚನರತ್ನಾವಳಿಯಲ್ಲಿದೆ.

'ತನುಗುಣಂಗಳು ಹಿಂಗಿ ಮನವು . . ..' ಅಪ್ರಕಟಿತ.

ನಿರಂಜನ(೧+೧):

'ಜ್ಯೋತಿಯೊಳಗೊಂದು ಜ್ಯೋತಿ . . . . .' ಸ್ವರವಚನ ಸಂಪುಟ-೨ ರಲ್ಲಿದೆ.

'ಬೆಳಗಿರೆ ಆರತಿಯ ಸತಿಯರು . . . .' ಅಪ್ರಕಟಿತ.

ನಿರಂಜನಲಿಂಗ-ವಿರತತೋಂಟದಾರ್ಯ(೫+೧):

"ಸ್ವರವಚನ ಸಂಪುಟ ೧, ೨ 'ರಲ್ಲಿ ಈತನ ೫ ರಚನೆಗಳಿವೆ.

'ದಿನಕರ ಕೋಟಿ ಪ್ರಭಾಂಗ . . . . .'ಅಪ್ರಕಟಿತ .

ನಿರಂಜನ ಸಿದ್ಧ (೧+೧):

'ನಿನ್ನೊಳಗೆ ನೀ ತಿಳಿದು . . . . ' ' ಅದ್ವೈತ ತತ್ವಗಳು' (೧೯೧೫, ದ್ವಿತೀಯ ಮುದ್ರಣ) ವಿನಲ್ಲಿದೆ.

'ತನ್ನ ತಾನರಿಯಬೇಕು . . . .'ಅಪ್ರಕಟಿತ.

ನಿರುಪಾಧಿ (೬+೧):

'ಕನ್ನಡ ಪರಮಾರ್ಥ ಸೋಪಾನ ' ಹಾಗೂ 'ಕನ್ನಡ ಸತ್ಪುರುಷರ ಅನುಭಾವ ಪದಗಳು ' ಭಾಗ ೩, ೪, ರಲ್ಲಿ ಈ ಅಂಕಿತದ ೬ ಪದಗಳಿವೆ.

'ಯಂಥ ಶಿವಯೋಗಿ ಬಂದಾನೆ . . . .'ಅಪ್ರಕಟಿತ.

ನಿರ್ವಾಣ ಪ್ರಿಯಲಿಂಗ(೧+೧):

'ಮುಂದುಮುಂದಕೆ ಹೋಗಿ . . . .'

ಶಿವಯೋಗ ಪ್ರದೀಪಿಕೆಯಲ್ಲಿದೆ.

'ಲಜ್ಜೆ ನಾಚಿಕೆಯಿಲ್ಲದ ಕೋಟೆ . . . .' ಅಪ್ರಕಟಿತ.

ಪ್ರಭು-ಗೂಗಲ್ಲ ಪರಪ್ಪಯ್ಯ(ಸು. ೧೭೮೦):

ಈತನ 'ನಾರಿಮಣಿ ಘನಸಾರದ ಆರತಿಯ . . . . ' ಕ್ರಿ. ಶ. ೧೮೩೮ರಲ್ಲಿ ಪ್ರತಿಯಾದ ಓಲೆ ಕೃತಿಯಲ್ಲಿದ್ದು ಅಪ್ರಕಟಿತ.

ಬೂದಿ ಬಸವ(೧+೧):

'ಇಂದು ಎನ್ನ ರಕ್ಷಿಸಲ್ಕೆ . . . . . ' ಸ್ವರವಚನ ಸಂಪುಟ-೧ ರಲ್ಲಿದೆ

'ಬೆಳಗಿದೆನಾರತಿಯ ಬೆಳಗಿದೆ ಸದ್ಗುರುವಿಗೆ . . . .' ಅಪ್ರಕಟಿತ.

ಮದ್ದಾನೀಶ(೪+೨):

ಸ್ವರವಚನ ಸಂಪುಟ-೧, ೨ ರಲ್ಲಿ ೪ ರಚನೆಗಳಿವೆ.

'ಏತ್ತುವೆನು ಮುಂಡಿಗೆಯ . .. . . . .' ಹಾಗೂ ' ಎಂಥಾ ದಯವಂತನೆ ಶ್ರೀ ಗುರು . .. . . . .' ಅಪ್ರಕಟಿತ.

ಮುಚಖಂಡಿ ವೀರ (೨+೩):

'ಎಂಥಾ ಸವಿ ಗುರುತಿನ ಭಜನಿ . . . . .' (ಕನ್ನಡ ನಾಡಿನ ಸತ್ಪುರುಷರ ಅನುಭಾವ ಪದಗಳು, ಭಾಗ ಆ) ಹಾಗೂ' ಮಾರನರೂಪ ಮನಿಗೇಕೆ ಬಾರದೆ ನಿಂತ. . . . .'(ಎಸ್. ಉಮಾಪತಿ, ೧೯೯೪)ದಲ್ಲಿವೆ.

ಈ ಮುಂದಿನ ೩. ಅಪ್ರಕಟಿತ

'ಕಾಡಬೇಡವೋ ಕರುಣಾದಿ ನೋಡೋ . . . ..'
'ಕಾಂತನ ಕಾಣದೆ ತಾಳಲಾರೆನೆ . . . ..'
'ಬೇಡುವದೇನು ನಾ ನಿಮ್ಮ. . . . . . .'

ಮುದ್ದು ಗೌರೀಶ (೧+೧):

'ಬಾರನೇನೆ ಮುದ್ದು ಗೌರೀಶ . . . ' (ಗೌ. ಮ. ಉಮಾಪತಿ ಶಾಸ್ತ್ರಿ, ೧೯೭೮)

'ಬರುವ ಬಗೆ ಯಾವ ದಿನ ಭಾವ . . . .' ಅಪ್ರಕಟಿತ.

ರಾಮಲಿಂಗ(೩+೨):

ಎಸ್. ಉಮಾಪತಿಯವರು ಈ ಅಂಕಿತದ ೩ ರಚನೆಗಳನ್ನು ೧೯೯೪ರಲ್ಲಿ ಪ್ರಕಟಿಸಿದ್ದಾರೆ.

'ಜಯ ಗುರುವರ ವೀರಶೈವಾಭರಣ . . . . ' ಹಾಗೂ 'ಬೆಳಗಿರಿ ಕರ್ಪೂರರವ ಇಳೆಯೊಡೆಯನಿಗೆ . . . .' ಅಪ್ರಕಟಿತ.

ವಟಪುರದೀಶ ಚೆನ್ನವೀರೇಶ(೨+೧):

'ಏನು ಬಗೆಯಲಿ ಶಿವನೆ . . . .' (ಸುಕುಮಾರ ೧೭.೫, ೧೯೭೮, ೧ ) ಹಾಗೂ'ಮದಗಜಗಮನೆ ಮಲಗುವೆನೆ . . . ' (ಎಸ್. ಉಮಾಪತಿ, ೧೯೯೪)ಗಳಲ್ಲಿವೆ.

'ದೇವಿ ಪಾಲಯ ಶ್ರೀ ಗಿರಿಜಾತೆ. . . ..' ಅಪ್ರಕಟಿತ.

ವಿಮಲಾನಂದ(೧+೧):

'ಸಾರಿ ಹೇಳುವೆ ಮೂರು ಬಾರಿ . . . .' (ಕನ್ನಡ ನಾಡಿನ ಅನುಭಾವಿ ಸತ್ಪುರುಷರ ಪದಗಳು, IV, ೧೯೭೧)ರಲ್ಲಿದೆ.

'ಪ್ರಾಣಲಿಂಗಕೆ ಎಣೆಯಾಗಿಹ ವಸ್ತುವ . . . .' ಅಪ್ರಕಟಿತ.

ವಿರೂಪಾಕ್ಷೇಶ್ವರ(೧+೧):

'ಮುತ್ತಿನಾರತಿ ಎತ್ತಿರೆ ಮುಕ್ತಿವರಗೆ . . ..' (ಸುಕುಮಾರ , ೫.೫, ೧೯೫೫, ೧೭೨)

'ಕಂಡೆನು ಕಮಲ ಭಾಸ್ಕರರ ಕೋಟಿ . . . . ' ಅಪ್ರಕಟಿತ.

ಸಂಗನಬಸವ(೨+೨):

'ಬೆಳಗಿನ್ನೆಲ್ಲಿಹುದೊ ಲಿಂಗದ . . .' (ಶಿವಾನುಭವ, ೧೦.೧, ೩೭.೮) ಹಾಗೂ 'ಯಾತಕಿನ್ನಲ್ಲಿಗೆ ಬಂದೆ . . .' (ಎಸ್. ಉಮಾಪತಿ, ೧೯೯೪) ಪ್ರಕಟಿತ.

'ಗುರು ತಾ ತೋರಿದ ಗುರುವಿನ ಮರತು . . . .' ಹಾಗೂ ' ಪಕ್ಷಿ ಎಂಥದಣ್ಣ ಗರಿ ಇಲ್ಲ . . . .' ಅಪ್ರಕಟಿತ.

ಸ್ವತಂತ್ರ ಸಿದ್ಧಲಿಂಗ (೧+೧):

'ಬೆಳಗಿರೆ ಮಂಗಳಾರತಿಯ . . . .' (ಸ್ವರವಚನ ಸಂಪುಟ-೧)

'ಎನ್ನ ಅಪರಾಧವ ನೋಡದೆ . . . .' ಅಪ್ರಕಟಿತ.

ಸಿದ್ಧಪ್ರಭುವೇ-ಗುಬ್ಬಿಯ ಮಲುಹಣಾರಾಧ್ಯ(೨+೧):

'ಅಪರಾಧಿ ನಾನು ಸರ್ವೇಶ . . ..' ಹಾಗೂ

'ಜಯ ಜಯ ಅನಾದಿ ಭಕ್ತಹೃದಯ . . ...' ಗಳು 'ಗಣವಚನರತ್ನಾವಳಿ'ಯಲ್ಲಿವೆ.

'ಕರಕಮಲದೊಳಗಿರ್ಪವಿಷ್ಟಬ್ರಹ್ಮನ . . ..'ಅಪ್ರಕಟಿತ.

ಸಿದ್ಧರಾಮ (V+೩):

ಪ್ರಕಟಿತ:

೧. 'ಅಲ್ಲೇ ಇಲ್ಲೇನು ಮುಕ್ತಿ ಸಲ್ಲದು . . . . .'
(ವೀಣೆ ಗುರುಬಸವರ ಪದಗಳು , ೧೮)

೨. ' ಆನೆ ಬಂತು ಮದ್ದಾನೆ . .. . .. '
(ಎಸ್. ಉಮಾಪತಿ, ೧೯೯೪)

೩. 'ಜಯದೇವ ಜಯದೇವ ಜಯತು . . . ..'
(ಶಿವಸ್ತುತಿ ಮಣಿಮಾಲ , ೧೯೦೫)

೪. 'ಶಿವ ಮಂಗಲವನು ಕೊಡು ಬೇಗ . . . . '
(ಕ. ಸ. ಅ. ಪ., VII-೪೩) ಅಪ್ರಕಟಿತ.

೧. 'ಸಾರಿ ಧ್ವಜವೆತ್ತಿದಂಥ . . .. . '

೨. 'ನಿನ್ನ ಬಿಟ್ಟು ಮತ್ತಿನ್ನು ದೇವರುಂಟೇ . . . .'

೩. 'ಹೇಗೊಲಿದೆ ಹೇಳವಗೆ ಸ್ವಾಮಿ . . . .' ಅಪ್ರಕಟಿತ.

ಸಿದ್ಧವೃಷಭ (೪+೨):

೩ ರಚನೆಗಳು ಸ್ವರವಚನ ಸಂಪುಟ-೧ ರಲ್ಲಿವೆ.

'ಬೇಡಿದ್ದೇನೋ ನಾ ಮಾತನಾಡದಿರೇಕೆ . . . . '
(ಎಸ್. ಉಮಾಪತಿ, ೧೯೯೪)

'ಗೌರೀಶ ತುಭ್ಯಂ ಮಂಗಳ . . . . .' ಹಾಗೂ
'ಮಂಗಳ ಜಯ ಜಯ ಮಾರಸಂಹಾರನಿಗೆ . . . .' ಅಪ್ರಕಟಿತ.

**ಸಿದ್ಧವೃಷಭೇಂದ್ರ (೧+೧):**

'ಜ್ಞಾನಮಯ ತಾನಾಗಬೇಕು . . . .' (ಸ್ವರವಚನ ಸಂಪುಟ-೧)

'ನಲ್ಲ ಬಾರದೆ ಪೋದನೆ . . . .' ಅಪ್ರಕಟಿತ.

**ಸೋಮೇಶ(೨+೧):**

'ಆಡುವ ಬಾರೆ ಪಗಡೆ ಹೂಡೆಲೆ . . . .'
(ಬಸವಪಥ, ೧೩.೬, ೧೯೯೧, ೪೨-೩)

'ಸರದ ಮನ್ಮಥನ ಸಂಕೇತದಲಿ . . . . .'
(ಗಣವಚನರತ್ನಾವಳಿ, ೧೯೮೬)

'ಮುದ್ರೆ ಮೂರನು ತಿಳಿದು ಮುಕ್ತಿ ರಾಜ್ಯವ ಪಡೆದು . . . . ' ಅಪ್ರಕಟಿತ.

## ವಿವಿಧ ವೀರಭದ್ರಾಂಕಿತಗಳು

ಆಸಗೋಡ ವೀರ
ಐನೆಲೆ ವೀರಭದ್ರ
ಒಡಗೇರಿ ರಾಚೋಟೇಶ್ವರ
ಕರಜಿಗೆ ವಾಸವೀರೇಶ
ಕುರಡಗಿ ವೀರ
ಕೊಟ್ಟೂರ ವೀರಭದ್ರೇಶ
ಕೊಲ್ಲೂರ ವೀರಭದ್ರ
ಕೊಂಪಮಾರದ ವೀರಭದ್ರ
ಗೋಕಾವಿ ವೀರಭದ್ರೇಶ
ತಾಳೂರವಾಸ ವೀರೇಶ
ತೆರಕಣಾಂಬಿ ವೀರಭದ್ರ
ದೊಡ್ಡವೀರೇಶನ ಕಂದ
ನಾಗಸಮುದ್ರವಾಸ ಚೆನವೀರೇಶ
ನೀಲವತಿಪುರಧಾಮ ಕಾಶಿ ಚೆನ್ನವೀರ
ನೂತನ ಪುರಾಧೀಶ ಚೆನ್ನವೀರ
ಪೇಟೆಯ ವೀರ
ಬೀರೂರ ವೀರಭದ್ರೇಶ
ಬೇಲೂರಪುರದ ಪೂರ್ವದಿಕ್ಕಿಲಿ ಹರಿವ ಹಳ್ಳದೊಳಗೆ ನೆಲಸಿಹ ಚೆನ್ನವೀರ
ಬೊಮ್ಮದ ಹಳ್ಳಿ ರುದ್ರ
ಮುದ್ದುವೀರೇಶ್ವರ
ಯೋಗಾದ್ರಿ ವೀರೇಶ
ರಾಚವಟ್ಟಿ ವೀರೇಶ
ರಾಜಾಪುರದ ರುದ್ರ
ವಟಪುರದೀಶ ಚೆನ್ನವೀರೇಶ
ವೇಣುಪುರದ ರಾಚೋಟವೀರ
ಸಾವಂದಿ ನಡುಪೇಟೆ ಚೆನ್ನವೀರೇಶ
ಸಾವಂದಿಯ ಚೆನ್ನವೀರ
ಸಿರಿಗುಪ್ಪೆ ರಾಜೋಟದೇವ
ಸಿಂಧುನಗರದ ವೀರೇಶ
ಸೋಲೂರಪುರವರ ಪರಮಗುರು ಚೆನ್ನವೀರ
ಹದಿನಾಡ ವೀರೇಶ್ವರ ಸುತ ರಾಚ
ಹಿರಿಯಡಕದ ವೀರಭದ್ರ

## ಇತರ ಅಂಕಿತಗಳು

ಅಖಂಡ ಗುರು
ಅಖಂಡ ತೋಂಟದ ಸಿದ್ಧ
ಅಗಡಿ ಚೆನ್ನಬಸವ
ಅಗಡಿ ಪ್ಯಾಟಿ ಬಸವೇಶ
ಅಥಣಿಯ ಸಿದ್ಧಸೋಮ
ಅನ್ನದಾನಿ ಮಲ್ಲ
ಅಮರೈಯ್ಯ
ಅಮೃತಲಿಂಗ
ಅಮೃತೇಶ
ಅಮೃತೇಶ್ವರ
ಅರಸಿಕೆರೆಯ ಬಸವ
ಅವಧೂತಲಿಂಗ
ಅವಧೂತ ಗುರು ವಿರೂಪಾಕ್ಷ
ಅವಿರಳ ಮಹದಾದಿಷ್ಟಲಿಂಗ
ಅವಿರಳ ಶಾಂತ
ಅಸಗೋಡ ವೀರ
ಅಳಿವಾಡ ಸಿದ್ಧ
ಆದಿಕೇಶ್ವರ
ಆದಿಗುರು ಶಾಂತ
ಆದಿಸಂಗಮೇಶ
ಆನಂದ ಚಿದ್ಗುರು
ಆರೂಢ
ಇಟ್ಟಿಗೆ ಸಂಗ
ಇಮ್ಮಡಿ ಶ್ರೀ ಮುರಿಗೆಯದೇವ
ಇಮ್ಮಡಿ ಮುರಿಗೆಯೋಗಿ
ಇಮ್ಮಡಿ ಶ್ರೀಗಿರಿ ನಿಃಕಳಂಕ ಶ್ರೀ ಚೆನ್ನಮಲ್ಲಿಕಾರ್ಜುನಲಿಂಗ
ಇಷ್ಟಲಿಂಗರಾಜಯ್ಯ
ಈಶ ಕನಕಾದ್ರೀಶ
ಉಜ್ಜನಿಯ ಮರುಳಾರ್ಕ
ಉಜ್ಜಣಿ ಸಿದ್ಧಲಿಂಗ
ಉಜ್ಜನಿಪುರದಲ್ಲಿ ನೆಲಸಿಹ ಮಹಮಲ್ಲಿಕಾರ್ಜುನ
ಉಡುಪಿಪುರವಾಸ ಚಂದ್ರಮೌಳೀಶ
ಉಪ್ಪುಲಗಿರಿ ದೊರೆ ಸಂಗಮೇಶ
ಉರಗಾದ್ರಿ ಸಿದ್ಧೇಶ್ವರ
ಉಳವಿಯ ಬಸವಣ್ಣ
ಎಡೆಯೂರ ಸಾಸಿರನಾಮದ ಸಿದ್ಧೇಶ್ವರ
ಎಡೆಯೂರು ತೋಂಟದ ಸಿದ್ಧಲಿಂಗೇಶ
ಎಮ್ಮಿಗನೂರ ರಾಜಬಸವ
ಏಕೋತ್ತರದ ಚೆನ್ನವೀರೇಶ್ವರ
ಏಳು ಬೆಂಚೆಗೊಡೆಯ ಬಸವ
ಐನೆಲೆಯ ಗುರುಲಿಂಗ
ಐನೆಲೆಯ ಬಸವಲಿಂಗ
ಐಪುರಿವಾಸ
ಒಡಗೇರಿ ರಾಚೋಟೇಶ್ವರ
ಕಟಿಗಿಹಳ್ಳಿಸ್ವಾಮಿ
ಕಟ್ಟಿಗಿಹಳ್ಳಿ ಸಿದ್ಧ
ಕಪ್ಪಡಿಯ ಸಂಗಮೇಶ್ವರ
ಕಪಿಲಸಿದ್ಧಲಿಂಗ
ಕಮಠೇಶ ಕಾಳಾಂಬಿಕೆ
ಕಮಲ್ಗಿರಿ ನಿಳಯ
ಕರಕಂಜಪುರದೀಶ
ಕರಕಂಠೇಶ
ಕರರುಹದ ಶಾಂತ
ಕರಸ್ಥಲದ ಇಷ್ಟಬ್ರಹ್ಮಯ್ಯ
ಕರಸ್ಥಲದ ನಾಗಲಿಂಗ
ಕರಸ್ಥಲದ ನಾಗಿದೇವ
ಕರಸ್ಥಲದ ರಾಯ
ಕರಿಯ ಸಿದ್ಧರಾಮ
ಕರಿವೀರನೊಡೆಯ ಲಿಂಗ
ಕರಿವೃಷಭ
ಕರಿಸಿದ್ಧ/ಕರಿಸಿದ್ಧೇಶ
ಕರುಣಿ ಶಾಂತ
ಕಲಹಖ್ಯಾತ ಮರಿಬಸವ
ಕಲ್ಯಾಣದ್ಯೆಯ್ಯ
ಕಲ್ಯಾಣ ಬಸವ
ಕಲ್ಮಾಂಬಳವುಳಪುರ . . . . ಸಿದ್ಧಲಿಂಗ
ಕಲ್ಲೇಶ

ಕಲ್ಕೋಡ ಮಲ್ಲೇಶ
ಕವಡೆಪುರದ ಶಂಭುಶಾಂತರಾಮೇಶ್ವರ
ಕವಿ ಚೆನ್ನ
ಕವಿ ಸಿದ್ಧರಾಮಯ್ಯ
ಕವಿ ಸಿದ್ಧಲಿಂಗ
ಕವಿ ಸಿದ್ಧವೀರ
ಕಂಬಾಳದಾರ್ಯ ಗುರುಸಿದ್ಧೇಶ
ಕಾಡೇಶ
ಕಾಲವಾಡಿಗಿ ಕಲ್ಲೇಶ್ವರ
ಕಾಶಿಭುವಿಯ
ಕಾಶಿಯ ವಿಶ್ವೇಶಲಿಂಗ
ಕಾಶಿವಾಸ . . . . .ಮರಿದೇವೇಶ
ಕಾಶಿ ಶಾಂತವೀರ
ಕಾಶಿಯಪಟ್ಟಿಯ ತಿಪ್ಪೆಯರುದ್ರ
ಕಾಳಮ್ಮ
ಕಿತ್ತೂರ ಶಾಂತಲಿಂಗ
ಕ್ರಿಯಾಶಕ್ತಿಯರಸ
ಕುದವೂರ ಮಲ್ಲಿಕಾರ್ಜುನ
ಕುನ್ನಪುರಿವಾಸ ವೇದಾವತಿ ಮಲ್ಲೇಶ
ಕುಪ್ಪಿನ ಕೆರೆ . . . . .ರಮೇಶ
ಕುಮಾರ ಸದಾನಂದ
ಕುರವತಿ ಸಿದ್ಧಲಿಂಗ
ಕೊಡ್ಲಿ ಪೇಟೆವಾಸ ಬಸವೇಶ
ಕೂರ್ಮಪುರವಾಸ ಸಿದ್ಧರಾಮ
ಕೂರ್ಮಪುರವಾಸ ಸೋಮೇಶ
ಕೆಳಗಿನ ಪ್ಯಾಟೆ ಗುರುಬಸವಯ್ಯ
ಕೆಳದಿ ಸೋಮಶೇಖರ ಭೂಪ
ಕೇತಾರದೇವ
ಕೇತಾರಲಿಂಗ
ಕೊಟ್ಟೂರ ಗುರು ಮರುಳೇಶ
ಕೊಡೆಯಕಲ್ಲ ಗುರು
ಕೋಪುರಪುರ ನಿಲಯ
ಕೋಳೂರ ಮಹಾಘನಲಿಂಗ
ಕೋಳೂರ ವಾಸ
ಕೋಳೂರು ನಿಶಾಂತನ
ಕೋಳೂರುಪುರದ ರಾಮೇಶ
ಕೋಳೂರೇಶ
ಗಡ್ಡೆಸ್ಥಲದಿ ನಿಂದ ಮಹಾಲಿಂಗ
ಗದುಗಿನ ತ್ರಿಯಂಬಕ
ಗರಳಪುರದ. . . . ವರದ ಶಂಕರ
ಗವಿಯ ಗಂಗಾಧರ
ಗವಿಯ ಸಿದ್ಧ / ಸಿದ್ಧೇಶ್ವರ
ಗಂಗರಾಜ ಚೆನ್ನಶಾಂತ
ಗಂಗಾವಾರಮಠದ ಸ್ಥಿರ ಗುರುಸಿದ್ಧಲಿಂಗೇಶ
ಗಿರಿಜಾರಮಣ
ಗಿರಿಜೇಶ
ಗಿರಿಮಲ್ಲ
ಗಿರಿಯಮಲ್ಲೇಶ
ಗಿರಿಯರಾಮಪುರದ ಲಿಂಗ
ಗಿರೀಶ
ಗುಬ್ಬಿ ಚೆನ್ನಬಸವ
ಗುಬ್ಬಿಮಲ್ಲೇಶ
ಗುರು ಕಪ್ಪಡಿ ಸಂಗಮೇಶ್ವರ
ಗುರುಕುಮಾರ
ಗುರು ಕೊಟ್ಟೂರೇಶ
ಗುರು ಚೆನ್ನವರ ಸಂಗಮೇಶ ...ಮದ್ದುಮಲ್ಲೇಶ
ಗುರುತಾರಕ
ಗುರುತೋಂಟ
ಗುರುತೋಂಟದ ಸಿದ್ಧೇಶ್ವರ
ಗುರು ನಂಜುಂಡ
ಗುರು ನಂಜೇಶ್ವರ
ಗುರು ನಿತ್ಯಾನಂದ
ಗುರು ನಿರಂಜನ
ಗುರು ಪರ್ವತೇಶ
ಗುರುಪಾದ ಯತೀಂದ್ರ
ಗುರುಮೂರ್ತಿ ಶಾಂತಲಿಂಗ
ಗುರುಲಿಂಗಪ್ಪ
ಗುರುವರ ಚೆನ್ನಮಲ್ಲ
ಗುರುವರ ಶಾಂತೇಶ
ಗುರು ಶಂಕರಿ ರಮಣ ರಾಜಲಿಂಗೇಶ್ವರಿ
ಗುರುಶಾಂತವೀರಬಸವ
ಗುರು ಶಾಂತೇಶ

ಗುರು ಸಚ್ಚಿದಾನಂದ
ಗುರು ಸಂಗನಬಸವ
ಗುರು ಸಂಗಯ್ಯ
ಗುರುಸಿದ್ಧದೇವ
ಗುರುಸಿದ್ಧದೇಶಿಕ
ಗುರುಸಿದ್ಧ ಮುರಿಗೆಯ
ಗುರುಸಿದ್ಧ ಯತೀಂದ್ರ
ಗುರುಸಿದ್ಧಯೋಗಿ
ಗುರು ಸಿದ್ಧರಾಮ
ಗುರು ಹಂಸೇಶ್ವರ
ಗುಂಡದಮರೇಶ
ಗೂಗಲ್ಲ ಗವಿ ಅಲ್ಲಮ
ಗೌರಿಯರಸ/ಗೌರೀಪತಿ
ಗೌರೀಶ
ಘನಗುರುಶಾಂತ
ಘನಗುರು ಶಾಂತಮಲ್ಲೇಶ
ಚದುರ ಗೌರೀಶ
ಚನಮಲ್ಲಪ್ಪ
ಚನ್ನವೃಷಭರಾಜೇಂದ್ರ
ಚೆನ್ನಸಂಗನನೊರದಿ ಜನಿಸಿದ
ಚಂದ್ರಶೇಖರ
ಚಂಪಕ ಸಿದ್ಧಲಿಂಗ/ಸಿದ್ಧಲಿಂಗೇಶ
ಚಿತ್ರಾಪುರದ ಮನೆಯೊಳು
ಚಿದಂಬರೇಶ
ಚಿನ್ನದ ಕಂಥೆರಾಯ
ಚಿನ್ನದ ಗಿರಿಯ ಚೆನ್ನಮಲ್ಲಿಕಾರ್ಜುನ
ಚಿನ್ಮೂಲಗಿರಿವಾಸ ಚಂದ್ರಮೌಳೀಶ
ಚಿನ್ಮೂಲಾದ್ರಿ ನಿಲಯ
ಚಿನ್ಮೂಲಾದ್ರೀಶ ಚಂಪಕೇಶ
ಚೆನ್ನ ಗಂಗಾಧರ
ಚೆನ್ನಪ್ಪದೇವ
ಚೆನ್ನವೀರ(ಗುರುನಂಜೇಶನಾತ್ಮಜ)
ಜಂಬೂರ ಜಂಬುಕೇಶ್ವರ
ಜ್ಞಾನಬೋಧ
ತಂದೆ ಗಂಗಾಧರ
ತಂದೆ ನಾಗನಾಥ
ತಂದೆ ಸದ್ಗುರುಶಾಂತ
ತಿಪ್ಪೇಶ
ತ್ರಿಪುರಾಂತರ
ತ್ರಿಪುರಾಂತಕಲಿಂಗ
ತ್ರಿಯಂಬಕಲಿಂಗ
ತುರುಗೆರೆ ವರದ ವೆಂಕಟ
ತುಂಗಭದ್ರೆ, ಕೂಡಲ ಸಂಗಮೇಶ್ವರ
ತುಂಗಭದ್ರೆಯವಾಸ ಹಂಪೆಯ ವಿರೂಪಾಕ್ಷಲಿಂಗ
ತುಂಗಾದ್ರಿ, ಮಲ್ಲಿಕಾರ್ಜುನ
ತೊಗರಗಿರಿಯ ಮಲ್ಲೇಶ
ತೋಂಟದ ರಾಜಯೋಗೀಶ
ದಶಮಠದ ಗುರುಸಿದ್ವೀರ
ದಿಗಂಬರ
ದಿವ್ಯಲಿಂಗೇಶ
ದೇವರಾಮೇಶ
ದೇವಲಾಪುರದ ಬಸವ
ದೇಶಿಕೋತ್ತಮ . . . ಪ್ರಾಣೇಶ
ನಲ್ಲುಂದಪುರನಿವಾಸ
ನಂಜನಗೂಡ . . ನಂಜುಂಡಲಿಂಗ
ನಂಜುಂಡ
ನಾಗಪ್ರಿಯ ಗುರುಪಾದಯತೀಂದ್ರ
ನಾಗಲಿಂಗಯ್ಯನ ಕರಜಾತ
ನಾಯಕಪುರ ಗುರುಶಂಕರ
ನಿಜಗುರು ಸಂಗನಬಸವ
ನಿಜಘನಲಿಂಗ
ನಿರಂಜನಸಿದ್ಧ ಬೋಳ
ನಿರಂಜನೇಶ
ನಿರ್ವಾಣ ಚೆನ್ನಮಲ್ಲ
ನಿರ್ವಾಣ ಬೋಳಮಲ್ಲೇಶ್ವರ
ನಿಃಕಳಂಕ ಚೆನ್ನಮಲ್ಲಿಕಾರ್ಜುನ
ನೀಲಕಂಠ
ನೀಲಕಂಠನ ಕರದಿ . . . ಸಿದ್ಧಲಿಂಗನ
ನೀಲಕಂಠೇಶ
ನೀಲವತಿಪುರಧಾಮ ಕಾಶಿ ಚೆನ್ವೀರ
ನೂತನಪುರಾದೀಶ ಚೆನ್ನವೀರ
ಪಟ್ಟುವುಗಂತೆಯ ಚೆನ್ನಬಸವಲಿಂಗೇಶನ ಚಿಟ್ಟಿಗ ನಿರ್ವಾಣಲಿಂಗ

ಪರಶಿವಲಿಂಗ
ಪರುವ
ಪರ್ವತದೇವ
ಪರ್ವತದೇಶಿಕ
ಪರ್ವತಮಲ್ಲ
ಪಂಚಾಕ್ಷರಿಪ್ರಿಯ ಇಷ್ಟಲಿಂಗ
ಪಂಪಾಪುರಿ/ಪತಿ ವಿರೂಪಾಕ್ಷಲಿಂಗ
ಪಂಪಾಂಬಿಕೆಯಣುಗ
ಪ್ರಭುಲಿಂಗ
ಪಾರ್ವತಿರಮಣ
ಪುರಹರ ದಿವ್ಯಲಿಂಗೇಶ
ಪುಲಿಗೆರೆಯ ಗುರು ಸೋಮೇಶ್ವರ
ಬನವಾಸೆ ಮಧುಲಿಂಗ
ಬಸವ
ಬಸವ ಚೆನ್ನದೇಶಿಕೇಂದ್ರ
ಬಸವಲಿಂಗೇಶ
ಬಸವೇಶ
ಬಳ್ಳಾರಿ ಶಾಂತಮಲ್ಲೇಶ
ಬಂಕಾಪುರದೇಶ ಕರಜಗಿವಾಸ
ಬಾಲಮಲ್ಲನೊಡೆಯ ಮುದ್ದುಮಲ್ಲೇಶ
ಬಾಲಸಂಗ್ಯೆಯ್ಯನ ಮುಕ್ತಿಶ್ರೀಪದರೇಣು
ಬಾಲೇಂದುಪುರವಾಸ ಲೋಲ ಗೌರೀಶ
ಬಾಲೇಂದುಪುರನಿಲಯ ಗೌರೀಶ
ಬ್ಯಾಡಗಿ ಶಿವಪೂಜೆ ಮುಪ್ಪಿನದೇವ
ಬಿದರೂರ ಬಸವ
ಬಿಸಿಲ್ಹಳ್ಳಿ ಬಸವ
ಬುಕ್ಕಾಂಬುಧಿಯ ಶ್ರೀ ಗುರುಸಿದ್ಧ
ಶಿವಮಲ್ಲಿಕಾರ್ಜುನ
ಬೆಳಗೋಡ ಕಲ್ಲೇಶ್ವರ
ಬೇಲೂರಪುರದ ಪೂರ್ವದಿಕ್ಕಿಲಿ ....
ಚನ್ನಬಸವೇಶ
ಬೊಕ್ಕಸಿದ್ಧ
ಬೋದಡೆ ಶ್ರೀ ಗುರುಬಸವಪ್ಪ(?)
ಭಸಿತಪುರಿ . . ಗುರುಸಿದ್ಧ
ಬಸವರಾಜೇಂದ್ರ
ಭಸ್ಮಾಪುರಿಕಟ್ಟೆ ನಿವಾಸ . . . ಬಸವೇಶ
ಭಂಡಿಸಂಗ
ಭಾರತೀಶ್ವರ
ಭಾಳಾಕ್ಷ
ಮಕ್ಕಳ ಶಾಂತ
ಮದ್ಗುರು ಚೆನ್ನಶಾಂತಮಲ್ಲ
ಮದ್ಗುರು ವಿರೂಪಾಕ್ಷ
ಮದ್ಗುರು ಶಾಂತ
ಮಧುಗಿರಿನಿಲಯ
ಮಧುಗಿರಿಲಿಂಗ
ಮಧುಪುರಿವಾಸ ಮಲ್ಲಿಕಾರ್ಜುನ
ಮರಕತ ಕಂಥೆ ಗುರುಸಿದ್ಧಲಿಂಗ
ಮರಕತ ಕಂಥೆ ಸಂಗ
ಮರಿದೇವ
ಮರಿಶಾಂತದೇವ
ಮರಿಸಿದ್ಧಲಿಂಗೇಶ
ಮಲ್ಲನೃಪ
ಮಲ್ಲಾರೂಢ
ಮಲ್ಲಿಕಾರ್ಜುನದೇವ
ಮಲೆ ಚೆನ್ನ
ಮಲೆಯ ಶಂಕರಲಿಂಗ
ಮಲೆಯ ಶಾಂತಲಿಂಗ
ಮಲ್ಲೇಂದ್ರ
ಮಹಂತೇಶ್ವರ
ಮಹಲಿಂಗ
ಮಹಾಘನ ಶಾಂತಫಕೀರ
ಮಹೇಶ
ಮಳೆಯ ಶಂಕರಸ್ವಾಮಿ
ಮಂದರಗಿರಿ ಚೆನ್ನಮಲ್ಲಿನಾಥ
ಮಂದರೇಶ್ವರ
ಮಾಗಡಿ ಚೆನ್ನಬಸವೇಶ
ಮಾಗಡಿಪುರದರಸ
ಮಿಡಗೇಸಿ ಮುದ್ದಮಲ್ಲ
ಮುತ್ತಿನಕಂಥೆ ಸದ್ಗುರು
ಮುತ್ತಿನಪೆಂಡೆ ವಂಶಾಬ್ಧಿ ವಿಧು
ಚಿಕ್ಕದೇವ ಗರ್ಭಜ ಪ್ರಭುರಾಯ
ಮುದ್ದಲಿಂಗೇಶ
ಮುದ್ದುವೀರದೇಶಿಕೇಂದ್ರ
ಮುನಿಪುರದ ಪ್ರಭುರಾಯ

ಮುನಿಪುರಧಾಮ ಸಿದ್ಧೇಶ್ವರ
ಮುಪ್ಪಿನಮುನಿ
ಮುರಿಗಾಪತಿ ಚೆನ್ನಬಸವೇಶ
ಮುರಿಗಾಸ್ವಾಮಿ
ಮುರಿಗೆಯ ಶಾಂತ/ಶಾಂತವೀರೇಶ
ಮುರಿಗೆಲಿಂಗೇಶ
ಮುರಿಗೆವೀರೇಶ
ಮುರಿಗೆ ವೃಷಭೇಂದ್ರ
ಮುರಿಗೇಶ
ಮುರಿಗೇಂದ್ರ
ಮುಳಗುಂದಪ್ರಭು
ಮೂಕಾಂಬಿಕೆ
ಮೂರು ಶ್ರಿಂಗರಪುರದ ಸಿದ್ಧನಾಥ
ಮೃಡಪ್ರಾಣನಾಥ
ಮೇಕಲೇಶ್ವರಲಿಂಗ
ಮೊಗ್ಗೆ ಷಡಕ್ಷರಿ
ಮೊರಟದ ಮುದ್ದುಮಲ್ಲಿಕಾರ್ಜುನ
ಮೊರಟ ಪುರವರ ಮಲ್ಲಿಕಾರ್ಜುನ
ಯಲಬುರ್ಗಿವಾಸ ಸಿದ್ಧರಾಮೇಶ
ಯೋಗಗಿರಿ ತಂದೆ
ಯೋಗಾದ್ರಿನಾಥ
ರಜತಪುರದಿ ನಿಂದ
ರಾಚರಸ
ರಾಚವಟ್ಟಿ ಮುರಿಗೇಂದ್ರ
ರಾಚೇಶ
ರಾಜಾರಾಮನೃಪಾಲ
ರಾಮಗಿರಿಯ ನಿಲಯ ಶಂಕರ
ರಾಮಗಿರಿ ಸಿದ್ಧ
ರಾಮಪುರಿ ಸೋಮನಾಥ
ರಾಮೇಶ
ರಾಯಚೂರ . . ಗುರುಬೋಳಾರ್ಯ
ರುದ್ರ ನಂಜುಂಡಲಿಂಗ
ರುದ್ರೇಶ/ಶ್ವರ
ರೇಚಾರ್ಯ
ರೇವಗಿಪುರದ[ರೇವಣ]ಸಿದ್ಧಲಿಂಗೇಶ
ರೇವಣಸಿದ್ಧ
ಲಿಂಗಾರ್ಯ

ಲೇಪಾಕ್ಷಿಯ ಲಿಂಗ
ವಟಪುರದೊಡೆಯ ತೋಂಟದಪ್ರಭು
ವರಗ ಬಸವ
ವರದ ಬೇಟೆಯ ತಿಮ್ಮ
ವರದಾಂಬಿಕಾ ತೀರದಲ್ಲಿ ನಿಂದ ಮಲ್ಲೇಶ
ವರವಿಯ ಮೋನಣ್ಣ
ವಂಕಿಪುರದ ಗೌರೀಶ್ವರ
ವಾದಿಕೇಶ್ವರ
ವಾಮಪುರ ನಿವಾಸ
ವಿನಪುರದೊಡೆಯ ಬಂಡೇಶ
ವಿಭೂತಿಪುರವಾಸ ಸ್ವಾಮಿ
ಶ್ರೀ ಗುರುಸಿದ್ಧೇಶ
ವಿರಕ್ತ ಶ್ರೀ ಗುರು ಮುರಿಗಿಯ ಚೆನ್ನ
ವಿರಕ್ತ ಹುಚ್ಚನಂಜೇಶ್ವರ
ವಿರಾಟ್ಪುರವಾಸ . . ಬಸವಲಿಂಗ
ವಿರಾಟ್ಪುರವಾಸಿ . . . .ಹರ
ವಿರೂಪಾಕ್ಷ
ವಿರೂಪಾಕ್ಷಲಿಂಗ
ವಿರೂಪಾಕ್ಷೇಶ್ವರನೆನಿಸಿದ ಮುರಿಗೇಂದ್ರ
ವಿಶ್ವರಾಮ
ವೀರಘಂಟೆ ಮಡಿವಾಳಪ್ರಭು
ವೀರಭೋಜಪ್ರಭುಶಾಂತ
ವೀರಯೋಗಿ
ವೀರಶಾಂತೇಶ
ವೃಷಭಾರೂಢ
ವೃಷಭೇಂದ್ರ
ಶಾವಲ್ಯಪುರದ ಬಸವೇಶ
ಶಾಂತ
ಶಾಂತಮಲ್ಲೇಶ್ವರ
ಶಾಂತಮೂರುತಿ ಸಂಗ
ಶಾಂತಲಿಂಗ/ಶಾಂತಲಿಂಗೇಶ
ಶಾಂತವೀರ
ಶಾಂತವೀರದೇವ
ಶಾಂತವೀರಲಿಂಗ
ಶಾಂತಸದ್ಗುರು
ಶಾಂತ ಸಿದ್ಧೀರ
ಶಾಂತಾರ್ಯ

ಶಾಂತೇಶ(ಸಿದ್ಧವೀರ ಯತಿರಾಯನ ವರಪುತ್ರ)
ಶಿವಗಂಗಾ ರುದ್ರಮುನಿ ಕರಜಾತನ
ಶಿವಸಿದ್ಧ ಶಾಂತ ಜಂಗಮಲಿಂಗವೇ
ಶ್ರೀಕಂಠ
ಶ್ರೀ ಗಿರಿರಾಮ
ಶ್ರೀ ಗುರು ಸದಾಶಿವಯೋಗಿ
ಶ್ರೀ ಪ್ರಭು
ಶ್ರೀ ಬಸವ ಗುರುಲಿಂಗೇಶ
ಶ್ರೀ ರುದ್ರ
ಶ್ವೇತ ಶೀಲಪುರವರ
ಸದ್ಗುರು ಚೆನ್ನ
ಸದ್ಗುರು ಬಸವೇಶ
ಸದ್ಗುರು ಭಾರತೀ ಶಿವ
ಸದ್ಗುರು ಶಾಂತ
ಸದ್ಗುರು ಸಿದ್ಧಲಿಂಗೇಶ
ಸಪ್ತಪುರಿ ವೃಷಭರಾಜೇಂದ್ರ
ಸಪ್ಪೇಶ
ಸಂಗನಸುತ
ಸಂಗಮ
ಸಂಗಮಲಿಂಗ
ಸಂಪಿಗೆ ಸಿದ್ಧಲಿಂಗೇಶ
ಸ್ವತಂತ್ರ ಗುರುಬಸವಲಿಂಗೇಶ
ಸ್ವತಂತ್ರ ನಿಜಗುರುಸಿದ್ಧ
ಸ್ಥಲಭಲಿಂಗ
ಸಾಸಲ ಸೋಮಾರಾಧ್ಯ
ಸಾಸುವೆಹಳ್ಳಿ ಚಂದಿರಮೌಳಿ
ಸಾಂಬಸದ್ಗುರು
ಸ್ವಾಸಲಪುರೀಶ್ವರ
ಸಿದ್ಧ ಗೊಹೇಶ್ವರ
ಸಿದ್ಧಬಸವ
ಸಿದ್ಧಮಲ್ಲೇಶ
ಸಿದ್ಧರಾಚ
ಸಿದ್ಧರಾಮಗುರುನಿರಂಜನ
ಸಿದ್ಧಲಿಂಗ/ಸಿದ್ಧಲಿಂಗೇಶ
ಸಿದ್ಧ ಶಾಂತವೀರೇಶ್ವರ
ಸಿದ್ಧೇಶ
ಸಿದ್ಧೇಶಪ್ರಭು
ಸಿದ್ಧೇಶ್ವರ
ಸಿರಿ ಪುರದ ನನ್ನೇಶ
ಸ್ಥಿರಪುರವಾಸ
ಸುಲೆಗಾವಿ ಗುರುಸಿದ್ಧಲಿಂಗ
ಸೇಡಿಂಬ . . ಬಸವರಾಜ
ಸೊಗಲದ ಸೋಮಲಿಂಗ
ಸೋಮನಾಥ
ಸೋಮೇಶ ಕಣಿವೆಯ ಗಂಗೇಶ
ಹಟ್ಟಿವಾಸ
ಹಡಲ್ಗಿರಿ ರಾಮಲಿಂಗ
ಹರನಾಳ ನಗರದ ಗುರು
ಹರಿಹರಲಿಂಗ
ಹಳ್ಳೂರ ಸಂಗಮೇಶ
ಹಂಪಿ ವಿರೂಪಾಕ್ಷಲಿಂಗ
ಹಂಪೆಯಲಿಂಗ
ಹಂಪೆಯಾಳ್ದ
ಹಾರನಹಳ್ಳಿ ಕರಿಬಸವೇಶ
ಹಾಲಯತೀಶ
ಹಾಲಿವಿಪುರದ ಸ್ವಾಮಿ ನಂದೀಶ
ಹುಚ್ಚ ಸಂಜೇಶ್ವರ
ಹುಲಿಗೆರೆಯ ಸೋಮೇಶ
ಹೇಮಕೂಟಾಗಾರ
ಹೇಮಾದ್ರೀಶ
ಹೊನ್ನಗಿರಿಯ ಅಮೃತೇಶ
ಹೊನ್ನಾದೇವಿ
ಹೊನ್ನಾಂಬಿಕೆ
ಹೊಸಕಟ್ಟೆ ಸೋಮೇಶಲಿಂಗ
ಹೊಸಪೇಟೆ ಬಸವೇಶ
ಹೋಳಿನ ಹಂಪ್ಪಯ್ಯ

### ವ್ಯಕ್ತಿಗಳು

ಪ್ರೊ. ಎಸ್. ಉಮಾಪತಿ(ದಾವಣಗೆರೆ)
ಪ್ರೊ. ಗೌ. ಮ. ಉಮಾಪತಿಶಾಸ್ತ್ರಿ(ಧರ್ಮಸ್ಥಳ)
ಶ್ರೀ. ಸಿ. ಉಮೇಶಚಂದ್ರ(ಕೆಂಗೇರಿ)
ಶ್ರೀ. ಪಿ. ಎಂ. ಗಿರಿರಾಜು(ಮೈಸೂರು)
ಡಾ. ಬಿ. ನಂಜುಂಡಸ್ವಾಮಿ(ತುಮಕೂರು)
ಡಾ. ಎಲ್. ಬಸವರಾಜು(ಮೈಸೂರು)
ಡಾ. ಭೋಜರಾಜ ಪಾಟೀಲ(ಹಾವೇರಿ-ಹಂಸಭಾವಿ)
ಪ್ರೊ. ಕೆ. ರಾಘವೇಂದ್ರರಾವ್(ಮೈಸೂರು)
ಶ್ರೀ. ಎಸ್. ಎಂ. ರುದ್ರಯ್ಯ(ಸುರಡಿಹಳ್ಳಿ)
ಶ್ರೀ. ಜಿ. ಎ. ಶಿವಲಿಂಗಯ್ಯ(ಮೈಸೂರು)
ಡಾ. ವಿ. ಶಿವಾನಂದ(ಕಾಶಿ)
ಶ್ರೀ. ಷ. ಬ್ರ. ಸಿದ್ಧರಾಮ ಸ್ವಾಮಿಗಳು(ಯಲಬುರ್ಗಿ)

### ಮಠಗಳು

ಕೊಟ್ಟೂರಮಠ(ಹೊಸಪೇಟೆ)
ಜೇವರಗಿ ಷಣ್ಮುಖ ಸ್ವಾಮಿಗಳಮಠ
ತೋಂಟದಾರ್ಯ ಸಂಸ್ಥಾನಮಠ(ಗದಗ)
ಬೃಹನ್ಮಠ(ಚಿತ್ರದುರ್ಗ)
ಬೃಹನ್ಮಠ(ಸಿರಿಗೆರೆ)
ಬೇಲಿಮಠ(ಬೆಂಗಳೂರು)
ಮೂರು ಸಾವಿರಮಠ(ಹುಬ್ಬಳ್ಳಿ)

### ಸಂಸ್ಥೆಗಳು

ಕನ್ನಡ ಅಧ್ಯಯನ ಕೇಂದ್ರ(ಬೆಂಗಳೂರು)
ಕನ್ನಡ ಸಂಶೋಧನ ಸಂಸ್ಥೆ(ಧಾರವಾಡ)
ಕನ್ನಡ ಸಾಹಿತ್ಯ ಪರಿಷತ್ತು(ಬೆಂಗಳೂರು)
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ(ಮೈಸೂರು)
ಬಸವ ಭವನ(ಬೆಂಗಳೂರು)
ಮದರಾಸ್ ಪ್ರಾಚ್ಯ ಸಂಶೋಧನಾಲಯ
ಮಂಜುನಾಥೇಶ್ವರ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ (ಧರ್ಮಸ್ಥಳ)
ವಚನ ವಾಙ್ಮಯ ಭಾಂಡಾರ(ಧಾರವಾಡ)

## ಸ್ವರವಚನ ಸಂಕಲನಗಳು

ಗಣವಚನ ರತ್ನಾವಳಿ(ಸಂ) ಎಸ್. ಉಮಾಪತಿ(೧೯೮೭)
ಬಿಡಿ ಸ್ವರವಚನಗಳು(ಸಂ) ಗೌ. ಮ. ಉಮಾಪತಿ ಶಾಸ್ತ್ರಿ(೧೯೬೮)
ಶಿವಯೋಗ ಪ್ರದೀಪಿಕೆ(ಸಂ) ವೀರಣ್ಣ ರಾಜೂರ(೧೯೮೧)
ಸ್ವರವಚನ ವಾಹಿನಿ(ಸಂ)ಎಸ್. ಉಮಾಪತಿ(೧೯೯೪)
ಸ್ವರವಚನ ಸಂಪುಟ-೧(ಸಂ) ಎಸ್. ಶಿವಣ್ಣ(೧೯೯೫)
ಸ್ವರವಚನ ಸಂಪುಟ-೨(ಸಂ)ಎಸ್. ಶಿವಣ್ಣ(೧೯೯೫)
ಸ್ವರವಚನ ಸಂಪುಟ-೪(ಸಂ) ವೈ. ಸಿ. ಭಾನುಮತಿ (೧೯೯೫)



# ಪ್ರಕಟಿತ ಸ್ವರವಚನ ಸಾಹಿತ್ಯ

ಗೌ.ಮ. ಉಮಾಪತಿ ಶಾಸ್ತ್ರಿ

"ಜನಪದ ಸಾಹಿತ್ಯ, ವಚನ, ಹಾಡುಗಬ್ಬಗಳು
ಇಂದು ವಿಶ್ವಸಾಹಿತ್ಯದಲ್ಲಿ ಉನ್ನತ ಸ್ಥಾನವನ್ನು ಪಡೆಯ
ತೊಡಗಿವೆ. ಕನ್ನಡ ನಾಡಿನ ಸಾಹಿತ್ಯ ಸಂಸ್ಕೃತಿಯ
ಹೊಂಬೆಳಗನ್ನು ಬೀರುವಲ್ಲಿ ಇವಕ್ಕೆ ಅಗ್ರಸ್ಥಾನವಿದೆ." [೧]

ಪ್ರೊ. ಶಿ.ಶಿ. ಬಸವನಾಳರ ಅಭಿಮತದಂತೆ ಕನ್ನಡ ಸಾಹಿತ್ಯದ ಮೇಲ್ಮೆಗೆ ಕಾರಣವಾದ ಹಾಡುಗಬ್ಬ ಪ್ರಕಾರವೇ ಸ್ವರವಚನವೆನಿಸಿದೆ. ಮುಕ್ತ ಗದ್ಯದ ವಚನಗಳಿಗೆ ಸರಿಸಮವಾಗಿ ರಾಗ-ತಾಳಗಳ ಸ್ವರವಚನಗಳು ಬಸವಯುಗದಲ್ಲಿಯೇ ರಚನೆಗೊಂಡಿದ್ದವು. ಈ ಗೇಯ ಸಾಹಿತ್ಯ ಶರಣರ-ಶಿವಯೋಗಿಗಳ ಪರಂಪರೆಯಲ್ಲಿ ಪ್ರವರ್ಧನೆಗೊಂಡು ಉಳಿದು ಬಂದಿತು.

ಹದಿನೈದನೆಯ ಶತಮಾನದಲ್ಲಿ ವಚನ ಶಾಸ್ತ್ರವಾಗಿ ವಿಸ್ತಾರ ಪಡೆಯಿತು; ಸಾಮಾನ್ಯನಿಂದ ದೂರ ಉಳಿಯಿತು. ಆಗ ಷಟ್‌ಸ್ಥಲ-ಏಕೋತ್ತರ ಶತಸ್ಥಲಗಳ ನಿರೂಪಣೆಗೆ ರಾಗ-ತಾಳಗಳ ಲಯದ ಸ್ವರವಚನಗಳು ಬಳಕೆಯಾದವು. ಹೊಸ ಹಾಡುಗಳೂ ರಚನೆಗೊಂಡವು.

ಶಿವಾಗಮಗಳಲ್ಲಿಯ ಶಿವಕಾರುಣ್ಯ, ಜೀವಸಂಬೋಧೆ, ನೀತಿ, ಕ್ರಿಯೆ, ಶಿವಯೋಗ, ಜ್ಞಾನಪ್ರತಿಪಾದನೆಯ ಸ್ಥಲಕ್ರಮದಲ್ಲಿ ಸ್ವರವಚನಗಳ ಲಲಿತ ಬಂಧ ಜನಪ್ರಿಯವಾಯಿತು. ಜುಗುನಿ ಮರುಳದೇವ ಮತ್ತು ನಿಜಗುಣರ ಸ್ವರವಚನಗಳಲ್ಲಿ ಆಗಮಗಳ ಪ್ರಭಾವವೇ ಹೆಚ್ಚು. ಆದರೆ ಅವು ಸರಳ ಭಾಷೆ ಮತ್ತು ಗೇಯಗುಣದಿಂದಾಗಿ ಹೆಚ್ಚು ಪ್ರಚುರಕ್ಕೆ ಬಂದವು. "ಕೈವಲ್ಯ ಪದ್ಧತಿ"ಯ ಮತ್ತು ಶರಣರ ವಚನಗಳ ಪ್ರಭಾವದಿಂದ ಹೊಸ ಭಾವ-ಭಾಷೆಗಳನ್ನು ರೂಢಿಸಿಕೊಂಡ ಸರ್ಪಭೂಷಣ ಮೊದಲಾದ ಶಿವಯೋಗಿಗಳ ಕೃತಿಗಳು ನೀತಿ ಮತ್ತು ಗೇಯತೆಯಿಂದಾಗಿ ಜನರಿಗೆ ಬಹಳ ಹತ್ತಿರವಾದವು.

---

೧. ಕೈವಲ್ಯ ದರ್ಪಣ; ಪ್ರಸ್ತಾವನೆ, ಪು. ೧೦.

ಹಸ್ತಪ್ರತಿಗಳ ಬರಹ-ಓದು ನಿಂತಮೇಲೆ ಇಂದಿಗೆ ೧೫೦ ವರ್ಷಗಳ ಹಿಂದೆ ಈ ಸ್ವರವಚನಸಾಹಿತ್ಯ ಮುದ್ರಣದ ಮೂಲಕ ಜನರಲ್ಲಿ ಪ್ರಸಾರ ಪಡೆಯಿತು. ಸು. ೧೮೬೦ರಿಂದ ಅಸ್ತಿತ್ವಕ್ಕೆ ಬಂದ ಮದ್ರಾಸ (ಚೆನ್ನಪುರಿ) ಮತ್ತು ಬೆಂಗಳೂರು (ಕಲ್ಯಾಣನಗರ) ಮಹಾನಗರಗಳ ಮುದ್ರಾಕ್ಷರ ಶಾಲೆಗಳ ಮೂಲಕ ಸ್ವರವಚನಗಳ ಪ್ರಕಾಶನ ನಾಲ್ಕು ಬಗೆಯಾಗಿ ಬೆಳೆದುಬಂದವು. ಬೆಳವಣಿಗೆಯ ಪ್ರತಿ ಹಂತಕ್ಕೆ ಸ್ಥೂಲವಾಗಿ ೩೫ ವರ್ಷಗಳ ಕಾಲಮಿತಿ ಕಲ್ಪಿಸಬಹುದು. ಮೊದಲನೆಯದು ಬೆಂಗಳೂರು ಹೊಳೆಕಲ್ಲು ನರಸಿಂಹಯ್ಯನವರ ಹಳೆಯ ಮುದ್ರಣದ ಟೀಕು ಪ್ರಕಾರ. ಎರಡನೆಯದು ವಿಜಾಪುರದ ಹಳಕಟ್ಟಿಯವರ ನವ ಮುದ್ರಿತ ಪ್ರಚಾರ, ಮೂರನೆಯದು ಧಾರವಾಡದ ಬಸವನಾಳರ ಗ್ರಂಥ ಪರಿಷ್ಕಾರ, ನಾಲ್ಕನೆಯದಾಗಿ ಮೈಸೂರು ಎಲ್. ಬಸವರಾಜು[೨] ಅವರ ಕೃತಿ ಸಂಶೋಧನ. ಹೀಗೆ ಪ್ರಕಟಿತ ಸ್ವರವಚನ ಸಾಹಿತ್ಯದ ವಿಕಾಸದ ಗತಿಗಳನ್ನು ಕಾಣುತ್ತೇವೆ.

ಈ ದಿಶೆಯಲ್ಲಿ ಇನ್ನು ಮಾಡಬೇಕಾದ ಸಂಶೋಧನಕಾರ್ಯ ಬಹಳವಿದೆ. ನೂರಾರು ಹಳೆಯ ಮುದ್ರಣ ಪ್ರತಿಗಳನ್ನು ಸಂಗ್ರಹಿಸಿ, ಅವುಗಳ ಅಧ್ಯಯನಮಾಡಿ, ಒಂದು ಮಹಾಪ್ರಬಂಧವನ್ನೇ ಬರೆಯಬಹುದಾಗಿದೆ. ಹಳೆಯ ಅಚ್ಚಿನ ಪ್ರತಿಗಳ ಮುನ್ನುಡಿ-ಟೀಕೆಗಳು ಹೊಸಗನ್ನಡ ಗದ್ಯದ ಬೆಳವಣಿಗೆಯ ಗತಿಗಳನ್ನು ಸೂಚಿಸುತ್ತವೆ. ಗ್ರಂಥಸಂಪಾದನೆಯ ಪಾಠಾಂತರಗಳಿಗೆ ಅವು ಆಕರವಾಗುತ್ತವೆ. ಅವನ್ನು ನಾವು ಈ ದೃಷ್ಟಿಯಿಂದ ಸಂಗ್ರಹಿಸಿ ರಕ್ಷಿಸಬೇಕಾಗಿದೆ. ನಾನು ೪೦ ವರ್ಷಗಳ ಹಿಂದೆ ಬಾಗಲಕೋಟೆಯ ಬಸವೇಶ್ವರ ಕಾಲೇಜಿನಲ್ಲಿದ್ದಾಗ, ಬೆಂಗಳೂರಿಗೆ ಬಂದಾಗಲೆಲ್ಲ ಮೆಜೆಸ್ಟಿಕ್ ವೃತ್ತದ ಬಳಿಯ ಹಳೆಯ ಪುಸ್ತಕದಂಗಡಿಗಳಲ್ಲಿ ಕೊಂಡು ತಂದು ಅವುಗಳಿಗೆ ಹೊಸ ಬೈಂಡು ಹಾಕಿಸಿ 'ಶಾರದಾಭವನ'ದಲ್ಲಿ ರಕ್ಷಿಸಿ ಇಡುತ್ತಿದೆ. ಅವೇ ಈಗ ಈ ಬರವಣಿಗೆಗೆ ಸಾಮಗ್ರಿಯಾಗಿವೆ.

ಪ್ರಕಟಿತ ಗ್ರಂಥಗಳ ಆಕಾರ-ಪುಟ-ಬೆಲೆಗಳ ವಿವರಗಳನ್ನು ಇಲ್ಲಿ ಕೊಡಲಾಗಿದೆ. ಅದು ಅನವಶ್ಯಕವೇನಲ್ಲ. ಕಾಲಕ್ರಮೇಣ ಮುದ್ರಣವೆಚ್ಚ ಹೇಗೆ ಗಗನಕ್ಕೇರುತ್ತ ಬಂದಿತೆಂಬುದನ್ನು ಲೆಕ್ಕ ಹಾಕುವವರಿಗೆ ಇದರಿಂದ ಅನುಕೂಲವಾದೀತೇನೊ! ಇಷ್ಟು ವಿವರಗಳೊಂದಿಗೆ ಪ್ರಕಟಿತ ಸ್ವರವಚನ ಸಾಹಿತ್ಯದ ಬಗೆಗೆ ಇನ್ನು ವಿವರಿಸಬಹುದು:

## ನಿಜಗುಣ ಶಿವಯೋಗಿಗಳ 'ಕೈವಲ್ಯ ಪದ್ಧತಿ'

ನಿಜಗುಣ ಶಿವಯೋಗಿಗಳವರ 'ಕೈವಲ್ಯ ಪದ್ಧತಿ'ಯ ಹಾಡುಗಳು ಭಾವ-ಭಾಷೆ ಮತ್ತು ಸಂಗೀತ ಎಲ್ಲ ದೃಷ್ಟಿಯಿಂದಲೂ ಪರಿಪೂರ್ಣವಾದ ಸ್ವರವಚನ ಕೃತಿಗಳು.

---

೨. ಡಾ. ಎಲ್. ಬಸವರಾಜು ಅವರು ಸ್ವರವಚನವನ್ನು 'ಶಿವದಾಸ ಗೀತ'ವೆಂದಿರುವರು. ಅದು ಹೊಸ ಪದವೇನೋ ಸರಿ. ಆದರೆ 'ದಾಸ' ವೈಷ್ಣವ ದ್ವೈತಭಕ್ತಿಯ ಪ್ರತೀಕ. ಅದು ವೀರಶೈವದ ಪರಿಭಾಷೆಗೆ ಹೊಂದದು. ವೀರಶೈವದ ಸಮರಸೈಕ್ಯದ ಸತಿ-ಪತಿ ಭಾವದಲ್ಲಿ ಲಿಂಗನು ದಾಸನಾಗದೆ 'ದಾಸಿ'ಯಾಗುತ್ತಾನೆ. ಘನಲಿಂಗಿ, ನಾಗಲಿಂಗಿ, ದಾಸಿಮಯ್ಯ ಇವೆಲ್ಲ ಶರಣ ಸಂಸ್ಕೃತಿಯ ದ್ಯೋತಕ ಅಂಕಿತಗಳು. 'ದಾಸ'ಕ್ಕೆ ಪರ್ಯಾಯವಾಗಿ 'ಶರಣ' ಪದ ಇನ್ನೂ ಹೆಚ್ಚು ಸಾರ್ಥಕವಾಗಿ ಒಪ್ಪುತ್ತಿತ್ತು.

ಅವುಗಳನ್ನು ಅನುಭಾವಿಗಳು ಪ್ರವಚನಗಳಲ್ಲಿ ವ್ಯಾಖ್ಯಾನಿಸಿ, ಹಳ್ಳಿಗರು ಭಜನಾಮೇಳಗಳಲ್ಲಿ ಹಾಡಿ ಆನಂದಿಸುವ ಪರಂಪರೆ ಇನ್ನೂ ಅಳಿದಿಲ್ಲ. 'ಕೈವಲ್ಯ ಪದ್ಧತಿ'ಗೆ ಸಿಗುವಷ್ಟು ಹಸ್ತಪ್ರತಿಗಳು ಉಳಿದ ಕನ್ನಡ ಕೃತಿಗಳಿಗೆ ಸಿಗುವುದಿಲ್ಲವೆಂಬುದು ಅದರ ಜನಪ್ರಿಯತೆಗೆ ಸಾಕ್ಷಿಯಾಗಿದೆ. ಮುದ್ರಣದಲ್ಲಿಯೂ ಅದರ ಆವೃತ್ತಿಗಳು ಹೆಚ್ಚಿನ ಸಂಖ್ಯೆಯಲ್ಲಿ, ವಿವಿಧ ಬಗೆಯಲ್ಲಿ ದೊರಕುತ್ತವೆ.

೧. "ಕೈವಲ್ಯ ಪದ್ಧತಿಯೆಂಬ ಗ್ರಂಥವು ಚೆನ್ನಾಗಿ ಶೋಧಿಸಿ, ಬೆಂಗಳೂರಲ್ಲಿ ಹೊಳೆಕಲ್ಲು ನರಸಿಂಹಯ್ಯನವರ ವಿಚಾರದರ್ಪಣ ಮುದ್ರಾಕ್ಷರಶಾಲೆಯೊಳು ೧೮೯೨ರಲ್ಲಿ ಮುದ್ರಿಸಲ್ಪಟ್ಟಿತು." ಇದು ಡೆಮ್ಮಿ ಅಷ್ಟಪತ್ರ ಆಕಾರದಲ್ಲಿದೆ.

೪. ೧೫೦ ವರ್ಷಗಳ ಹಿಂದೆ ಕನ್ನಡದ ಅಚ್ಚಿನ ಮೊಳೆಗಳೇ ಇರಲಿಲ್ಲ. ಕನ್ನಡದ ಪುಸ್ತಕಗಳೆಲ್ಲ, ಅದೂ ಮದ್ರಾಸಿನಲ್ಲಿ (ಚೆನ್ನಪುರಿಯಲ್ಲಿ) ತೆಲುಗು ಅಕ್ಷರಗಳಲ್ಲಿಯೇ ಮುದ್ರಣಗೊಳ್ಳುತ್ತಿದ್ದವು. ೧೮೭೫ರ ಸುಮಾರಿಗೆ ಕನ್ನಡ ಅಕ್ಷರಗಳು ಅಚ್ಚಿನ ಮನೆಗೆ ಬಂದವು.

'ವಿವೇಕ ಚಿಂತಾಮಣಿ'ಯಂಥ ವಿಶ್ವಕೋಶವನ್ನು ಬಹುಶ್ರುತ ವಿದ್ವತ್ತಿನ ಸಿದ್ಧಾಂತಿ ಸುಬ್ರಹ್ಮಣ್ಯಶಾಸ್ತ್ರಿಗಳ ಕೈವಾಡದ ಪ್ರಕ್ಷೇಪಗಳಿಂದಾಗಿ ವಿಕೃತಗೊಳಿಸಿ, ಕವಿಯ ಕಾಲ-ಮತಗಳ ಬಗ್ಗೆ ಗೊಂದಲ ಉಂಟುಮಾಡಿದ ಹೊಳೆಕಲ್ಲ ಈ ಶಾಸ್ತ್ರಿಗಳಿಗೆ 'ಕೈವಲ್ಯ ಪದ್ಧತಿ'ಯ ಸ್ವರವಚನಗಳಲ್ಲಿ ಪ್ರಕ್ಷೇಪ ಮಾಡುವುದು ಸಾಧ್ಯವಿರಲಿಲ್ಲ. ಪ್ರಾಚೀನ ಹಸ್ತಪ್ರತಿಗಳಲ್ಲಿಯ ಪಾಠವನ್ನು ಇದ್ದಂತೆಯೇ ಶುದ್ಧವಾಗಿ ಪ್ರತಿ ಮಾಡಿರುವುದು ಸಂಸ್ತುತ್ಯ. ಜೋಡು ಹಾಡುಗಳ ಮತ್ತು ಬಿಡಿನುಡಿಗಳ ಗಣನೆಯಲ್ಲಿ ಹೆಚ್ಚಿನ ವ್ಯತ್ಯಾಸವಿಲ್ಲದಿರುವುದು ಗಮನಾರ್ಹ.

೨. 'ಕೈವಲ್ಯ ಪದ್ಧತಿ'ಯ ಜನಪ್ರಿಯತೆಯನ್ನು ಗಮನಿಸಿದ ಹೊಳೆಕಲ್ಲ ಪಂ. ನರಸಿಂಹಯ್ಯಶಾಸ್ತ್ರಿಗಳು ಮೂಲಕ್ಕೆ ಟೀಕೆಯೊಂದನ್ನು ಜೋಡಿಸಿ ೧೮೭೩ರಲ್ಲಿ ಪ್ರಕಟಿಸಿದರು. ಈ ಸಟೀಕು ಕೈವಲ್ಯಪದ್ಧತಿಯ ಮೊದಲ ಛಾಪದ ೨೨೫೦ ಪ್ರತಿಗಳು ಅಚ್ಚಾಗಿರುವುದೊಂದು ದಾಖಲೆ.

ಈ ಟೀಕೆಯನ್ನು ಹೊಳೆಕಲ್ಲ ನರಸಿಂಹಯ್ಯ ಶಾಸ್ತ್ರಿಗಳ ರಚನೆಯೆಂದು ಹೇಳಲಾಗಿದೆ. ಆದರೆ ಇದು ಪ್ರಾಚೀನ ಹಸ್ತಪ್ರತಿಗಳಲ್ಲಿ ಇದ್ದುದು. ಅದನ್ನು ತಾವು ಬರೆದುದೆಂದು ಹೇಳಿಕೊಂಡಿರುವುದು ಒಂದು ತೆರನಾದ ಕೃತಿಚೌರ್ಯವಾಗಿದೆ.

ತಾಡೋಲೆ ಕಾಗದ ಹಸ್ತಪ್ರತಿಗಳಲ್ಲಿಯ[೩] ಈ ಟೀಕು ಬಹಳ ಪ್ರಸಿದ್ಧವಾಗಿದೆ:

---

೩. ಕಾಗದ ಪ್ರತಿ ನಂ. ೧೫೭, ಶ್ರೀ ಮಂಜುನಾಥೇಶ್ವರ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ, ಧರ್ಮಸ್ಥಳ; ಇದರಲ್ಲಿ ಜೋಡು ಸ್ವರವಚನಗಳು ೧೭೩ ಮತ್ತು ಬಿಚ್ಚಿದ ಪದಗಳು ೭೪೩ ಇವೆ.
ತುರಮುರಿ ಮುದ್ರಿತ ಪುಸ್ತಕದಲ್ಲಿಯ ಪಾಠಾಂತರಗಳು-

ಪ್ರಾರಂಭ: ಶ್ರೀ ಗುರು ವಚನೋಪದೇಶವ ಲಾಲಿಸಿ
ದಾಗಳಹುದು ನರರಿಗೆ ಮುಕುತಿ॥

ಟೀಕು॥ ಶ್ರೀ- ಷಡ್ಗುಣೈಶ್ವರ್ಯ ಸಂಪತ್ಕರ[೪]ನುಳ್ಳ[೪]। ಗುರುಗುರುಸ್ವಾಮಿಯ। ವಚನ- ವಾಕ್ಯದ। ಉಪದೇಶವ-ಅನುಗ್ರಹವನ್ನು।[೫]ಲಾಲಿಸಿ[೫]ದಾಗಳೆ-ಕೇಳಿದಾಕ್ಷಣದಲ್ಲಿಯ। ನರರಿಗೆ-[೬] ನರಜನ್ಮದ ಭಕ್ತರಿಗೆ[೬]। ಮುಕುತಿ-ಮೋಕ್ಷವು। ಅಹುದು-ಆಗುವುದು। ಅಂತ್ಯದಲ್ಲಿಯ ಜ್ಞಾನಪ್ರತಿಪಾದನ ಸ್ಥಳದಲ್ಲಿಯ "ಇಂತು ಕರ್ಮದ ಭೇದವೆಂತು।" ಎಂಬ ನುಡಿಗೆ ಬರೆದಿರುವ ಟೀಕೆಯಿದು[೭]: "ಇಂತು-ಈ ಪ್ರಕಾರವು, ಕರ್ಮದ-ಪ್ರಾರಬ್ಧ ಕರ್ಮದ, ಭೇದವು-ಭಿನ್ನತ್ವವು, ಎಂತು-ಯಾವ ಪ್ರಕಾರವು."

ಈ ಸಟೀಕು ಹಸ್ತಪ್ರತಿಯ ಕೊನೆಯಲ್ಲಿ-"ಕೈವಲ್ಯ ಪದ್ಧತಿಯ ಮಹಾವಾಕ್ಯಕ್ಕೆ ಬರೆದ ಟೀಕೆಯ ಪುಸ್ತಕವನ್ನು ಬರೆದವರು ಮಾನಿಹಳ್ಳಿ ಪುರವರ್ಗದ ಚರಪಟ್ಟದ ಚೆಂನವೀರದೇಶಿಕೇಂದ್ರರು" ಎಂದಿದೆ. ಲಿಪಿಯ ಕಾಲ ಶಾ.ಶ. ೧೭೮೩. ಈ ಟೀಕೆಯನ್ನೇ ನರಸಿಂಹಯ್ಯನವರು ಅಕ್ಷರಶಃ ಅನುಕರಿಸಿರುವರು.[೮]

೩. 'ಕೈವಲ್ಯಪದ್ಧತಿ'ಯನ್ನು ಶ್ರೀ ಗಂಗಾಧರ ಮಡಿವಾಳೇಶ್ವರ ತೂರ್ಮರಿ ಅವರು ಪ್ರಾಚೀನ ಟೀಕಾಸಹಿತವಾಗಿ ಬಹುಶ್ರಮದಿಂದ ಶೋಧಿಸಿ ಬೆಳಗಾಂವಿಯ ಸಮಾಚಾರದಚ್ಚುಕೂಟದಲ್ಲಿ ೧೮೭೩ರಲ್ಲಿ ಮುದ್ರಿಸಿ ಪ್ರಕಟಿಸಿದರು.

ಶ್ರೀ ತುರಮರಿಯವರು ಉಪೋದ್ಘಾತದಲ್ಲಿ "ಈ ಗ್ರಂಥದೊಳಗೆ ಗೂಢಗನ್ನಡ ಶಬ್ದಗಳು ಬಹಳವಿರುವುದರಿಂದ ತಿಳಿದುಕೊಳ್ಳುವವರಿಗೆ ಬಹು ಕಷ್ಟವಾಗುತ್ತದೆಂದು ಬಗೆದು, ಒಬ್ಬ ವಿದ್ವಾಂಸನು ನೂರಾರು ವರ್ಷಗಳ ಪೂರ್ವದಲ್ಲಿ ಇದಕ್ಕೆ ಪದಶಃ ಅರ್ಥ ಬರೆದು ಓದತಕ್ಕವರಿಗೆ ಸುಲಭೋಪಾಯ ಮಾಡಿದನು. ಆ ವಿದ್ವಾಂಸನ ಹೆಸರು ಗೊತ್ತಿಲ್ಲದ ಕಾರಣ ಬರೆಯಲಿಲ್ಲ." ಎಂದು ಪ್ರಾಮಾಣಿಕವಾಗಿ ಉಲ್ಲೇಖಿಸಿರುವುದು ಮನನೀಯ.

ಶ್ರೀ ತುರಮರಿಯವರು ನಿಜಗುಣ ಶಿವಯೋಗಿಗಳ ಮತ ಮತ್ತು ಕಾಲದ ಬಗ್ಗೆ ತಪ್ಪು ಕಲ್ಪನೆಗಳನ್ನು ಹೊಂದಿದ್ದರು. ಉಪೋದ್ಘಾತದಲ್ಲಿ "ಈತನು ಆರಾಧ್ಯ ಬ್ರಾಹ್ಮಣನು, ಅಂದರೆ ಲಿಂಗ ಯಜ್ಞೋಪವೀತಗಳನ್ನು ಧಾರಣ ಮಾಡುವ ಶೈವನು ... ನಿಜಗುಣ ಶಿವಯೋಗಿಯು ೯೦೦ ವರ್ಷಗಳ ಪೂರ್ವದಲ್ಲಿದ್ದನೆಂಬ ಬಗ್ಗೆ ಆಧಾರವೇನೆಂದರೆ ಬಸವೇಶ್ವರನು ಸ್ವತಃ ತಾನೇ ರಚಿಸಿದ ವಚನದಲ್ಲಿ ಈತನ ಬಗ್ಗೆ ಬರೆದಿರುವನು; ಇದಲ್ಲದೆ ನಿಜಗುಣ ಶಿವಯೋಗಿಯ ಆರೂ ಗ್ರಂಥಗಳಲ್ಲೆಲ್ಲಿಯೂ ಬಸವೇಶ್ವರನ ಹೆಸರು ತೋರುವದಿಲ್ಲವಾದ ಕಾರಣ ಇವನು ಬಸವೇಶ್ವರನಿಗಿಂತ ಪೂರ್ವದವನೆಂದು ತಿಳಿಯಬರುತ್ತದೆ."

---

೪-೪ ನಾದ, ೫-೫ ಆಲಿಸಿ, ೬-೬ ಪ್ರಾಣಿಗಳಿಗೆ;

೭. ಬೆಂಗಳೂರು ವಿಶ್ವವಿದ್ಯಾಲಯದ ಶ್ರೀ ಎಸ್. ಶಿವಣ್ಣ ಸಂಪಾದಿತ ಕ.ಹ.ವ.ಸೂಚಿ (ಸಂ.೧) ೭೯ - ಕೆ.೧೯೯, ಪು. ೯೨-೯೩.

೮. ಸಟೀಕು ಕೈವಲ್ಯಪದ್ಧತಿ, ಪು. ೨೭೯;

ನಿಜಗುಣರು ಆರಾಧ್ಯ ಬ್ರಾಹ್ಮಣರಾಗಿರದೆ ವೀರಶೈವರಾಗಿದ್ದರೆನ್ನುವುದಕ್ಕೆ ಕೈವಲ್ಯಪದ್ಧತಿ, ವಿವೇಕ ಚಿಂತಾಮಣಿ ಮತ್ತು ಪಾರಮಾರ್ಥ ಪ್ರಕಾಶಿಕೆ ಗ್ರಂಥಗಳಲ್ಲಿ ಸ್ಪಷ್ಟವಾದ ಆಧಾರಗಳಿವೆ. ನಿಜಗುಣರ ಕಾಲ ಸು. ೧೫೦೦. ಬಸವಣ್ಣನವರು ವಚನದಲ್ಲಿ ಸ್ಮರಿಸಿರುವ ನಿಜಗುಣಯೋಗಿ ವಚನಕಾರ. ಶಂಭುಲಿಂಗ ಬೆಟ್ಟದಲ್ಲಿದ್ದ ನಿಜಗುಣ ಶಿವಯೋಗಿಗಿಂತ ಭಿನ್ನನಾಗಿರುವ ಆವನು ಕೃಷ್ಣಾತೀರದ ಚಿಮ್ಮಲಗಿಯ ನಿವಾಸಿ ಮತ್ತು ಕೆಂಬಾವಿ ಚಂದಿಮರಸನ ಗುರು. ನಿಜಗುಣರ ಕೃತಿಗಳಲ್ಲಿ ಬಸವಾದಿ ಪ್ರಮಥರ ಉಲ್ಲೇಖವಿಲ್ಲದಿರುವುದು ಸತ್ಯ. ಅದೊಂದು ಕಾರಣದಿಂದಲೇ ಅವರ ಕಾಲವನ್ನು ಬಸವಯುಗಕ್ಕೆ ಒಯ್ಯಲು ಬಾರದು. ಕನ್ನಡ ಸಾಹಿತ್ಯಚರಿತ್ರೆಯ ಅಧ್ಯಯನ ಮತ್ತು ಸಂಶೋಧನೆ ನಡೆಯದಿದ್ದ ಕಾಲದಲ್ಲಿ ಇಂಥ ಹೇಳಿಕೆ ತೀರ ಸಹಜ.

೪. ಸಟೀಕಾ ಕೈವಲ್ಯ ಪದ್ಧತಿ "ಎಂಬೀ ಗ್ರಂಥಕ್ಕೆ ಮಿರ್ಲೆ ನಂಜುಂಡಯ್ಯನವರಿಂದ ಟೀಕು ಬರೆಯಲ್ಪಟ್ಟು .... ಬಳ್ಳಾರಿ ಕೃಷ್ಣಮಂದಿರದ ಬುಕ್‌ಡಿಪೊ ಪ್ರೊಪ್ರೈಟರ್ ಬಿ.ಟಿ. ಪೆರುಮಾಳಶೆಟ್ಟಿ ಅಂಡ್ ಬ್ರದರ್ಸ್‌ರವರಿಂದ, ಮೈಸೂರು ಕೆ.ಎಸ್. ನರಸಿಂಹಯ್ಯನವರ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿಸಿ ಪ್ರಕಟಿಸಲ್ಪಟ್ಟಿತು. ಪ್ರಥಮ ಮುದ್ರಣ ೨,೦೦೦ ಪ್ರತಿಗಳು, ೧೯೨೭, ಕಿರೀಟ ೪ ಪತ್ರ; ಪುಟಗಳು ೧೨೮, ಕ್ರಯ ರೂ. ೧-೪-೦.

ಈ ಟೀಕೆಯೂ ಹಳೆಯ ಪ್ರತಿಪದ ಟೀಕೆಯನ್ನೇ ಅನುಸರಿಸಿದೆ. ಮೊದಲ ಪಲ್ಲವಿಯ ಮಡಿಗೆ "ಶ್ರೇಷ್ಠವಾದ ಗುರುವಚನವನ್ನಾಲಿಸಿದಾಗಲೇ ಮಾನವರಿಗೆ ಕೈವಲ್ಯ ದೊರೆಯುವುದು. ಶ್ರೇಷ್ಠನಾದ ಆ ಗುರುವಿನ ಮಾತುಗಳು ಹೇಗಿರುವುವೆಂದರೆ" ಎಂಬ ಮಾಲಾನುರೂಪ ಟೀಕೆ ಸರಳವಾಗಿದೆ.

ಮೈಸೂರು ಚೆಲುವಾಂಬಾ ಅಗ್ರಹಾರದ ನಂಜುಂಡಯ್ಯನವರು ತಮ್ಮ ಟೀಕೆಯ ಲಘುಪೀಠಿಕೆಯಲ್ಲಿ ಸದಾಶಿವಯೋಗಿಗಳ ಶಿಷ್ಯ ನಿಜಗುಣರ ಕಿರುಪರಿಚಯ ಕೊಟ್ಟು, ಸಕಲರಿಗೂ ಸುಲಭವಾಗಿ ತಿಳಿಯುವುದಕ್ಕಾಗಿ ತಾವು ಇದಕ್ಕೆ ಸಾಮಾನ್ಯವಾದ ತಾತ್ಪರ್ಯ ಬರೆದಿರುವುದಾಗಿ ಹೇಳಿರುವರು.

೫. ಶ್ರೀ ಸಿ. ಸುಬ್ರಹ್ಮಣ್ಯ ಶಾಸ್ತ್ರಿಗಳು ಬರೆದ ತಾತ್ಪರ್ಯ ಟಿಪ್ಪಣಿಯೊಂದಿಗೆ 'ಕೈವಲ್ಯ ಪದ್ಧತಿ'ಯನ್ನು, ಡೆಮ್ಮಿ ಅಷ್ಟಪತ್ರ ಆಕಾರದಲ್ಲಿ ಬಳ್ಳಾರಿಯ ಕರ್ನಾಟಕ ಬುಕ್ ಡಿಪೋ ಛಾಪಖಾನೆಯ ಮಾಲಕರಾದ ಎಸ್.ಕೆ. ಕೃಷ್ಣಸ್ವಾಮಿಶೆಟ್ಟಿ ೧೯೨೭ರಲ್ಲಿ ಪ್ರಕಟಿಸಿದರು. "ಮೂಢ ಪ್ರೌಢರಿಗೆ ಸರಿಯಾಗಿ ತಿಳಿಯುವಂತೆ ತಾತ್ಪರ್ಯ ಬರೆದು ವಿರಚಿಸಿರುವ ಅಪೂರ್ವ ಗ್ರಂಥ"ವೆಂಬುದು ಅಂದಿನ ಗ್ರಂಥಪ್ರಕಾಶಕರ ಪ್ರಚಾರ ವೈಖರಿ! ಇದು ಹೋಳೆಕಲ್ಲು ನರಸಿಂಹಯ್ಯನವರು ೧೮೭೩ರಲ್ಲಿ ಪ್ರಕಾಶಗೊಳಿಸಿದ ಟೀಕೆಯ ಪ್ರತಿರೂಪವೇ ಆಗಿದೆ.

೬. ಟೀಕಾ ತಾತ್ಪರ್ಯ ವಿವರಣ ಸಮೇತವಾದ 'ಕೈವಲ್ಯ ಪದ್ಧತಿ': "ಈ ಗ್ರಂಥಕ್ಕೆ ಕೆ. ನಂಜುಂಡಶಾಸ್ತ್ರಿಗಳಿಂದ ಟೀಕು ರಚಿಸಲ್ಪಟ್ಟು, ಇದರ ವಿಶಿಷ್ಟ ಹಕ್ಕನ್ನು ಪಡೆದಿರುವ ಬಳ್ಳಾರಿ ಕರ್ನಾಟಕ ಬುಕ್ ಡಿಪೋ ಛಾಪಖಾನೆಯ ಮಾಲಿಕರಾದ ಎಸ್.ಕೆ. ಕೃಷ್ಣಸ್ವಾಮಿಶೆಟ್ಟಿ

ಅಂಡ್ ಸನ್ಸ್ ಅವರಿಗಾಗಿ, ವಾಜಪೇಯ ಗೋವಿಂದಯ್ಯನವರಿಂದ ಶ್ರೀ ವೆಂಕಟಾದ್ರಿ ಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಿ ಪ್ರಕಟಿಸಲ್ಪಟ್ಟಿತು." ಬೆಂಗಳೂರು ಸಿಟಿ. ದ್ವಿತೀಯ ಮುದ್ರಣ, ೨೦೦೦ ಪ್ರತಿಗಳು, ೧೯೩೭, ಕಿರೀಟ ೪ ಪತ್ರ, ಪುಟ ೧೨೦, ಕ್ರಯ ರೂ. ೨-೦-೦.

ಮೊದಲಿಗೆ ಟೀಕಾಕಾರರು ಶ್ರೀಮನ್ನಿಜಗುಣ ಶಿವಯೋಗಿಗಳ ಚರಿತ್ರೆಯಲ್ಲಿ ಕಾಲದ ವಿಚಾರವನ್ನು ಐತಿಹಾಸಿಕವಾಗಿ ವಿಮರ್ಶಿಸಿರುವುದು ಸಂಶೋಧನೆಯ ಬಗೆಯಲ್ಲಿದೆ. ಬಸವಣ್ಣನವರ ಸಮಕಾಲೀನ(ಕ್ರಿ.ಶ. ೧೧೬೦) ಹರ್ಷಮಿಶ್ರನ 'ಖಂಡನ ಖಂಡನ ಖಾದ್ಯ' ವೇದಾಂತ·ಭಾಷ್ಯ ಟೀಕೆಯ ಹಾಗೂ ಯಾದವ ಕನ್ನರ ರಾಜನ (ಕ್ರಿ.ಶ.೧೨೪೭-೬೦) ಆಶ್ರಿತ ಅಮಲಾನಂದನು ಬರೆದ 'ಕಲ್ಪತರು' ವೇದಾಂತ ವ್ಯಾಖ್ಯೆಯ ಉಲ್ಲೇಖಗಳು 'ವಿವೇಕ ಚಿಂತಾಮಣಿ'ಯಲ್ಲಿ ಬಂದಿರುವುದರಿಂದ ನಿಜಗುಣರು ೧೩ನೆಯ ಶತಕದ ಆನಂತರದವರು; ಸು. ೪೨೭ ವರ್ಷ ಹಿಂದಿನವರು, ಅಂದರೆ ಸು. ೧೫೦೦ರಲ್ಲಿ ಇದ್ದವರೆಂದು ಹೇಳಿರುವುದು ಸರ್ವಮಾನ್ಯ ಕಾಲ ನಿರ್ಣಯವೆನಿಸಿದೆ.

ಮೊದಲ ಪಲ್ಲವಿ ನುಡಿಯನ್ನು ಕುರಿತು "ಸದ್ಗುರುವು ಹೇಳಿದ ಮಾತನ್ನು ಕೇಳಿದಾಗಲೇ ಮನುಷ್ಯರಿಗೆ ಮುಕ್ತಿಯುಂಟಾಗುವದು (ಎಂಥಾ ಮಾತನ್ನು ಅಂದರೆ)" ಎಂದು ಪ್ರತಿಪದಕ್ಕೆ ಬಿಡಿಯಾಗಿ ಅರ್ಥ ಹೇಳದೆ ಮಾಲಾಟೀಕಾ ಪದ್ಧತಿಯನ್ನು ಅನುಕರಿಸಿರುವುದು ನವ್ಯವೆನಿಸಿದೆ.

೭. ಹುಬ್ಬಳ್ಳಿಯ ಶ್ರೀ ಸಿದ್ಧಾಶ್ರಮದ ಶ್ರೀ ಜಡಾಕೃಷ್ಣಾನಂದಸ್ವಾಮಿಗಳು ೧೯೪೧ರಲ್ಲಿ ನಿಜಗುಣ ಶಿವಯೋಗಿ ವಿರಚಿತ 'ವೇದಾಂತ ಗ್ರಂಥಾವಳಿ'ಯನ್ನು ಪ್ರಕಾಶ ಪಡಿಸಿದರು. ಅದರಲ್ಲಿ 'ಕೈವಲ್ಯ ಪದ್ಧತಿ'ಯೂ ಒಂದು ಗ್ರಂಥ. ಅದಕ್ಕೆ ಪ್ರಸ್ತಾವನೆ, ಸಾಂದರ್ಭಿಕ ಕಥೆಗಳು, ಶಬ್ದಾರ್ಥ ವಿವರಣೆಯನ್ನೂ ಅನುಭಾವಿ ಪ್ರವಚನಪಟು ಶ್ರೀ ಬ.ಕ. ಪಾಟೀಲ ಅವರು ಬರೆದಿರುವರು. ಅವರು ಗ್ರಂಥ ವಿಮರ್ಶೆಯಲ್ಲಿ- "ಇದು ಸಂಗೀತದಿಂದ ಯುಕ್ತವಾದ ಪದ್ಯಗ್ರಂಥ. ಇದರಲ್ಲಿ ಮುಕ್ತಿಸಾಮ್ರಾಜ್ಯವನ್ನು ಹೊಂದಲು ಪಾವಟಿಗೆಯಂತಿಪ್ಪ ಪಂಚಸ್ಥಲಗಳಿರುವವು. ಈ ಪದಗಳು ಗಾನಲೋಲನಾದ ಪರಮಾತ್ಮನನ್ನು ಮೆಚ್ಚಿಸುವಂತವುಗಳಾಗಿವೆ." ಎಂದಿರುವುದು ವಾಸ್ತವಾಭಿಪ್ರಾಯ.

ಅಷ್ಟಪತ್ರದ ಕಿರೀಟಾಕಾರದಲ್ಲಿ, ಬಿಳಿಯ ಕಾಗದದಲ್ಲಿ ಬಹಳ ಶುದ್ಧ ಮತ್ತು ಅಂದವಾಗಿ ಅಚ್ಚಾದ ಸಂಸ್ಕರಣವಿದು. ಸು. ೫೦೦ ಪುಟಗಳ 'ಗ್ರಂಥಾವಳಿ' ಪುಸ್ತಕದ ಬೆಲೆ ಮೂರು ರೂಪಾಯಿಗಳು ಮಾತ್ರ!

೮. ಕೈವಲ್ಯ ಪದ್ಧತಿಯ ಯೋಗಪ್ರತಿಪಾದನ ಸ್ಥಲವನ್ನು ಸವಿಸ್ತರ ಟೀಕೆಯೊಂದಿಗೆ 'ಪಂಚಯೋಗ'ವೆಂದು ಹೆಸರಿಸಿ 'ಭಾಷ್ಯಾಚಾರ್ಯ' ಶ್ರೀ ಸದಾಶಿವ ಶಿವಾಚಾರ್ಯ ಸ್ವಾಮಿಗಳು, ಗಿರಿಯಾಪುರದ ಶ್ರೀಗುರು ಕುಮಾರಾಶ್ರಮದ ವತಿಯಿಂದ ೧೯೭೩ರಲ್ಲಿ ಪ್ರಕಟಿಸಿದರು. ಕೊನೆಯ ೫ಅನುಬಂಧಗಳಲ್ಲಿಯ ವಿಷಯ ವಿವೇಚನ ಅನುಭಾವಪೂರ್ಣವಾಗಿದೆ. ಅನುಬಂಧ ೧ರಲ್ಲಿ ಮಂತ್ರ, ಲಯ, ಹಠ, ರಾಜ ಮತ್ತು

ಶಿವಯೋಗವೆಂಬ ಪಂಚಯೋಗಗಳ ಸಂಕ್ಷಿಪ್ತ ವಿವರಣೆಯೊಂದಿಗೆ, ಪಾತಂಜಲ ಯೋಗಶಾಸ್ತ್ರದ ದೃಷ್ಟಿ, ಮುದ್ರೆ, ಬಂಧ ಹಾಗೂ ಅಷ್ಟಾಂಗಗಳನ್ನು ಸಾಧಾರವಾಗಿ ವಿವರಿಸಿರುವರು. ಅನುಬಂಧ ೨ರಲ್ಲಿ ಪೂರ್ವಿಕರು ಬರೆದಿಟ್ಟ ಯೋಗಾನುಭವ ವಿಷಯಕ ಟಿಪ್ಪಣಿಗಳನ್ನು ಒದಗಿಸಿರುವರು. ಅನುಬಂಧ ೩ರಲ್ಲಿ ಶ್ರೀಮದಲ್ಲಮ ಪ್ರಭುದೇವರ ಲಿಂಗ ಸೂತ್ರ ನಿರ್ಣಯ ವಚನ, ನವ-ಷಟ್‌ಚಕ್ರಗಳು, ದೃಷ್ಟಿ-ಲಕ್ಷ್ಯ ವಿಷಯಗಳು ಸಚಿತ್ರವಾಗಿ ವಿವೇಚನೆಗೊಂಡಿರುವುದು ಸಂಪಾದನೆಯ ಮಹತ್ವ ಹೆಚ್ಚಿಸಿದೆ.

೯. ಸ್ವರವಚನ ಸಾರಾಮೃತವಾದ 'ಕೈವಲ್ಯ ಪದ್ಧತಿ'ಯನ್ನು ಸಮಗ್ರ ಹಾಗೂ ಪರಿಶುದ್ಧವಾಗಿ ಸಂಪಾದಿಸಿದ ಶ್ರೇಯ ಶ್ರೀಮಲ್ಲಾಬಾದಿ ವೀರಭದ್ರಪ್ಪನವರಿಗೆ ಸಲ್ಲಬೇಕು. ಅವರು ೧೯೬೭ರಲ್ಲಿ 'ಪ್ರೇಮದ ಬಳ್ಳಿಯ ಬಳಗ'ದ ಪರವಾಗಿ ಪ್ರಕಟಿಸಿದ ಈ ಆವೃತ್ತಿ ಜನಪ್ರಿಯವಾಯಿತು. ಪ್ರಸ್ತಾವನೆಯಲ್ಲಿ ಕೈವಲ್ಯ ಪದ್ಧತಿಯ ಛಂದಸ್ಸು ಮತ್ತು ರಾಗಗಳನ್ನು ಕುರಿತ ವಿವೇಚನೆ ಮನನೀಯವಾಗಿದೆ. ಶ್ರೀ ಜಿ.ಹೆಚ್.ಎಂ. ಸದಾಶಿವಯ್ಯನವರು ನಿಜಗುಣ ಶಿವಯೋಗಿಗಳು ೧೪ನೆಯ ಶತಮಾನದ ಅಂತ್ಯ ಮತ್ತು ೧೫ನೆಯ ಶತಕದ ಆದಿಯಲ್ಲಿದ್ದರೆಂದು ಸಂಶೋಧನೆಯಿಂದ ನಿರ್ಣಯಿಸಿರುವರು. ಇಲ್ಲಿ ಹಸ್ತಪ್ರತಿಗಳನ್ನು ಆಧರಿಸಿ ಸಂಪಾದಿಸದಿರುವುದೊಂದು ಎದ್ದು ಕಾಣುವ ಕೊರತೆ.

ಕಿರೀಟ ಅಷ್ಟಪತ್ರದ, ಸು. ೨೨೫ ಪುಟಗಳ ಬೆಲೆ ೩ ರೂ.ಗಳು.

೧೦. ಹುಬ್ಬಳ್ಳಿಯ ಶ್ರೀ ರುದ್ರಾಕ್ಷಿಮಠದ ವತಿಯಿಂದ ೧೯೬೯ ಸಟೀಕು 'ಕೈವಲ್ಯಪದ್ಧತಿ' ಮೊದಲ ಬಾರಿಗೆ ಶಾಸ್ತ್ರೀಯವಾಗಿ ಸಂಪಾದಿತವಾಯಿತು.

ರುದ್ರಾಕ್ಷಿಮಠ ಹಿಂದೊಮ್ಮೆ ನಿಜಗುಣರ ಶಾಸ್ತ್ರಗಳ ಅಧ್ಯಯನ ಕೇಂದ್ರವಾಗಿತ್ತು. ಈ ಮಠದ ಹಿಂದಿನ ವಿರಕ್ತ ಗುರುಗಳು ಕನ್ನಡ-ಸಂಸ್ಕೃತ ಗ್ರಂಥಗಳಿಗೆ ಟೀಕೆಗಳನ್ನು ಬರೆದವರು. ಇದು ಟೀಕಿನ ಮಠವೆಂದೇ ಪ್ರಸಿದ್ಧಿ ಪಡೆದಿತ್ತು. ಈಗಲೂ ಇಲ್ಲಿ ನಿಜಗುಣರ ಶಾಸ್ತ್ರಗಳ ಪ್ರವಚನ, ವಿಶೇಷವಾಗಿ ಶ್ರಾವಣಮಾಸದಲ್ಲಿ ನಡೆಯುತ್ತಿದೆ. ನೂರೈವತ್ತು ವರ್ಷಗಳ ಹಿಂದೆ ರುದ್ರಾಕ್ಷಿಮಠ ಅನುಭಾವಿ ಶಿವಯೋಗಿಗಳ, ಸಿದ್ಧರ ಸತ್ಸಂಗ ಗೋಷ್ಠಿಗಳ ಪೀಠವೆನಿಸಿತ್ತು. ಹೊಸಳ್ಳಿಯ ಬೂದಿಸ್ವಾಮಿಗಳು, ನವಿಲುಗುಂದದ ನಾಗಲಿಂಗಪ್ಪಜ್ಜ, ಶಿಶುನಾಳ ಶರೀಫ ಸಾಹೇಬರು, ಸಿದ್ಧಾರೂಢರು ಮತ್ತು ಹಾನಗಲ್ಲ ಕುಮಾರಸ್ವಾಮಿಗಳಂಥ ಮಹಂತರು ಆಧ್ಯಾತ್ಮ ಚರ್ಚೆ ನಡೆಸಿ ತತ್ತ್ವಬೋಧ ಪಡೆದ ಕೈವಲ್ಯಧಾಮವೆನಿಸಿತ್ತು. ಇಲ್ಲಿ ನಿಜಗುಣರ ಷಟ್‌ಶಾಸ್ತ್ರಗಳ ಹಸ್ತಪ್ರತಿ ಭಂಡಾರವೇ ಇತ್ತು. ಅದನ್ನು ಗಮನಿಸಿ ಶ್ರೀ ನಿ.ಪ್ರ. ರುದ್ರಸ್ವಾಮಿಗಳು ನಿಜಗುಣರ ಕೃತಿಗಳ ಸಂಶೋಧನೆ ಮತ್ತು ಪ್ರಕಾಶನ ಮಾಡಲು ಸಂಕಲ್ಪಿಸಿದರು. ಶ್ರೀಗಳ ಪ್ರೇರಣೆಯಂತೆ ಪಂ. ನಾಗಭೂಷಣ ಶಾಸ್ತ್ರಿಗಳು ತಾಡವೋಲೆ ಹಸ್ತಪ್ರತಿಗಳನ್ನು ಶೋಧಿಸಿ ಪಾಠಾಂತರಗಳೊಂದಿಗೆ 'ಕೈವಲ್ಯ ಪದ್ಧತಿ'ಯನ್ನು ಸಂಪಾದಿಸಿದರು. ಸಾಮಾನ್ಯ ಓದುಗರ ದೃಷ್ಟಿಯಿಂದ ಕೊನೆಯಲ್ಲಿ 'ಭಾವಪ್ರಕಾಶ'ವೆಂಬ ಸರಳ ಗದ್ಯಾನುವಾದವನ್ನು ಕೊಟ್ಟಿರುವರು.

ಡೆಮ್ಮಿ ಅಷ್ಟ ಪತ್ರದ, ಸು. ೩೨೫ ಪುಟಗಳ ಬೆಲೆ ಕೇವಲ ಆರು ರೂ.ಗಳು.

೧೧. ಅದೇ ಸಂಸ್ಕರಣ ೧೯೮೫ರಲ್ಲಿ ವಿಶ್ವಕನ್ನಡ ಸಮ್ಮೇಳನದ ಸಂದರ್ಭದಲ್ಲಿ ಕರ್ನಾಟಕ ಸರಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಪರವಾಗಿ ಪುನರ್ಮುದ್ರಣಗೊಂಡಿತು.

ಅಷ್ಟ ಪತ್ರ, ಪುಟಗಳು ೩೭೭, ಬೆಲೆ ಹತ್ತು ರೂಪಾಯಿಗಳು.

೧೨. ಶ್ರೀ ನಿಜಗುಣ ಶಿವಯೋಗಿಗಳ ತಪೋಭೂಮಿ ಶಂಭುಲಿಂಗನ ಬೆಟ್ಟದ ಸಾಧಕ ಶ್ರೀ ಟಿ. ಬಸವಣ್ಣ (ಈಗ ಶ್ರೀ ಕುಮಾರ ನಿಜಗುಣ ಸ್ವಾಮಿಗಳು) ಪಂ. ನಾಗಭೂಷಣಶಾಸ್ತ್ರಿಗಳ ಸಂಪಾದನೆಯ ಮೂಲಪಾಠವನ್ನು ಮಾತೃಕೆಯಾಗಿಟ್ಟುಕೊಂಡು, ಮೈಸೂರು ಮಾನಸಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯ ಸಂಶೋಧಕ ಡಾ. ಕೆ.ಜಿ. ನಾರಾಯಣ ಪ್ರಸಾದ ಅವರ ಸಹಕಾರದಿಂದ, ಪ್ರಾಚೀನ ಹಸ್ತಪ್ರತಿಗಳ ಪಾಠಾಂತರಗಳೊಂದಿಗೆ 'ಕೈವಲ್ಯ ಪದ್ಧತಿ'ಯ ಪರಿಷ್ಕೃತ ಆವೃತ್ತಿಯನ್ನು ಅಧ್ಯಯನ ಪೂರ್ಣ ಪ್ರಸ್ತಾವನೆಯೊಂದಿಗೆ ೧೯೮೩ರಲ್ಲಿ ಪ್ರಕಟಿಸಿದರು. ಕೊನೆಗೆ ಪದಗಳ ಅಕಾರಾದಿ ಇದೆ. ಆದರೆ ಮುಖ್ಯವಾಗಿ ಶಬ್ದಾರ್ಥಕೋಶ ಮತ್ತು ಟಿಪ್ಪಣಿಗಳು ಬೇಕಾಗಿತ್ತು. ಮೇಲು ಹೊದಿಕೆಯ ಮುಖಪುಟದಲ್ಲಿ ನಿಜಾನಂದದ ವೀಣೆ ನುಡಿಸುವ ಶಿವಯೋಗಿ ನಿಜಗುಣರ ವರ್ಣಮಯ ಭಾವಚಿತ್ರ ಆಕರ್ಷಕವಾಗಿದೆ.

ಡೆಮ್ಮಿ ಅಷ್ಟ ಪತ್ರ, ಪುಟ ೨೧೮, ಬೆಲೆ ೧೨ ರೂ.ಗಳು. 'ನಿಜಗುಣ ನಿಲಯ'ದ ಈ ಸಂಸ್ಕರಣ ಜನಮಾನ್ಯವಾಗಿದೆ.

೧೩. ಶ್ರೀ ಶಂಭುಲಿಂಗನ ಕ್ಷೇತ್ರದ 'ನಿಜಗುಣ ನಿಲಯ'ದ ಪ್ರಕಾಶನದಲ್ಲಿ ಸುಲಭ ಬೆಲೆಯ ಜೇಬು ಆವೃತ್ತಿಯ 'ಕೈವಲ್ಯ ಪದ್ಧತಿ'ಯ ಪ್ರತಿಗಳು ಹೊಸ ಬಗೆಯಲ್ಲಿ ಬಂದುದೊಂದು ವಿಶೇಷ. ೧೯೭೭ರಲ್ಲಿ ಡೆಮ್ಮಿ ೧೬ ಪತ್ರದ ಆಕಾರದಲ್ಲಿಯ ಪ್ರತಿ ಪ್ರಚುರಗೊಂಡಿತು.

೧೪. ಮತ್ತೆ ಹನ್ನೊಂದು ವರ್ಷಗಳ ಅನಂತರ ೧೯೮೮ರಲ್ಲಿ ಅಚ್ಚಾದ ಕಿರೀಟ ೧೬ ಪತ್ರದ ಕಿರು ಆಕಾರದ ಜೇಬಾವೃತ್ತಿ ಬಹಳ ಲೋಕಪ್ರಿಯವಾಯಿತು. ಅದರ ಮೇಲಾವರಣದಲ್ಲಿಯ ವೀಣಾಪಾಣಿ ನಿಜಗುಣರ ಬಣ್ಣದ ಭಾವಚಿತ್ರ ಕಳೆದುಂಬಿದೆ.

## ಸರ್ಪಭೂಷಣ ಶಿವಯೋಗಿಗಳ 'ಕೈವಲ್ಯ ಕಲ್ಪವಲ್ಲರಿ'

ಬೆಂಗಳೂರು ನಗರದ ಸಂಸ್ಥಾಪಕ ಕೆಂಪೇಗೌಡರ ಕಾಲದಲ್ಲಿ ಇಲ್ಲಿ ೭೩ ವೀರಶೈವ ಮಠಗಳಿದ್ದವು. ಅವುಗಳ ಒಡೆಯರಾದ ಗುರು-ವಿರಕ್ತರು ಶಿವಯೋಗ ಸಾಧನೆ, ವಚನಾಗಮಗಳ ಅಧ್ಯಯನದೊಂದಿಗೆ ಕೃತಿರಚನಾ ಕಾರ್ಯವನ್ನೂ ಎಸಗಿದ್ದಾರೆ. ಅವರಲ್ಲಿ ಸರ್ಪಭೂಷಣ ಶಿವಯೋಗಿಗಳು ಅಗ್ರಮಾನ್ಯ ವಾಗ್ಗೇಯಕಾರರು. ಅವರ ಸ್ವರವಚನ ಸಂಪುಟ 'ಕೈವಲ್ಯ ಕಲ್ಪವಲ್ಲರ' ನಿಜಗುಣರ 'ಕೈವಲ್ಯ ಪದ್ಧತಿ'ಯ ಕ್ರಮದಲ್ಲಿಯೇ ಐದು ಸ್ಥಲಗಳನ್ನು ಹೊಂದಿದೆ. 'ಗುರುಸಿದ್ಧ' ಮುದ್ರಿಕೆಯ ಅವರ ಹಾಡುಗಳನ್ನು ಈಗಲೂ ಜನರು

ಭಜನಮೇಳಗಳಲ್ಲಿ ಏಕದಾರಿ ಹಿಡಿದು ಹಾಡಿ ತನ್ಮಯರಾಗುತ್ತಾರೆ. ಈ ಕೃತಿಯ ಅನೇಕ ಆವೃತ್ತಿಗಳು ಕಾಲ-ಕಾಲಕ್ಕೆ ಪ್ರಕಟವಾಗಿರುವುದು ಅದರ ಲೋಕಪ್ರಿಯತೆಗೆ ಸಾಕ್ಷಿಯಾಗಿದೆ.

೧. "ಸರ್ಪ್ಪಣ ಸ್ವಾಮಿಗಳಿಂದ ವಿರಚಿತವಾದ ಕೈವಲ್ಯ ಕಲ್ಪವಲ್ಲರಿ ವಚನಂಗಳು ಪಂಡಿತರಿಂದ ಪರಿಷ್ಕರಿಸಲ್ಪಟ್ಟು, ಬೆಂಗಳೂರು ತಾಲೂಕು ಕಚೇರಿ ಬಳಿ ಪುಸ್ತಕದ ಅಂಗಡಿ ಕೋವುರ: ಭಾಸ್ಕರಯ್ಯನವರಿಗಾಗಿ, ಬೆಂಗಳೂರು ಡಿಪೋ ಮುದ್ರಾಕ್ಷರ ಶಾಲೆಯಲ್ಲಿ ೧೮೮೪ರಲ್ಲಿ ಮುದ್ರಿಸಲ್ಪಟ್ಟಿತು." ಇದರ ಕೊನೆಯಲ್ಲಿ ಸಂಸ್ಕೃತದ ಮಹಿಮ್ನಾದಿ ಪಂಚಸ್ತವಗಳೂ ಇವೆ. "ಅಂತು ಸ್ಥಲ ೫೯ಕ್ಕೆ ವಚನ ಸಂಪುಟ ೧೭೭೭ಕ್ಕೆ, ವಿರಳ ಪದಂಗಳು ೭೧೦ಕ್ಕೆ ಮಂಗಳಮಸ್ತು" ಎಂದಿದೆ.

ಸು. ಒಂದು ಕಾಲು ಶತಮಾನದ ಹಿಂದೆ ಮುದ್ರಣ ಪ್ರಪಂಚದಲ್ಲಿ ಕನ್ನಡದ ಸ್ಫುಟವಾದ ಅಚ್ಚಿನ ಮೊಳೆಗಳ ಆವಿಷ್ಕಾರವಾಗಿ ತೆಲುಗು ಅಕ್ಷರಗಳ ಪ್ರಾಬಲ್ಯ ಕಡಮೆಯಾದುದೊಂದು ಹೊಸ ಬಗೆಯ ಪ್ರಗತಿ. ಕನ್ನಡದ ಹೊಸ ಮುದ್ರಾಕ್ಷರಗಳಲ್ಲಿ ಅಚ್ಚಾದ ಗ್ರಂಥಗಳಲ್ಲಿ 'ಕೈವಲ್ಯ ಕಲ್ಪವಲ್ಲರಿ'ಯ ಈ ಸಂಸ್ಕರಣ ಮೊದಲನೆಯದಾಗಿರಬೇಕು.

೨. "ಸರ್ಪ್ಪಣ್ಣಸ್ವಾಮಿಗಳಿಂದ ವಿರಚಿತವಾದ 'ಕೈವಲ್ಯ ಕಲ್ಪವಲ್ಲರಿ'ಯನ್ನು ಬೆಂಗಳೂರು ಬುಕ್ ಡಿಪೋ ಏಜಂಟ್ ಬೂ. ಸ್ವಾಮಿನಾಥಯ್ಯರ್ ಸೂರಂ ಶಿವರಾಮಯ್ಯ ಇವರುಗಳಿಗಾಗಿ, ಬೆಂಗಳೂರು ಬಿ. ನಾರಾಯಣಯ್ಯರವರ ಸತ್ಸಂಪ್ರದಾಯ ಕಳಾನಿಧಿ ಮುದ್ರಾಕ್ಷರ ಶಾಲೆಯಲ್ಲಿ ೧೮೯೦ರಲ್ಲಿ ಮುದ್ರಿಸಲ್ಪಟ್ಟಿತು." ಇದರ ಪ್ರಾರಂಭ 'ಜಯ ಶ್ರೀ ಗುರು ಸಿದ್ಧಲಿಂಗ' ಎಂಬ ಶ್ರೀಕಾರದಿಂದ ಆಗಿರುವುದು ವಿಶೇಷ. ಕೊನೆಯಲ್ಲಿ ಮೇಲಿನ ಆವೃತ್ತಿಯಂತೆ ಪಂಚಸ್ತವಗಳೂ ಇವೆ.

ಹಸ್ತಪ್ರತಿಗಳಲ್ಲಿಯಂತೆ ಇಲ್ಲಿ ಪಾಠ ಉದ್ದಕ್ಕೆ ಮುಂದುವರಿದುಕೊಂಡು ಹೋಗುತ್ತದೆ. ಮೊದಲ ಮುದ್ರಣದಲ್ಲಿಯ ಅಶುದ್ಧಿಗಳು ಇಲ್ಲಿ ಇಲ್ಲ.

೩. "ಸಟೀಕ ಕೈವಲ್ಯ ಕಲ್ಪವಲ್ಲರೀ. ಕಲ್ಯಾಣನಗರ ಪ್ರಾಂತದೊಳು ಪುಟ್ಟಿ, ಮಹಾಶಿವಯೋಗಿಯೆನಿಸಿಕೊಂಡು, ಅನಿತರ ಸಾಧಾರಣವಾದ ಯಶಸ್ಸನ್ನು ಸಂಪಾದಿಸಿದ, ಸರ್ಪ್ಪಣ್ಣ ಸ್ವಾಮಿಯೆಂಬ, ಲೋಕರೂಢನಾಮದಿಂದ ಶೋಭಿಸುವ, ಸರ್ಪಭೂಷಣನೆಂಬ ಶಿವಯೋಗಿಯಿಂದ ವಿರಚಿತಮಾದ ಕೈವಲ್ಯ ಕಲ್ಪವಲ್ಲರೀಯೆಂಬ ಮುಮುಕ್ಷು ಜನೋಪಯೋಗಮಾಗಿರುವ ಈ ಗ್ರಂಥಕ್ಕೆ, ಬೆಂಗಳೂರು ದೊಡ್ಡಬೆಲೆ ನಾರಾಯಣ ಶಾಸ್ತ್ರಿಯಿಂದ ಸಟೀಕ ತಾತ್ಪರ್ಯವು ಬರೆಯಲ್ಪಟ್ಟು, ಇದರ ಹಕ್ಕನ್ನು, ಎಸ್. ಕೋನೇರಿ ಶೆಟ್ಟಿಯವರಿಗೆ ಕೊಡಲ್ಪಟ್ಟಿದೆ.

ಬಳ್ಳಾರಿ-ಕರ್ನಾಟಕ ಬುಕ್ ಡಿಪೋ ಏಜಂಟ್ ಶಿವಲಿಂಗಂ ಶೆಟ್ರುವರಗಳ ಸ್ವಕೀಯ ಗ್ರಂಥರತ್ನಾಕರ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿಸಲ್ಪಟ್ಟಿತು. MADRAS ೧೮೯೧ ಸಂ. all right reserved."

ಈ ಅಚ್ಚಿನ ಪ್ರತಿಯ ಪ್ರಕಾಶಕ ಎಸ್. ಶಿವಲಿಂಗ ಶೆಟ್ಟರು ತಮ್ಮನ್ನು 'ಸಾಧುವಿಧೇಯ' ಎಂದು ಕಿಂಕರಭಾವದಿಂದ ವಿಶೇಷಿಸಿಕೊಂಡು, ಈ ಕೆಳಗಿನಂತೆ ಬರೆದ ಪ್ರಕಾಶಕನ ನುಡಿ ಹೊಸಗನ್ನಡ ಗದ್ಯದ ಬೆಳವಣಿಗೆಯ ಒಂದು ವಿಶಿಷ್ಟ ನಮೂನೆಯಾಗಿದೆ:

"ಪರಮ ಪುರುಷಾರ್ಥವಲ್ಲದ ಕಾರಣವೇ ಇಹಪರ ಸುಖಗಳನ್ನು ಅಲ್ಪವೆಂದು ವಿವೇಕದಿಂದರಿತು ಚಿದಾನಂದ ಘನಸ್ವರೂಪಾನಂದಾನುಭವಾಭಿಲಾಷಿಗಳಾದ, ಎಲೈ ಆಸ್ತಿಕ ಶಿರೋಮಣಿಗಳಿರಾ! "ಸಜ್ಜನರ ಸಂಪದವು ಪರೋಪಕಾರಕ್ಕಾಗಿಯೆ"ಯೆಂಬ ಶಾಸ್ತ್ರಲೋಕಾನುಭವಗಳನ್ನು ಪ್ರಾಮಾಣಿಕವಾಗಿ ಯೆಣಿಸಿದವರಾದ ಕಾರಣವೇ ನಿಖಿಲ ನಿಗಮಾಗಮ ಸಾರ ಸರ್ವಸ್ವ ಪ್ರಜ್ಞೆಯು, ತದನುಷ್ಠಾನವು ಸಹ ಅನಿತರ ಸಾಧಾರಣವಾಗಿದ್ದಾಗ್ಯೂ ಕಲಿ ಮಲ ಮಲಿನರಾಗಿ ಸಂಸಾರ ಸಾಗರದೊಳು ಮುಳುಗಿ ಹೋಗುತ್ತಿರುವ ಲೋಕವನ್ನುದ್ಧಾರ ಮಾಡಲೋಸುಗ ಕಲ್ಯಾಣ ನಗರ ಪ್ರಾಂತದೊಳು ಅವತರಿಸಿದ್ದ ಸರ್ಪಭೂಷಣನೆಂಬ ಮಹಾ ಶಿವಯೋಗಿಯು ಸ್ವಾನುಭವಾನುಸಾರವಾಗಿ, ಕೈವಲ್ಯ ಕಲ್ಪವಲ್ಲರೀ ಯೆಂಬೀ ಸರ್ವಮಾನ್ಯವಾದ ಮೋಕ್ಷಗ್ರಂಥವನ್ನು ರಚಿಸಿದರು. ಇದು ರಚಿಸಲ್ಪಟ್ಟು ಬಹಳ ದಿವಸಗಳಾಗಿದ್ದರೂ ಪಂಡಿತೈಕ ಸಾಧ್ಯವಾದ ಈ ಗ್ರಂಥಕ್ಕೆ ಇದುವರೆಗೂ ಯಾರೂ ಟೀಕಾತಾತ್ಪರ್ಯ ಮೊದಲಾದವುಗಳಿಂದ ದ್ರಾಕ್ಷಿಯಂತೆ ಸರ್ವಾನುಭವ ಸಾಧಾರಣವಾಗುವಂತೆ ಮಾಡಲಿಲ್ಲವು. ಈಗ ಬೆಂಗಳೂರು ಡಿ. ನಾರಾಯಣ ಶಾಸ್ತ್ರಿಗಳಿಂದ ಯಥಾಮತಿ ಶೋಧಿಸಿ ಬರದು ಇರುವ ತಾತ್ಪರ್ಯವನ್ನು ಗುಣೈಕದರ್ಶಿಗಳಾದ ಸಜ್ಜನರು ಆಮೂಲಾಗ್ರವಾಗಿ ಅವಲೋಕಿಸಿ ನಿಜವಾಗಿ ಮನನ ಮಾಡಲು ಗರ್ಭದರಿದ್ರನ ಕಂಠದಲ್ಲಿ ಹಠಾತ್ತಾಗಿ ಲಭಿಸಿದ ರತ್ನಹಾರದಂತೆ ಮುಕ್ತಿಯು ಅಭಿವ್ಯಕ್ತವಾಗುವದು. . . . . . ರತ್ನವ್ಯಾಪಾರ ಮಾಡುವರ ಸಂಘದಲ್ಲಿ ಗುರಿಗಂಜಿ ವ್ಯಾಪಾರಿಯಂತೆನ್ನ ಹಾಸ್ಯಾಸ್ಪದನನ್ನಾಗಿ ಮಾಡದೆ ಗುಣವನ್ನು ಮಾತ್ರ ಸಂತೋಷಿಸಬೇಕೆಂದು ಕೋರುತ್ತೇನೆ."

ಟೀಕಾಕರ್ತ ದೊಡ್ಡಬೆಲೆ ನಾರಾಯಣ ಶಾಸ್ತ್ರಿಗಳೇ ಇದನ್ನು ಬರೆದಿರಬೇಕು. ಟೀಕೆಯ ಪ್ರಾರಂಭದಲ್ಲಿಯ-

ಶುಭ್ರಾಂಶುಕಲಿತೋತ್ತಂಸಂ ಶುದ್ಧಸ್ಫಟಿಕ ವಿಗ್ರಹಂ।
ಹೈಮವತ್ಯಾಸಮಾಶ್ಲಿಷ್ಟಂ ಶಂಕರಂ ನೌಮಿ ಶಂಕರಂ॥೧॥

ಕೈವಲ್ಯಕಲನಾಕಲ್ಪವಲ್ಲರ್ಯಾಸ್ಸುಫಲಾಯಿತಂ।
ನಾರಾಯಣ ಸುಧೀಃ ಟೀಕಾಂ ತನುತೇ ದೇಶಭಾಷಯಾ॥೨॥

ಈ ಅನುಷ್ಟುಪ್ ಶ್ಲೋಕಗಳ ಅನಂತರದ ಶಿವಕಾರುಣ್ಯ ಪ್ರಾರ್ಥನಾಸ್ಥಳದ ಈ ಪೀಠಿಕೆಯೂ ಸಂಸ್ಕೃತನಿಷ್ಠ.

"ಸರ್ಪಭೂಷಣನೆಂಬೊಬ್ಬ ಶ್ರೀ ಶಿವಯೋಗಿವರಿಷ್ಠನು ಈ ಪಾಪಭೂಯಿಷ್ಠಮಾದ ಕಲಿಕಾಲದೊಳು ದುರ್ಮಾರ್ಗವೆಂಬ ಅಗಾಧವಾದ ಸಮುದ್ರದಲ್ಲಿ ಮುಳುಗಿ ಹೋಗುತ್ತಿರುವ ಪಾಪಿ ಲೋಕವನ್ನುದ್ಧಾರಮಾಡಲೋಸುಗ ನಿಖಿಲ ತತ್ವಾರ್ಥ ಗುಂಭಿತಮಾಗಿರುವ ಶಿವಕಾರುಣ್ಯ ಪ್ರಾರ್ಥನಾ-ಜೀವಸಂಬೋಧನ-ನೀತಿಕ್ರಿಯಾಚರ್ಯಾಪ್ರತಿಪಾದನ-ಯೋಗ ಪ್ರತಿಪಾದನ-ಜ್ಞಾನಪ್ರತಿಪಾದನ - ಎಂಬ ಐದು ಗೊಂಚಲುಗಳಿಂದ ಕೂಡಿದ ಕೈವಲ್ಯ ಕಲ್ಪವಲ್ಲರೀಯೆಂಬ ಸರ್ವಶ್ಲಾಘ್ಯಮಾದ ಗ್ರಂಥವನ್ನು ರಚಿಸಲಾರಂಭಿಸಿ ಆದಿಯೊಳು ಶಿವಕಾರುಣ್ಯ ಪ್ರಾರ್ಥನೆಯನ್ನು (೨೭) ಪದಗಳಿಂದ ವಿವರಿಸುತ್ತಾನೆ."

ಆದರೆ ಮುಂದಿನ ಪದಗಳ ಮಾಲಾಟೀಕೆಯಲ್ಲಿಯ ಕನ್ನಡ ಸರಳ ಮತ್ತು ಸಹಜವಾಗಿರುವುದು ದರ್ಶನೀಯ:

ಶ್ರೀ ಗುರುವರೇಣ್ಯ ಭವದಂಘ್ರಿ ಪಂಕೇರುಹ ಗ।
ಳೀಗಳೆನ್ನದೆಗೊಳದೊಳಗಲದಿರುತಿರ್ಕೆ॥

ಎಂಬ ಪಲ್ಲವಿಯ ಟೀಕೆಯಿದು-

"ಹೃದಯದೊಳಿರುವ ಸಮಸ್ತವಾದ ಅಜ್ಞಾನವೆಂಬ ಅಂಧಕಾರವನ್ನು ನಿರುಪಮ ತತ್ವಾರ್ಥದುಪದೇಶದಿಂದ ನಿವಾರಣೆ ಮಾಡುವವನೆಂಬ ನಿಜವಾದ ಅರ್ಥವುಳ್ಳ, ಎಲೈ-ಗುರುವೆ! ನಿನ್ನಯ ಚರಣ ಕಮಲಗಳೆಂಬ ದಿವ್ಯವಾದ ತಾವರೆಗಳು ಸರ್ವದಾ ನನ್ನ ಮನಸ್ಸೆಂಬ ಕೊಳದೊಳು ತಪ್ಪದೆ ಇರಲಿ."

೪. ಅದೇ ಸಟೀಕು 'ಕೈವಲ್ಯ ಕಲ್ಪವಲ್ಲರಿ' ಮರುಮುದ್ರಣಗೊಂಡಿದೆ. ಪದಗಳು ಮೂಲದಲ್ಲಿಯಷ್ಟೇ ಇವೆ.

೫. 'ಕೈವಲ್ಯ ಕಲ್ಪವಲ್ಲರಿ'ಯನ್ನು ೧೯೪೪ರಲ್ಲಿ ಪರಿಶುದ್ಧ ಹಾಗೂ ಶಾಸ್ತ್ರೀಯವಾಗಿ ಅಚ್ಚು ಮಾಡಿಸಿದ ಕೀರ್ತಿ ಬೆಂಗಳೂರ ಶ್ರೀ ಸರ್ಪಭೂಷಣ ಮಠಾಧ್ಯಕ್ಷ 'ಅಭಿನವ ಅಲ್ಲಮ' ಲಿಂ. ಶ್ರೀ ಮಹಾದೇವಸ್ವಾಮಿಗಳವರಿಗೆ ಸಲ್ಲಬೇಕು. ಶ್ರೀಗಳವರ ಅಪೇಕ್ಷೆಯಂತೆ ಅದನ್ನು ಪ್ರಾ. ಶಿ.ಶಿ. ಬಸವನಾಳ ಅವರು ಆದರ್ಶವಾಗಿ ಸಂಪಾದಿಸಿದರು. ಅವರು ಕನ್ನಡ ಸಾಹಿತ್ಯಪರಂಪರೆಯ ದೃಷ್ಟಿಯಿಂದ ಬರೆದ ಪ್ರಸ್ತಾವನೆ ಕೃತಿಯ ವಿಮರ್ಶೆಯೇ ಆಗಿದೆ.

'ಕೈವಲ್ಯ ಪದ್ಧತಿ' ಮತ್ತು 'ಕೈವಲ್ಯ ವಲ್ಲರಿ' ಇವೆರಡರ ವಿಷಯಗಳ ಪರಿವಿಡಿ ಮತ್ತು ವಿವೇಚನಾ ಪದ್ಧತಿಯಲ್ಲಿ ಹೆಚ್ಚು ಸಾಮಿಪ್ಯವಿರುವುದನ್ನು ಗುರುತಿಸಿ, ರಾಗ-ಛಂದಗಳ ಪ್ರಯೋಗದ ಬಗೆಗೆ ಸೂಚ್ಯವಾಗಿ ವಿವೇಚಿಸಿರುವರು. ಅವರ ಅಭ್ಯಾಸಪೂರ್ಣ ಪ್ರಸ್ತಾವನೆ ನಮಗೆ ಮಾರ್ಗದರ್ಶಿಯಾಗಿದೆ. ಅವರ ಈ ಸಂಪಾದಿತ ಕೃತಿ ಹಿಂದಿನ ಎಲ್ಲ ಮುದ್ರಿತ ಪ್ರತಿಗಳಿಗಿಂತ ತೀರ ಭಿನ್ನವಾದ ಪರಿಷ್ಕೃತ ರೀತಿಯಲ್ಲಿ ಪ್ರಕಾಶಗೊಂಡಿತು.

"ಕೈವಲ್ಯ ಕಲ್ಪವಲ್ಲರಿಯ ಹಲವು ಮುದ್ರಿತ ಪ್ರತಿಗಳು ಅಲ್ಲಲ್ಲಿ ಆಗಾಗ ಮುದ್ರಿತವಾಗಿ ಪ್ರಸಾರವಾಗಿವೆ. ಕೆಲವು ಮುದ್ರಿತ ಪ್ರತಿಗಳಿಗೆ ಟೀಕೆಯೂ ಇದೆ. ಆದರೆ ಇವು ವಿಷಯದ ಕಡೆಗೆ ಲಕ್ಷ್ಯವಿಟ್ಟು ಮುದ್ರಿತವಾದುದಾಗಿವೆ. ಪದಪಾದಗಳನ್ನು ವಿಂಗಡಿಸದೆ, ಅಕ್ಷರ ಲಾಲಿತ್ಯವನ್ನು ತಿದ್ದದೇ ಹಾಗೆ ಮುದ್ರಿತವಾದುದರಿಂದ ಈ ಗ್ರಂಥದ ಸಾಹಿತ್ಯ ಲಕ್ಷಣಗಳು ತೋರ್ಪಡಲು ದುಸ್ಸಾಧ್ಯವಾಗಿದೆ. ಆದುದರಿಂದ ಪ್ರಸ್ತುತ ಮುದ್ರಣವನ್ನು ಆದಷ್ಟು ಶುದ್ಧವಾಗುವಂತೆ, ಓದಲು ಸುಖಕರವಾಗುವಂತೆ ಮಾಡಲು ಯತ್ನಿಸಿದೆ. ಹಾಡುಗಳ ಅಕಾರಾದಿಯನ್ನು ಜೋಡಿಸಲಾಗಿದೆ. ಕಠಿನ ಶಬ್ದಗಳ ಅರ್ಥವನ್ನು ಕೊಡುವ ಬಯಕೆ ಇದ್ದುದು ಈಗ ಸಾಧಿಸದೇ ಹೋದುದಕ್ಕಾಗಿ ವಿಷಾದಿಸುತ್ತೇನೆ."

ಎನ್ನುವ ಈ ಪ್ರಾಂಜಲ ನುಡಿಯಲ್ಲಿ ಸೌಜನ್ಯ ಮೂಡಿದೆ.

೭. 'ಕೈವಲ್ಯ ಕಲ್ಪವಲ್ಲರಿ'ಯ 'ಭಾವಾರ್ಥ ಬೋಧಿನಿ' ಟೀಕೆ ಸಹಿತ ಧಾರವಾಡದ ಶ್ರೀ ಮುರುಘಾಮಠದ ಶ್ರೀ ಬಾಲಲೀಲಾ ಮಹಾಂತಶಿವಯೋಗೀಶ್ವರ ಗ್ರಂಥಮಾಲೆಯ ೭೩ನೆಯ ಪುಷ್ಪವಾಗಿ ೧೯೭೩ರಲ್ಲಿ ಪ್ರಕಟಗೊಂಡಿತು. ಸಂಪಾದಕ ಹಾಗೂ ಟೀಕಾಕರ್ತ ವೈ. ನಾಗೇಶ ಶಾಸ್ತ್ರಿಗಳವರು ಎಸ್.ಎಸ್. ಬಸವನಾಳರು ಸಂಸ್ಕರಿಸಿದ ಮೂಲವನ್ನೇ ಆಧರಿಸಿ ಅದಕ್ಕೆ ಸರಳಗನ್ನಡ ಅರ್ಥ ಬರೆದರು.

ಪ್ರಸ್ತಾವನೆಯಲ್ಲಿ ಪ್ರತಿ ಸ್ಥಲದ ಸಾರಸಂಗ್ರಹವಿದೆ. ಕೊನೆಯ ಮೂರು ಪರಿಶಿಷ್ಟಗಳಲ್ಲಿ ಕಠಿನ ಶಬ್ದಕೋಶ, ಸಂಜ್ಞಾರ್ಥಸೂಚಿ ಮತ್ತು ಸಂದರ್ಭದ ಪೂರ್ವ ಕಥೆಗಳನ್ನೂ ಕೊಡಲಾಗಿದೆ. ಇದು ಡೆಮ್ಮಿ ಅಷ್ಟ ಪತ್ರದ ಆಕಾರದಲ್ಲಿದೆ.

೭. ಮೇಲಿನ ಎರಡೂ ಸಂಸ್ಕರಣಗಳ ಪ್ರತಿಗಳು ಮುಗಿದ ವಿಷಯ ತಿಳಿದು ಭಕ್ತರ ಬೇಡಿಕೆಯಂತೆ ಶ್ರೀ ಮಹಾದೇವಸ್ವಾಮಿಗಳ ತರುವಾಯ ಶ್ರೀ ಸರ್ಪಭೂಷಣ ಮಠದ ಅಧ್ಯಕ್ಷರಾದ 'ವೇದಾಂತಾಚಾರ್ಯ' ಶ್ರೀ ಶಿವಕುಮಾರಸ್ವಾಮಿಗಳು 'ಕೈವಲ್ಯ ಕಲ್ಪವಲ್ಲರಿ'ಯ ಮೂರನೆಯ ಮುದ್ರಣಕ್ಕೆ ಕಾರಣಕರ್ತರಾದರು.

ಈ ಸಂಸ್ಕರಣ ಪಂ. ನಾಗಭೂಷಣ ಶಾಸ್ತ್ರಿಗಳ ಸಂಪಾದಕತ್ವದಲ್ಲಿ ಮೂಲ ಮಾತ್ರವಾಗಿ ಕಿರೀಟ ಅಷ್ಟಪತ್ರದಲ್ಲಿ ಅಚ್ಚಾಯಿತು. ಮೂಲದಲ್ಲಿಯ ಪ್ರಾ. ಬಸವನಾಳರ ಪ್ರಸ್ತಾವನೆಯೊಂದಿಗೆ ಕೊನೆಯಲ್ಲಿ ಪದಗಳ ಅಕಾರಾದಿ ಮತ್ತು ಶಬ್ದಾರ್ಥಕೋಶವನ್ನು ಕೊಡಲಾಗಿದೆ.

## ಮುಪ್ಪಿನ ಷಡಕ್ಷರಿಯ 'ಕೈವಲ್ಯಪದಗಳು'

ಮುಪ್ಪಿನ ಷಡಕ್ಷರಿಯ ಹೆಸರು, ಕಾಲ ಮತ್ತು ಗುರುವಿನ ಬಗೆಗೆ ವಿವಾದಗಳಿವೆ. ಕವಿಚರಿತೆಕಾರರು ಸು. ೧೭೫೦ರಲ್ಲಿದ್ದ ಇವನನ್ನು ವಿರಕ್ತ ಷಡಕ್ಷರಯ್ಯ ಎಂದು ಉಲ್ಲೇಖಿಸಿ, ಅವನ ಸ್ವರವತನ ಕೃತಿ 'ಕೈವಲ್ಯ ಪದ್ಧತಿ' ಎಂದಿರುವವರಲ್ಲದೆ ಅವನ ಹೆಸರು 'ಯರಗಂಬಳಿಯ ಸಿದ್ಧಲಿಂಗ' ಎಂದು ಅಭಿಪ್ರಾಯ ತಾಳಿರುವರು.

'ಶಿವಷಡಕ್ಷರಿಲಿಂಗ' ಅಂಕಿತದ ಇವನ ಸ್ವರವಚನ ಮತ್ತು ನಿಜಗುಣರ ಕೈವಲ್ಯಪದ್ಧತಿಯ ಹಾಡುಗಳಲ್ಲಿ ವಿಷಯಗಳ ನಿರೂಪಣೆ ಮೊದಲಾದವುಗಳ ಬಗೆಯಲ್ಲಿ ಬಹಳ ಸಾಮ್ಯವಿದೆ. ಕಾರಣ, ಇವರಿಬ್ಬರೂ ಸಮಕಾಲೀನರೆಂಬ ವಾದವೂ ಇದೆ.

ಮುಪ್ಪಿನ ಷಡಕ್ಷರಿಯ ಸ್ವರವಚನಗಳು ಬಹಳ ಲೋಕಪ್ರಿಯವಾಗಿ ಉಳಿದು ಬಂದಿವೆ; ಅನೇಕ ಮುದ್ರಣಗಳನ್ನೂ ಕಂಡಿವೆ.

೧. 'ಷಡಕ್ಷರಯ್ಯ ವಚನ' ೧೯೬೩ರಲ್ಲಿ ಬಳ್ಳಾರಿ ಕರ್ನಾಟಕ ಬುಕ್ ಡಿಪೊ ಏಜಂಟ್ ಎಸ್. ಶಿವಲಿಂಗ ಶೆಟ್ಟರ ಗ್ರಂಥರತ್ನಾಕರ ಮುದ್ರಾಕ್ಷರ ಶಾಲೆಯಲ್ಲಿ, ತಿರುಮಲೆ ಶ್ರೀನಿವಾಸಾಚಾರ್ಯರ 'ತಾತ್ಪರ್ಯ ನಿರ್ಣಯ'ವೆಂಬ ಟೀಕೆಯೊಂದಿಗೆ ಪ್ರಕಟವಾಯಿತು.

ಟೀಕಾಕರ್ತರು ಕವಿ ಷಡಕ್ಷರಿ 'ಶ್ರೀಮತ್ ಸಚ್ಚಿದಾನಂದ ಚಿಕ್ಕವೀರ ಗುರುವರ್ಯ ಕರಕಮಲ ಸಂಜಾತ' ಎಂದಿರುವುದನ್ನು ಡಾ. ಜ.ಚ.ನಿ. ನಿರಾಧಾರವೆಂದಿರುವರು[೯]

೨. 'ಸಟೀಕಾ ಷಡಕ್ಷರಿಯ ವಚನಗಳು' ಬೆಂಗಳೂರಲ್ಲಿ ಅಚ್ಚಾಗಿದೆ.[೧೦]

೩. 'ಸಂಬೋಧ ಸಾರ' ಎಂಬ ಅಂಕಿತದಲ್ಲಿ ಮುಪ್ಪಿನ ಷಡಕ್ಷರಿ ಸ್ವಾಮಿಗಳ ಹಾಡುಗಳನ್ನು ಶರಣ ಹರ್ಡೇಕರ ಮಂಜಪ್ಪನವರು 'ಕಾವ್ಯಾನಂದ'ರ ಸಹಕಾರದಿಂದ ಪರಿಶುದ್ಧವಾಗಿ ಸಂಗ್ರಹಿಸಿ, ಆಲಮಟ್ಟಿಯ ವೀರಶೈವ ವಿದ್ಯಾಲಯದಿಂದ ಪ್ರಕಟಿಸಿದರು. ಇದುವರೆಗೂ ಕನ್ನಡ ಪುಸ್ತಕಗಳು ಇಷ್ಟು ಅಂದವಾದ ಮುದ್ರಣವನ್ನು ಕಂಡೇ ಇರಲಿಲ್ಲ-ವೇನೋ! ಅಕ್ಷರ ಜೋಡಣೆ-ಕಾಗದ-ಮುದ್ರಣ ಎಲ್ಲವೂ ಅಚ್ಚುಕಟ್ಟಿನಲ್ಲಿ ಉಚ್ಚಮಟ್ಟದವು. ಇದು ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಹಬ್ಬದ ದಿನ (ದಿ. ೩೦.೩.೧೯೪೦) ಬಿಡುಗಡೆಯಾದುದೊಂದು ಅಪೂರ್ವ ಸನ್ನಿವೇಶ.

'ಕಾವ್ಯಾನಂದ'ರು ಮುನ್ನುಡಿಯಲ್ಲಿ ಹಾಡುಗಬ್ಬಗಳ ಉಗಮ-ವಾಙ್ಮಯ ವಿಸ್ತಾರದ ಹಿನ್ನೆಲೆಯಲ್ಲಿ ಅನುಭಾವಿ ಕವಿ ಮುಪ್ಪಿನ ಷಡಕ್ಷರಿಯ ಮೂರ್ತ ಸ್ವರೂಪವನ್ನು ಚಿತ್ರಿಸಿ ಅವನ ಹಾಡುಗಳ ಶೈಲಿಯ ಸೊಬಗು, ಭಾವದ ಬೆಡಗು ಮತ್ತು ಅವುಗಳ ಮೇಲೆ ಶಿವಶರಣರ ವಚನಗಳ ಪ್ರಭಾವಮುದ್ರೆ ಮುಂತಾಗಿ ವಿಮರ್ಶೆ ಮಾಡಿರುವುದು ನವೀನವಾಗಿದೆ. ಬೆಂಗಳೂರು ಸರ್ಪಭೂಷಣ ಮಠದಲ್ಲಿ ಕಾವ್ಯಸಾಧನೆ ಮಾಡುತ್ತಿದ್ದ ಅಡ್ನೂರ ಶ್ರೀ ಚಂದ್ರಶೇಖರ ದೇವರು (ಈಗ ಡಾ. ಜ.ಚ.ನಿ) ಪ್ರತಿ ಹಾಡಿನ ಕಡೆಗೆ ಅದರ ಭಾವ-ಭಾಷೆಗೆ ಸಂವಾದಿಯಾದ ಬಸವಣ್ಣನವರ ವಚನವನ್ನು ಜೋಡಿಸಿರುವುದು[೧೧] ಅರ್ಥಪೂರ್ಣವಾಗಿದೆ. ಪ್ರಾರಂಭದಲ್ಲಿ ಕಠಿಣ ಶಬ್ದಗಳ ಕೋಶವಿದೆ. ಆಕಾರ ಕಿರೀಟ ಅಷ್ಟಪತ್ರ, ೧೫೦ ಪುಟಗಳ ಕ್ರಯ ೧೨ ಆಣೆ!

೪. 'ಸುಬೋಧಸಾರ'ದ ಐದು ಮರುಮುದ್ರಣಗಳು ಧಾರವಾಡದ ಶ್ರೀಮುರುಘಾಮಠದ ವತಿಯಿಂದ ಆದುದೊಂದು ಮೇಲ್ಮೆ. ಮೂರನೆಯ ಮುದ್ರಣದ 'ಹಿನ್ನುಡಿ'ಯಲ್ಲಿ ಕಾವ್ಯಾನಂದರ ಹೃದಯದ ಹಾರೈಕೆ ಮನಮುಟ್ಟುವಂತಿದೆ. ಕವಿ ಮುಪ್ಪಿನ ಷಡಕ್ಷರಿ ದೇವನ ಬಗೆಗೆ ಬರೆದಿರುವ ಬಿ.ಸಿ. ಜವಳಿ ಅವರ ಮಾತುಗಳು ಮನನೀಯವಾಗಿವೆ.

೫. ಮುಪ್ಪಿನ ಷಡಕ್ಷರಿಗಳ ಕೈವಲ್ಯದ ಪದ (ಸುಬೋಧಸಾರ) ಸುತ್ತೂರು ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯ ೨೪ನೆಯ ಕುಸುಮವಾಗಿ ಹಾಗೂ ಶ್ರೀ ಶಿವರಾತ್ರೀಶ್ವರ ಧಾರ್ಮಿಕ ದತ್ತಿಯ ವತಿಯಿಂದ ಎರಡನೆಯದಾಗಿ ೧೯೮೭ರಲ್ಲಿ ಪ್ರಕಾಶಿತವಾಗಿದೆ.

---

೯. ಮುಪ್ಪಿನಾರ್ಯರ ಭಾವ ಪಾತ್ರಗಳು, ಒಲುಮೆ-ಪು vi, ೨ನೇ ಮುದ್ರಣ, ಪ. ೨;

೧೦. ಮೈಸೂರು ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆ (ಈಗ ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ) ಯಲ್ಲಿಯ ಅಚ್ಚಾದ ಕನ್ನಡ ಗ್ರಂಥಗಳ ಸೂಚಿ: ಕ್ರ.ಸಂಖ್ಯೆ ೧೫೭, ಗ್ರಂ.ನಂಬರು ಕೆ. ೩೭೫

೧೧. ಸುಬೋಧಸಾರ (ಶ್ರೀ ಹ. ಮಂಜಪ್ಪನವರ 'ಒಂದು ಮಾತು', ಪು. ೧೩)

ಇದನ್ನು ಪರಮಪೂಜ್ಯ ಲಿಂ. ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಅಭ್ಯಾಸಪೂರ್ಣವಾಗಿ ಸಂಪಾದಿಸಿರುವರು. ಪ್ರಸ್ತಾವನೆಯಲ್ಲಿಯ ಕವಿಯ ವ್ಯಕ್ತಿಚಿತ್ರ ಮತ್ತು ಕೃತಿ ವಿಮರ್ಶೆ ಸಮಗ್ರವಾಗಿದೆ. ಗ್ರಂಥ ಸಂಸ್ಕರಣಕ್ಕೆ ಪ್ರಾಚೀನ ಹಸ್ತಪ್ರತಿ ಮತ್ತು ಮುದ್ರಿತ ಪುಸ್ತಕಗಳನ್ನೂ ಬಳಸಿಕೊಳ್ಳಲಾಗಿದೆ. ಅಚ್ಚಿನ ಹಳೆಯ ಪ್ರತಿಗಳಲ್ಲಿ ಬಳ್ಳಾರಿಯ ಶಿವಲಿಂಗ ಶೆಟ್ಟರು ೧೯೦೨ರಲ್ಲಿ ಪ್ರಕಟಿಸಿದುದೂ ಒಂದಾಗಿದೆ. ಬಹಳ ಪರಿಶುದ್ಧ ಹಾಗೂ ಅಂದವಾಗಿ ಮುದ್ರಣಗೊಂಡ ಸು. ೨೪೫ ಪುಟಗಳ ಬೆಲೆ ಹತ್ತು ರೂಪಾಯಿಗಳು.

## ಮೈಲಾರ ಬಸವಲಿಂಗ ಶರಣರ 'ಶಿವಾನುಭವ ದರ್ಪಣ'

ಎರಡುನೂರು ವರ್ಷಗಳ ಹಿಂದೆ ಮೈಲಾರದ ಬಸವಲಿಂಗ ಶಿವಶರಣರು ಹರಪನಹಳ್ಳಿ ನಾಯಕರ ಕಾಲದಲ್ಲಿ ಹರದನ ಕಾಯಕದಲ್ಲಿದ್ದವರು. ಅವರೊಬ್ಬ ಅನುಭಾವಿ ಶರಣ ಕವಿ. ಅವರ ಸ್ವರವಚನಗಳಲ್ಲಿ ವೀರಶೈವ ಸಿದ್ಧಾಂತದ ನಿರೂಪಣೆಯಲ್ಲದೆ ಸಾಮಾಜಿಕ ಮೌಢ್ಯಾಚರಣೆಯ ವಿಡಂಬನೆಯೂ ಇದೆ. ಮುಖಿಸ್ಥ ಮತ್ತು ಅಬದ್ಧವಾಗಿ ಲಿಪಿಗೊಂಡ ಅವುಗಳನ್ನು ಮೊಟ್ಟಮೊದಲಿಗೆ ಸಂಪಾದಿಸಿ ಪ್ರಕಟಿಸಿದ ಪ್ರಾಶಸ್ತ್ಯ 'ವಚನ ಪಿತಾಮಹ' ಹಳಕಟ್ಟಿಯವರಿಗೆ ಸಲ್ಲುತ್ತದೆ.

೧. ವಿಜಾಪುರದ ಶಿವಾನುಭವ ಗ್ರಂಥಮಾಲೆಯ ೧೯ನೆಯ ಹೂವಾಗಿ 'ಮೈಲಾರ ಬಸಪ್ಪನವರ ಶಿವಾನುಭವ ದರ್ಪಣ' ೧೯೨೯ರಲ್ಲಿ ಬೆಳಗಿತು.

ಇದರಲ್ಲಿ ೫೮ ಹಾಡುಗಳು, ಕಡೆಯಲ್ಲಿ ಮಲ್ಲಿಕಾ ಮಾಲಾ ಮತ್ತು ಸುಲಭನಾಮ ವೃತ್ತಗಳು ಸಂಚಯಗೊಂಡಿವೆ. ಹಾಡುಗಳಿಗೆ ರಾಗಗಳ ಸಂಯೋಜನೆಯಿಲ್ಲ. ಸಂಪಾದಕ-ಹಳಕಟ್ಟಿಯವರು ಕಿರುಪ್ರಸ್ತಾವನೆಯಲ್ಲಿ "ಮೈಲಾರ ಬಸಪ್ಪನವರ ಪದ್ಯಗಳು ... ಬಸವಾದಿ ಪ್ರಮಥರ ತತ್ವಗಳನ್ನೇ ಬಹುವಿಶದವಾಗಿ ಸ್ಪಷ್ಟೀಕರಿಸುತ್ತವೆ. ಈ ದೃಷ್ಟಿಯಿಂದ ಈ ಗ್ರಂಥದ ಮಹತ್ವವು ಬಹಳ ಇರುತ್ತದೆ. ಈ ಕವಿಯ ರಚನಾಶೈಲಿಯಾದರೂ ಬಹು ಸುಬೋಧವೂ ಲಲಿತವೂ ಆಗಿರುತ್ತದೆ." ಎಂದು ಕೃತಿಯ ಪರಿಚಯ ಚುಟುಕಾಗಿ ಹೇಳಿರುವರು. ೧೯೩೦ರಲ್ಲಿ ಇದು ಎರಡನೆಯ ಮುದ್ರಣವನ್ನೂ ಕಂಡಿತು. ಕಿರೀಟ ಅಷ್ಟಪತ್ರದಲ್ಲಿ ಸು. ೬೦ಪುಟಗಳು.

೨. ಮೈಲಾರದ ಶ್ರೀ ಬಸವಲಿಂಗ ಶರಣರ 'ಗುರುಕರಣತ್ರಿವಿಧಿ' ಮುಂ. ಸಮಗ್ರ ಕೃತಿಗಳ ಸಂಪುಟ ಧಾರವಾಡದ ಶ್ರೀ ಮುರುಘಾಮಠದ ಶ್ರೀ ಬಾಲಲೀಲಾ ಮಹಾಂತ 'ಶಿವಯೋಗೀಶ್ವರ ಗ್ರಂಥಮಾಲೆಯ ೪ನೆಯ ಕುಸುಮವಾಗಿ ೧೯೪೫ರಲ್ಲಿ ಪ್ರಕಾಶಗೊಂಡಿತು. ಪ್ರಾ.ಶಿ.ಶಿ.ಬಸವನಾಳ ಅವರು ಇದನ್ನು ಬಹಳ ಪರಿಶುದ್ಧವಾಗಿ ಪರಿಷ್ಕರಿಸಿ ಅಧ್ಯಯನಪೂರ್ಣ ಪ್ರಸ್ತಾವನೆಯನ್ನೂ ಬರೆದರು.

ಶರಣರ ಜೀವನ ಮತ್ತು ಕಾಲ ಕುರಿತ ಕೆಲವು ಐತಿಹಾಸಿಕ ಸಂಗತಿಗಳನ್ನು ಶ್ರೀ ಮಲ್ಲಾಬಾದಿ ವೀರಭದ್ರಪ್ಪ ಸಂಗ್ರಹಿಸಿರುವರು. ಕಡೆಯಲ್ಲಿ ಶಬ್ದಕೋಶವೂ ಇದೆ. ಡೆಮ್ಮಿಯಾಕಾರದ ಸು. ೨೮೦ ಪುಟಗಳ ಬೆಲೆ ಕೇವಲ ಎರಡು ರೂಪಾಯಿ ಎಂಟಾಣೆ; ೧೯೫೫ರಲ್ಲಿ ದ್ವಿತೀಯ ಆವೃತ್ತಿ ಅಚ್ಚಾಯಿತು.

ಈ ಸಂಸ್ಕರಣದಲ್ಲಿ ಹಾಡುಗಳಿಗೆ ರಾಗಗಳ ಸಂಯೋಜನೆ ಇದೆ. ಹಳಕಟ್ಟಿ ಅವರ ಆವೃತ್ತಿಯಲ್ಲಿಗಿಂತ ಹತ್ತು ಹಾಡುಗಳೂ ಹೆಚ್ಚಾಗಿವೆ. ವಿಷಯವಾರು ಸ್ವರವಚನ ವರ್ಗೀಕರಣವೂ ವಿಶಿಷ್ಟವಾಗಿದೆ. ಈ ಎರಡೂ ಸಂಪಾದಿತ ಕೃತಿಗಳ ವಚನಗಳಲ್ಲಿ ಪಾಠಾಂತರಗಳೂ ಕಂಡುಬರುತ್ತವೆ. ಸಂಪಾದಕರು ಹಳಕಟ್ಟಿಯವರ ಪ್ರತಿಯನ್ನು ಪಾಠಾಂತರ ದೃಷ್ಟಿಯಿಂದ ಬಳಸಿಕೊಂಡಿದ್ದರೆ ಸಂಶೋಧನೆಯ ದೃಷ್ಟಿಯಿಂದ ಹೆಚ್ಚು ಮೌಲ್ಯ ಬರುತ್ತಿತ್ತು.

ಹೀಗೆ ನಿಜಗುಣ ಶಿವಯೋಗಿ, ಸರ್ಪಭೂಷಣ ಶಿವಯೋಗಿ, ಮುಪ್ಪಿನ ಷಡಕ್ಷರಿ, ಮೈಲಾರ ಬಸವಲಿಂಗ ಶರಣರ ಸ್ವರವಚನದ ಕೃತಿಗಳ ಬೇರೆ ಬೇರೆ ಆವೃತ್ತಿಗಳನ್ನು ಪರಿಚಯಿಸಿದ ಬಳಿಕ ಈಗ ಬಿಡಿಯಾಗಿ ಪ್ರಕಟವಾದ ಕೃತಿಗಳ ಬಗೆಗೆ ವಿವರಿಸಬಹುದು:

ಕೈವಲ್ಯ ನವನೀತ: ರಾಯಚೂರು ಜಿಲ್ಲೆಯ ದೇವದುರ್ಗದ ಶರಣ ಆದಿ ಅಮಾತೆಪ್ಪನು 'ದೇಹದುರ್ಗದಧೀಶ' ಮುದ್ರಿಕೆಯಲ್ಲಿ ಶಿವಶರಣರ ವಚನಗಳ ಪ್ರಭಾವದಲ್ಲಿ ಹಾಡುಗಳನ್ನು ರಚಿಸಿರುವನು. ಅವುಗಳಿಗೆ ಸದಾ ಆನಂದಪ್ಪ ಟೀಕೆ ಬರೆದಿರುವನು. ಇದನ್ನು ಮೊದಲು ಶಾ.ಶ. ೧೮೪೧ರಲ್ಲಿ (ಕ್ರಿ.ಶ. ೧೯೧೯) ಬಳ್ಳಾರಿಯ ಕರ್ನಾಟಕ ಬುಕ್ ಡಿಪೋ ಏಜಂಟ್ ಎಸ್.ಕೆ. ಕೃಷ್ಣಸ್ವಾಮಿ ಪ್ರಕಟಿಸಿದರು. ಅದರ ಎರಡನೆಯ ಆವೃತ್ತಿ ೧೯೩೯ರಲ್ಲಿ ಬಂದಿತು.

ಕೈವಲ್ಯ ಪದ್ಯಗಳು: ತುಮಕೂರು ಜಿಲ್ಲೆಯ ತಿಪಟೂರು ತಾಲೂಕಿನ ನೊಣವಿನ ಕೆರೆಯ ಸೋಮೇಕಟ್ಟೆ ಮಠದ ಕರಿವೃಷಭೇಂದ್ರ ಸ್ವಾಮಿಗಳು (ಸು. ೧೮೭೬) ಶಿವಯೋಗದಲ್ಲಿದ್ದು ಹಾಡಿದ ಸ್ವರವಚನಗಳಿವು. ಇವು 'ಶಿವಾನುಭವ' ಮಾಸಿಕದಲ್ಲಿ ಧಾರಾವಾಹಿಯಾಗಿ ಬಂದು ೧೯೩೬ರಲ್ಲಿ ಪುಸ್ತಕ ರೂಪದಲ್ಲಿ ಪ್ರಕಟವಾದವು. ರಾಗ-ತಾಳಗಳ ನಿರ್ದೇಶವಿಲ್ಲ. ಇಲ್ಲಿ ಉದಯ ರಾಗ (ಸುಪ್ರಭಾತ) ಮತ್ತು ಜೋಗುಳದ ಪದಗಳೂ ಇವೆ. ಸತಿ-ಪತಿ ಭಾವದ ಹಾಡುಗಳು ಬೆಡಗಿನಲ್ಲಿವೆ.

ಈ ಸ್ವರವಚನಗಳ ಮೇಲೆ ನಿಜಗುಣ ಶಿವಯೋಗಿಗಳ ಪ್ರಭಾವ ಸ್ಪಷ್ಟವಾಗಿದೆ. ಪದವೊಂದರಲ್ಲಿ ಕವಿ ನಿಜಗುಣರ ಕೃತಿಗಳನ್ನೆಲ್ಲ ಮೂರು ನುಡಿಗಳಲ್ಲಿ ಹೆಸರಿಸಿ ಕೊನೆಗೆ-

ಶಂಭುರೂಪನಿಂಬುಗೊಂಡು
ಕುಂಬಿನಿಯೊಳ್ ನಿಂದಿರುವನ
ಹಂಬಲಿಸುತಿಹ ಯೋಗಿ ಜನಕೆ ಚಿ-
ದಂಬರನೆ ತಾನಾದವನ ||೪||

ಸೋಮಕಟ್ಟೆಯ ನೇಮಿಸ್ಥಲದೊಳು
ಕಾಮಿಸೆನಗೆಯು ಒಲಿದನ
ನಾಮರೂಪು ಕ್ರಿಯೆಗಳಿಲ್ಲದ ನಿ
ಸ್ಸೀಮ ನಿಜಗುಣ ಧಾಮನ ||೫||

ಎಂದು ಭಾವಪರವಶರಾಗಿ ಹಾಡಿರುವರು.

ಘನಮಠೇಶ ತತ್ವಪದಗಳು: ಕರ್ತೃ ನಾಗಭೂಷಣ ಶಿವಯೋಗಿಗಳು (೧೮೨೮-೧೮೮೪) 'ಘನಮಠೇಶ' ಅಂಕಿತದಲ್ಲಿ ಹಾಡಿದ ಸ್ವರವಚನಗಳು ಈಗಲೂ ವಿಜಾಪುರ-ರಾಯಚೂರು ಜಿಲ್ಲೆಗಳಲ್ಲಿ ಜನಜನಿತವಾಗಿವೆ. ಭಜನೆಯ ಪದಗಳೆನಿಸಿದ ಇವುಗಳ ಕೆಲವು ಅಚ್ಚಿನ ಪ್ರತಿಗಳು ಪ್ರಕಟವಾಗಿವೆ.[೧೨] ಸಂತೆಕೆಲೂರ ಶ್ರೀ ಮಲ್ಲಿಕಾರ್ಜುನಸ್ವಾಮಿಗಳು ೧೯೭೦ರಲ್ಲಿ ಪರಿಷ್ಕೃತ ಆವೃತ್ತಿಯೊಂದನ್ನು ತಂದರು.

ಶ್ರೀ ಕಲ್ಯಾಣಪ್ಪ ಬ್ಯಾಳಿ ಮಾಸ್ತರರ ಪ್ರಸ್ತಾವನೆ ಬಹಳಷ್ಟು ಸಂಶೋಧನೆಯ ವಿಷಯಗಳನ್ನು ಒಳಗೊಂಡು ಮನನೀಯವಾಗಿದೆ. ಶ್ರೀ ನಾಗಭೂಷಣ ಶಿವಯೋಗಿಗಳು ಬಸವಾದಿ ಪ್ರಮಥರ ವಚನ ಸಾಹಿತ್ಯ ಕ್ರಾಂತಿಯ ಪ್ರಭಾವ ವಲಯದಲ್ಲಿ ಸಂಸ್ಕಾರ ಹೊಂದಿದವರು. ಅವರಿಗೆ ಬಸವಣ್ಣನವರ ಬಗ್ಗೆ ಅಮಿತ ಭಕ್ತಿ.

'ಬಸವಾ, ನಿನ್ನ ಸಮಾನ ದೈವವದಾರೊ'
'ಹರನಿಂದಲಧಿಕ ಸದ್ಗುರು ಬಸವ'

ಎಂಬ ಉದ್ಗಾರಗಳಲ್ಲಿ ಅದು ಒಡೆದು ಮೂಡಿದೆ. ಬಸವಾದಿ ಶರಣರ ಸ್ತುತಿ, ಡಾಂಭಿಕ ಭಕ್ತಿಯ ವಿಡಂಬನೆ, ಕೀಳು ದೈವಗಳ ಖಂಡನೆ ಮುಂತಾದ ಬಗೆಯಲ್ಲಿ ಬಸವಣ್ಣನವರ ವಚನಗಳ ಛಾಯೆ ಸ್ಪಷ್ಟವಾಗಿದೆ.

"ಉಣ್ಣುವ ಜಂಗಮರ್ಕೈತಂದು ಹಸಿವೆನಲು
ಮುಂದಿನ ಮನೆಗೆ ಹೋಗಿಲ್ಲೇಕೆ ನಿಂತೆಂದು ಪಳಿಯುವರು."
"ಉಣ್ಣದ ಕಲ್ಲಿಗೆ ಅಟ್ಟು ನೀಡುವ
ಬಣಗ ಮಾನವ ಪಶುಗಳಿಗೆ, ಮತ್ತೆಲ್ಲಿ ಮುಕ್ತಿಯದೊ."
"ಎಲ್ಲಿ ಭಕ್ತಿಯದೆಲ್ಲಿ ಮುಕ್ತಿಯದೊ! ಈ ಸೂಳೆ ಮಕ್ಕಳಿ
ಗೆಲ್ಲಿ ಭಕ್ತಿಯದೆಲ್ಲಿ ಮುಕ್ತಿಯದೊ" (ಪದ್ಯ ೫೨)

ಎಂದು ನಿಷ್ಠುರ ಮಾತಿನ ಚಾಟಿಯಿಂದ ಮರವೆಯಲ್ಲಿದ್ದವರನ್ನು ಎಚ್ಚರಿಸಿ ಅರಿವು ಮೂಡಿಸುತ್ತಾರೆ. ಕಿರೀಟ ಅಷ್ಟಪತ್ರದ ಸು. ೧೬೫ ಪುಟಗಳ ಬೆಲೆ ೨ ರೂ.!

ಕೈವಲ್ಯ ದರ್ಪಣ: ಇತಿಹಾಸ ಪ್ರಸಿದ್ಧ ಮುಳಗುಂದ ಗವಿಮಠದ ತಪಸ್ವಿ ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳ ಸ್ವರವಚನಗಳ ಈ ಸಂಗ್ರಹ ನಿಜವಾದ ಅರ್ಥದಲ್ಲಿ ಮುಮುಕ್ಷುಗಳ ಕೈಗನ್ನಡಿಯಾಗಿದೆ. ಇದನ್ನು ಗವಿಮಠಾಧ್ಯಕ್ಷ ಶ್ರೀ ಬಸವಲಿಂಗ ಸ್ವಾಮಿಗಳು ೧೯೦೮ರಲ್ಲಿ ಪ್ರಕಟಿಸಿದ್ದರು. ಅದರ ಪ್ರತಿಗಳು ಲಭ್ಯವಾಗದಿರುವುದನ್ನು ಕಂಡು ಧಾರವಾಡದ

೧೨. ಮುಳಗುಂದ ಗವಿಮಠದ ಶ್ರೀ ಬಸವಲಿಂಗ ಸ್ವಾಮಿಗಳು ಬಾಲಲೀಲಾ ಮಹಾಂತ ಸ್ವಾಮಿಗಳ 'ಕೈವಲ್ಯ ದರ್ಪಣ'ದ ಜೊತೆಗೆ ಘನಮಠೇಶರ ತತ್ವಪದಗಳನ್ನು ೧೯೦೮ರಲ್ಲಿ ಬೆಳಕಿಗೆ ತಂದರು. ಆ ಮೇಲೆ ಧಾರವಾಡದ ಮುರಘಾಮಠದ ಆಶ್ರಮದಲ್ಲಿ ಪ್ರೊ. ಸಂ. ಶಿ. ಭೂಸನೂರಮಠ ಅವರು ೧೯೪೭ರಲ್ಲಿ ಘನಮಠ ಶಿವಯೋಗಿಗಳ ಕೈವಲ್ಯ ಪದಗಳನ್ನು ಸಂಪಾದಿಸಿದರು.

ಮುರುಘಾಮಠದ ಶ್ರೀ ಮೃತ್ಯುಂಜಯ ಸ್ವಾಮಿಗಳು ೧೯೨೨ರಲ್ಲಿ ಮೊದಲ ಆವೃತ್ತಿಯಂತೆಯೇ ಮರು ಮುದ್ರಣಗೊಳಿಸಿದರು.

ಹೀಗೆ "ಕೈವಲ್ಯ ದರ್ಪಣ"ವು ಎರಡು ಸಾರೆ ಮುದ್ರಣಗೊಂಡರೂ ಅದರಲ್ಲಿ ಕವಿ, ಕಾಲ, ಕಾವ್ಯ, ಐತಿಹಾಸಿಕ ಮಹತ್ವ, ಪ್ರಸ್ತಾವನೆ ಮುಂತಾದ ಈಗಿನ ಓದುಗರಲ್ಲಿ ಅಭಿರುಚಿಯನ್ನುಂಟು ಮಾಡುವ ಅಂಶಗಳು" ಇಲ್ಲದಿದ್ದುದರಿಂದ ಅವುಗಳ ಕೊರತೆಯನ್ನು ನೀಗಿಸಲು ಅದರ ಸಂಪಾದನೆಯ ಹೊಣೆಗಾರಿಕೆಯನ್ನು ಪ್ರೊ. ಶಿ.ಶಿ. ಬಸವನಾಳ ಅವರಿಗೆ ಶ್ರೀಗಳವರು ವಹಿಸಿಕೊಟ್ಟರು. ೧೯೪೩ರಲ್ಲಿ 'ಕೈವಲ್ಯ ದರ್ಪಣ' ಪರಿಷ್ಕೃತವಾಗಿ ಪ್ರಕಟವಾಯಿತು.

"ಶ್ರೀಗಳವರ ಹಾಡು-ಪದ-ಕಂದಗಳೆಲ್ಲ ಸಾಮಾನ್ಯ ಜನರ ಮಟ್ಟಕ್ಕೆ ಯೋಗ್ಯವಾಗುವಂತೆ ಸರಳವಾಗಿವೆ. ಇಂದಿಗೂ ಮನೆ-ಮಠಗಳಲ್ಲಿ ಜನರು ಅವುಗಳನ್ನು ಹಾಡಿ ನಲಿಯುತ್ತಲಿರುವರು. ಹಲವು ಹಾಡುಗಳು ಭಜನೆಯ ಪದಗಳಾಗಿ ಮಾರ್ಪಟ್ಟಿವೆ. ಸಾಮಾನ್ಯ ಜನರು ಹಬ್ಬ ಹುಣ್ಣಿಮೆ ಮೊದಲಾದ ವಿಶೇಷ ಪ್ರಸಂಗಗಳಲ್ಲಿ ಉತ್ಸಾಹದಿಂದ ಹಾಡಿ ಹರ್ಷಿಸುವಂತೆ ಹೋಳಿಪದಗಳ ಧಾಟಿಯಲ್ಲಿ ಜ್ಞಾನಹೋಳಿ ಪದಗಳು ರಚಿತವಾಗಿರುವುದನ್ನು ಇಲ್ಲಿ ಕಾಣುತ್ತೇವೆ. ಅಂತೆಯೇ ಈ ಪದಗಳೆಲ್ಲ ಮೊದಲಿನಿಂದಲೂ ಸಾಮಾನ್ಯ ಜನತೆಯ ಬಾಯಲ್ಲಿಯೇ ನಲಿದು ಬಂದುದರಿಂದ ಅಕ್ಷರಜ್ಞಾನವಿಲ್ಲದ ಅವರು ತಮಗೆ ಒಗ್ಗುವಂತೆ ವಿದ್ರೂಪ ಉಚ್ಚಾರದಿಂದ ಹಾಡಿದಂತೆ ಅವುಗಳನ್ನೇ ಸಂಕಲನ ಮಾಡಿ ಯಾವ ತಿದ್ದುಪಡಿ ಇಲ್ಲದೆ ಈ ಹಾಡುಗಳು ಈ ಹಿಂದೆ ಒಂದೆರಡಾವರ್ತಿ ಮುದ್ರಿತವಾಗಿ ಪ್ರಚಾರಗೊಂಡಿವೆ. ಈ ಹಾಡುಗಳೆಲ್ಲವನ್ನೂ ಇದೀಗ ಸಾಧ್ಯವಿದ್ದಷ್ಟು ಶುದ್ಧಗೊಳಿಸಿ, ಪದ-ಪಾದಗಳನ್ನು ವಿಂಗಡಿಸಿ, ಸುಬೋಧವಾಗುವಂತೆ ಮುದ್ರಿಸಲಾಗಿದೆ. ಆದರೂ ಹಲವು ಕಡೆ ಈ ನಮ್ಮ ಗುರಿ ಸಾಧಿಸಿಲ್ಲ. ಆ ಎಡೆಗಳಲ್ಲೆಲ್ಲ ನಿರುಪಾಯವಾಗಿ ಮೊದಲಿದ್ದಂತೆ ಇಟ್ಟಿರುವೆವು."[೧೩] ಎನ್ನುವಲ್ಲಿ ಸಂಶೋಧನೆಯ ಕಳಕಳಿ ನಿಚ್ಚಳವಾಗಿದೆ.

ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳ ಮಹಂತ ಲಿಂಗಾಂಕಿತ ಸ್ವರಪದಗಳ ಮೇಲೆ ಶರಣರ ವಚನಗಳ ಹಾಗೂ ನಿಜಗುಣರ ಕೈವಲ್ಯದ ಹಾಡುಗಳ ಪ್ರಭಾವ ಅಚ್ಚೊತ್ತಿದಂತಿದೆ.

ಯೋಗಿಯ ಕಂಡಿರೇನೆ! ಪರಶಿವ ಮಹಾ।
ಯೋಗಿಯ ಕಂಡಿರೇನೆ॥
ಆಗಮ ನಿಗಮಾಗೋಚರ ಶಿಶುವಾಗಿ
ತೂಗಾಡುತಿಹನು ಭಕ್ತರ ಮನೋಭಾವದೊಳ್ ॥ಪಲ್ಲ॥

ಇಂಥ ಹಾಡುಗಳು ಓದುಗರ ಮನ ಸೆಳೆಯುತ್ತವೆ. ಕಡೆಯಲ್ಲಿ ಸವಿಸ್ತರ ಕಠಿಣ ಶಬ್ದಕೋಶವಿದೆ.

---

೧೩. ಕೈವಲ್ಯ ದರ್ಪಣ, ಮುನ್ನುಡಿ, ಪು. ೧೦, ೧೯೫೩;

ಕೈವಲ್ಯ ಸೋಪಾನ: ಇದರಲ್ಲಿ ಏಕೋತ್ತರ ಶತಸ್ಥಲಗಳ ಸ್ವರವಚನಗಳಿವೆ. ಇದರ ಕರ್ತೃ ಇಮ್ಮಡಿ ಮುರಿಗಾ ಗುರುಸಿದ್ಧ ದೇಶಿಕೇಂದ್ರರು (೧೭೨೦) ಪ್ರತಿಭಾಸಂಪನ್ನ ವಿರಕ್ತ ಕವಿವರ್ಯರು. ಕಾವ್ಯ, ಚಂಪೂ, ಯಕ್ಷಗಾನ ಮುಂತಾಗಿ ಎಲ್ಲ ಸಾಹಿತ್ಯ ಪ್ರಕಾರಗಳಲ್ಲಿಯೂ ಸಾಧನೆ ಮಾಡಿದ ಅವರು ಸ್ವರವಚನಗಳ ಪರಂಪರೆಯನ್ನು ಉಳಿಸಿಕೊಂಡು ಬಂದಿರುವರು. ೧೯೮೯ರಲ್ಲಿ ಶ್ರೀ ಜಿ.ಎ. ಶಿವಲಿಂಗಯ್ಯ ಈ ಸಂಪುಟವನ್ನು ಹಸ್ತಪ್ರತಿಗಳಿಂದ ಶೋಧಿಸಿ ಸಂಪಾದಿಸಿರುವರು.

ಮೇಲಿನೆರಡು ಕೃತಿಗಳು ಆನಂದಪುರಂ ಶ್ರೀ ಜಗದ್ಗುರು ಮುರಘರಾಜೇಂದ್ರ ಸಂಸ್ಥಾನ ಮಠದ 'ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ'ಯ 'ಪ್ರಾಚೀನ ಸಾಹಿತ್ಯ ತರಂಗ'ಮಾಲಿಕೆಯಲ್ಲಿ ಪ್ರಕಾಶಿತವಾಗಿವೆ. ಇವು ಡೆಮ್ಮಿಯಾಕಾರದಲ್ಲಿವೆ.

ಗಂಗೇಶ ಸ್ವರವಚನಗಳು: ಹದಿನಾರನೆಯ ಶತಕದ ಕಕುದ್ಗಿರಿವಾಸಿ ಹೊನ್ನಕವಿ ಕೃತವಾಗಿವೆ. ಹಾಡುಗಳಿಗೆ ಸ್ವರಯೋಜನೆ ಇದೆ. ಅಷ್ಟಾವರಣಗಳ ಮಹತಿ ಹೇಳುವ ಈ ಕಿರು ಕೃತಿಯನ್ನು ಮೈಸೂರು "ಶಿವಕವಿ ಪ್ರಕಾಶನ"ದಲ್ಲಿ ಶ್ರೀ ಜಿ.ಎ. ಶಿವಲಿಂಗಯ್ಯ ಅವರು ೧೯೮೧ರಲ್ಲಿ ಸಂಪಾದಿಸಿ ಪ್ರಕಟಿಸಿರುವರು.

ಶಿವದಾಸ ಗೀತಾಂಜಲಿ: ಡಾ. ಎಲ್. ಬಸವರಾಜು ಅವರು ಬಸವಾದಿ ಪ್ರಮಥರ ಹಾಡುಗಳನ್ನು ಸಂಶೋಧನೆಯೊಂದಿಗೆ ಸಂಪಾದಿಸಿ ೧೯೬೩ರಲ್ಲಿ ಪ್ರಕಟಿಸಿದರು. ಸವಿಸ್ತರ ಪೀಠಿಕೆಯಲ್ಲಿ ಗೀತಗಳ ಸಂಕಲನ ಮತ್ತು ವ್ಯಾಖ್ಯಾನಗಳು ರಚನೆಯಾದ ಇತಿಹಾಸವನ್ನು ಸಾಧಾರವಾಗಿ ವಿಮರ್ಶೆಯೊಂದಿಗೆ ನಿರೂಪಿಸಿದ್ದಾರೆ. ಗೀತಗಳ ಅಂಕಿತ ಮತ್ತು ಕರ್ತರು, ರಾಗ-ತಾಳಗಳ ಶಾಸ್ತ್ರೀಯ ಲಕ್ಷಣ ಮುಂತಾದ ವಿಷಯಗಳು ಸಂಶೋಧನ ಮತ್ತು ಅಧ್ಯಯನದ ಪರಿಣಾಮವಾಗಿ ಸಕ್ರಮಗೊಂಡಿವೆ. ಈ ಅಪೂರ್ವ ಅಭ್ಯಾಸ ಕೃತಿಯ ಮೂರನೆಯ ಮರುಮುದ್ರಣ ಪರಿಷ್ಕೃತಿಯೊಂದಿಗೆ ಶ್ರೀ ಜ. ಶಿವರಾತ್ರೀಶ್ವರ ಗ್ರಂಥಮಾಲೆಯಲ್ಲಿ ಬಂದಿದೆ.

ಶಿವಯೋಗ ಪ್ರದೀಪಿಕೆ: ಚೆನ್ನವೀರಾರ್ಯನ ಈ ಕೃತಿಯನ್ನು ಡಾ.ವೀರಣ್ಣ ರಾಜೂರ ಅವರು ಸಂಪಾದಿಸಿ ಕ.ವಿ.ವಿ. ಪ್ರಸಾರಾಂಗದ ಮೂಲಕ ೧೯೮೧ರಲ್ಲಿ ಪ್ರಕಟಿಸಿದ್ದಾರೆ. ಶಿವಯೋಗದ ಸ್ವರೂಪವನ್ನು ತಿಳಿಸುವ ಈ ಕೃತಿಯಲ್ಲಿ ೧೮ ಜನ ಶರಣರ ೭೩ ಸ್ವರವಚನಗಳು ಸಮಾವೇಶಗೊಂಡಿವೆ. ಪ್ರಸ್ತಾವನೆಯಲ್ಲಿ ಸ್ವರವಚನಗಳ ಸ್ವರೂಪ-ಲಕ್ಷಣ-ಆಕರ-ಪರಂಪರೆ ಕುರಿತು ಬರೆಯುತ್ತ ಈವರೆಗೆ ಸ್ಥಲಕಟ್ಟಿನ ಕೃತಿಗಳಲ್ಲಿ ಹಾಗೂ ಬಿಡಿಯಾಗಿ ದೊರೆತ ೨೫೧ ಸ್ವರವಚನಗಳ ಪಟ್ಟಿ ಕೊಡಲಾಗಿದೆ. ಅನುಬಂಧದಲ್ಲಿ ಸ್ವರವಚನ ಟೀಕೆ, ಸ್ವರವಚನ ಅಕಾರಾದಿ, ರಾಗಗಳ ಅಕಾರಾದಿ, ಶಬ್ದಕೋಶಗಳಿವೆ.

ಬಿಡಿ ಸ್ವರವಚನಗಳು: ಇದನ್ನು ಬಾಗಲಕೋಟೆಯ ನಿವೃತ್ತ ಪ್ರಾಧ್ಯಾಪಕ ಗೌ.ಮ. ಉಮಾಪತಿ ಶಾಸ್ತ್ರಿಗಳು ೧೯೭೮ರಲ್ಲಿ ಸ್ವಂತದ 'ಶಾರದಾ ಭವನ ಪ್ರಕಾಶನ'ದಲ್ಲಿ ಸಂಪಾದಿಸಿದರು. ಸು. ೧೮೨೫ರಲ್ಲಿದ್ದ ಮುದ್ದು ಸಂಗಮೇಶ್ವರನ ಶಿಷ್ಯ ಶಿವರುದ್ರಸ್ವಾಮಿ

ಸಂಕಲಿಸಿದ ೩೦ ಸ್ವರವಚನಗಳನ್ನು ಕಾಗದ ಹಸ್ತಪ್ರತಿಯಿಂದ ಸಂಶೋಧಿಸಿ, ಅಭ್ಯಾಸಮಯ ಪ್ರಸ್ತಾವನೆ ಸಹಿತ ಇಲ್ಲಿ ಪ್ರಕಟಿಸಲಾಗಿದೆ.

ಹಸ್ತಪ್ರತಿಗಳಲ್ಲಿ ಕೈವಲ್ಯಾನುಭಾವದ ಹಾಡುಗಳು ಸ್ವರವಚನಗಳೆಂದೇ ಸಂಕೇತಗೊಂಡಿವೆ. ಪದ-ಹಾಡು-ಗೀತಗಳಿಗೆ ಅದನ್ನು ಅರ್ಥಪೂರ್ಣ ಪರ್ಯಾಯಪದವಾಗಿ ಮೊದಲ ಬಾರಿಗೆ ಬಳಕೆಯಲ್ಲಿ ತಂದ ಅಗ್ಗಳಿಕೆ ಈ ಕಿರು ಸಂಪಾದನ ಕೃತಿಯದು.

## ಭಜನಾವಳಿಗಳು

ಅಚ್ಚಾದ ಸ್ವರವಚನ ಪುಸ್ತಕಗಳಿಂದ ಆಯ್ದ ಸಂಗ್ರಹಗಳೇ ಭಜನಾವಳಿಗಳು. ಪುಸ್ತಕ ವ್ಯಾಪಾರಿಗಳು ಅವುಗಳ ಶುದ್ಧ ಪಾಠದತ್ತ ಗಮನ ಕೊಡದೆ ಲಾಭದಾಸೆಯಿಂದ ಅಚ್ಚು ಮಾಡಿಸಿದ್ದಾರೆ. ಆದರೆ ಕೆಲವು ಮಠಗಳ ಪ್ರಕಾಶನದಲ್ಲಿ ಅವು ಶುದ್ಧವಾಗಿ, ಅಂದವಾಗಿ ಸುಲಭ ಬೆಲೆಯಲ್ಲಿ ಪ್ರಕಟವಾಗಿರುವುದು, ಹೊಗಳಬೇಕಾದ ಸಂಗತಿ.

೧. ಶಿವಯೋಗ ಮಂದಿರದ ಭಜನಾವಳಿ: ಉಭಯಗಾನಯೋಗಿ ಲಿಂ. ಪಂಚಾಕ್ಷರ ಗವಾಯಿಗಳವರ ಸಂಚಾರಿ ಸಂಗೀತ ವಿದ್ಯಾಲಯದಿಂದ ೧೯೩೨ರಲ್ಲಿ ಪ್ರಚಾರಗೊಂಡ ಈ ಸಂಗ್ರಹದಲ್ಲಿ ಹೆಚ್ಚಾಗಿ ಹಾನಗಲ್ಲ ಶ್ರೀ ಕುಮಾರ ಸ್ವಾಮಿಗಳವರು 'ಶಿವಯೋಗ' ಅಂಕಿತದಲ್ಲಿ ರಚಿಸಿದ ಜೀವ ಸಂಬೋಧೆಯ ಸರಾಗದ ಲಘು ಹಾಡುಗಳಿವೆ.

೨. ಭಕ್ತಿಗೀತೆಗಳು: ಗಿರಿಯಾಪುರದ ಗುರುಕುಮಾರಾಶ್ರಮದ ಶ್ರೀ ಸದಾಶಿವ ಶಿವಾಚಾರ್ಯರು ಭಜನಾ ಮೇಳದವರು ಹಾಡಲೆಂದೇ ನಿಜಗುಣ, ಸಪ್ಪಣ್ಣ ಮೊದಲಾದವರ ಸ್ವರವಚನಗಳೊಂದಿಗೆ'ಸಿದ್ಧಲಿಂಗ' ಮುದ್ರಿಕೆಯಲ್ಲಿ ರಚಿಸಿದ ಸ್ವಂತದ ಸ್ವರಪದಗಳೂ ಇವೆ. ಇದು ಡಾ. ಜ.ಚ.ನಿ. ಇವರ ಮುನ್ನುಡಿಯೊಂದಿಗೆ ೧೯೫೩ರಲ್ಲಿ ಅಚ್ಚಾಗಿದೆ.

೩. ಭಕ್ತಿಗೀತೆಗಳು: ಸಂಗೀತಪ್ರೇಮಿಗಳಾಗಿದ್ದ ಧಾರವಾಡ ಮುರಘಾಮಠದ ಶ್ರೀ ಮೃತ್ಯುಂಜಯಪ್ಪಗಳು ಬಾಲಲೀಲಾ ಮಹಾಂತಶಿವಯೋಗಿ ಮೊದಲಾದವರ ಜನಪ್ರಿಯ ಹಾಡುಗಳನ್ನು ಆಯ್ದು ಪುಸ್ತಕರೂಪದಲ್ಲಿ ಪ್ರಕಟಿಸಲು ಶ್ರೀ ಗುರುಪಾದ ದೇವರಮಠ ಅವರಿಗೆ ಮಾರ್ಗದರ್ಶನ ಮಾಡಿದರು. ಅದು ೧೯೬೭ರಲ್ಲಿ ಮುದ್ರಿತವಾಗಿ ಮತ್ತೆ ಆರು ಆವೃತ್ತಿಗಳನ್ನು ಕಂಡಿತು.

೪. ಭಕ್ತಿಗೀತಾಮೃತ: ಕಾಗವಾಡ (ಜಿ.ಬೆಳಗಾಂ) ಗುರುದೇವಾಶ್ರಮದ ಪ್ರಕಾಶನ.

## ವೀರಶೈವ ಅಧ್ಯಯನ ಸಂಸ್ಥೆಯ ಸ್ವರವಚನ ಸಂಪುಟಗಳು

ಅಪಾರವಾಗಿರುವ ಸ್ವರವಚನ ಸಾಹಿತ್ಯವನ್ನು ಪ್ರಾಚೀನ ತಾಡವೋಲೆ ಕೋರೆ ಕಾಗದ ಹಸ್ತಪ್ರತಿಗಳ ಸಂಶೋಧನೆಯೊಂದಿಗೆ ಶಾಸ್ತ್ರೀಯ ಹಾಗೂ ಪರಿಶುದ್ಧವಾಗಿ ಸಂಸ್ಕರಿಸಿ ಪ್ರಕಟಿಸಿದ ಮಹತ್ಕಾರ್ಯ ಗದುಗಿನ ವೀರಶೈವ ಅಧ್ಯಯನ ಸಂಸ್ಥೆಯಿಂದ ಜರುಗಿರುವುದು

ಸಂಸ್ಕೃತ್ಯ. ಶ್ರೀ ತೋಂಟದ ಸಿದ್ಧಲಿಂಗಸ್ವಾಮಿಗಳವರ ಅಪೇಕ್ಷೆಯಂತೆ ಪ್ರಾ. ಎಂ.ಎಂ. ಕಲಬುರ್ಗಿ ಅವರ ಸಮರ್ಥ ನಿರ್ದೇಶನದಲ್ಲಿ 'ಸಮಗ್ರ ವೀರಶೈವ ಅಪ್ರಕಟಿತ ಪ್ರಾಚೀನ ಸಾಹಿತ್ಯ ಪ್ರಕಾಶನ ಯೋಜನೆ' ಕಾರ್ಯರೂಪಕ್ಕೆ ಬಂದು, ಅದರ ಪರಿಣಾಮವಾಗಿ ಗಣನೀಯ ಸಂಖ್ಯೆಯಲ್ಲಿ ಸ್ವರವಚನ ಸಂಪುಟಗಳು ಆಕರ್ಷಕವಾಗಿ ಅಚ್ಚುಗೊಂಡಿವೆ.

ಅಧ್ಯಯನಶೀಲ ವಿದ್ವಾಂಸರು ಸ್ವರವಚನ ಕವಿಯ ಕಾಲ, ದೇಶ, ಜೀವನ ಮತ್ತು ಕೃತಿಯ ಸಮಗ್ರ ವಿಮರ್ಶೆಯೊಂದಿಗೆ ಸಂಪುಟಗಳನ್ನು ಸಂಪಾದಿಸಿರುವುದು ಸಂಶೋಧನೆಯ ವ್ಯಾಸಂಗ ಕ್ಷೇತ್ರದಲ್ಲಿ ಒಂದು ಹೊಸ ಯುಗವೇ ಮೈದಾಳಿದಂತಿದೆ. ಇಲ್ಲಿ ಪ್ರಕಟವಾದ ಸ್ವರವಚನ ಸಂಪುಟಗಳ ಸೂಚಿ ಮಾತ್ರ ಪ್ರಸ್ತುತ:

೧. ಆದಯ್ಯನ ಲಘುಕೃತಿಗಳು: ಸಂ. ಡಾ. ಎಂ.ಎಂ. ಕಲಬುರ್ಗಿ, ೧೯೮೦;
೨. ಸಾಲೋಟಗಿ ಶ್ರೀ ಶಿವಯೋಗೀಶ್ವರ ಡಂಗುರ ಪದಗಳು. ಸಂ. ಪ್ರೊ. ಎಂ. ಎಸ್. ವಾಲಿ, ೧೯೮೨;
೩. ಕಡಕೋಳ ಮಡಿವಾಳೇಶ್ವರ ವಿರಚಿತ ಸ್ವರವಚನಗಳು: ಸಂ. ಡಾ. ಮಲ್ಲಿಕಾರ್ಜುನ ಶಿ. ಲಠ್ಠೆ, ೧೯೮೨;
೪. ಕಸ್ತೂರದೇವರ ಸ್ವರವಚನಗಳು ಡಾ. ಎಂ.ಎಸ್. ಸುಂಕಾಪುರ, ೧೯೮೨;
೫. ಕೂಡಲೂರು ಬಸವಲಿಂಗಶರಣರ ಸ್ವರವಚನಗಳು: ಸಂ. ಶಾಂತರಸ, ೧೯೮೩;
೬. ಜುಗುನಿ ಮರುಳದೇವರ ಕೃತಿಗಳು: ಡಾ. ಎಸ್. ವಿದ್ಯಾಶಂಕರ, ೧೯೮೩;
೭. ಗುರುಬಸವಾರ್ಯನ ಸ್ವರವಚನಗಳು: ಸಂ. ಮೊರಬದ ಮಲ್ಲಿಕಾರ್ಜುನ, ೧೯೮೬;
೮. ಕಂಬಾಳ ಶಾಂತಮಲ್ಲೇಶನ ಗಣವಚನ ರತ್ನಾವಳಿ: ಎಸ್. ಉಮಾಪತಿ, ೧೯೮೬;
೯. ಹಾಗಲವಾಡಿ ಮುದ್ವೀರ ಸ್ವಾಮಿಯ ಸ್ವರವಚನಗಳು: ಡಾ. ವೀರಣ್ಣ ರಾಜೂರ, ೧೯೮೬;
೧೦. ಶಂಕರದೇವರ ಸ್ವರವಚನಗಳು: ಎಸ್. ಶಿವಣ್ಣ, ೧೯೮೭;
೧೧. ಮರಿಶಾಂತದೇವರ ಸ್ವರವಚನಗಳು: ಎಸ್. ಶಿವಣ್ಣ, ೧೯೮೮;
೧೨. ಸೋದೆಯ ಸದಾಶಿವರಾಯನ ಕೃತಿಗಳು: ಡಾ. ಬಿ.ಆರ್. ಹಿರೇಮಠ, ೧೯೯೫;
೧೩. ಸ್ವರವಚನ ವಾಹಿನಿ ಎಸ್. ಉಮಾಪತಿ, ೧೯೯೫.

ಸುಮಾರು ಎರಡು ಸಾವಿರ ಪುಟಗಳಲ್ಲಿಯ ಈ ಸ್ವರವಚನ ವಾಙ್ಮಯ ಪ್ರಕಾಶನ ಕನ್ನಡ ಸಾಹಿತ್ಯ ನಡೆದು ಬಂದ ದಾರಿಯಲ್ಲಿ ಒಂದು ಸ್ಮರಣೀಯ ಮೈಲುಗಲ್ಲಾಗಿದೆ. ಇವೆಲ್ಲ ಡೆಮ್ಮಿ ಅಷ್ಟಪತ್ರದ ಆಕಾರದಲ್ಲಿವೆ.

## ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯ ಸ್ವರವಚನ ಸಂಪುಟಗಳು

ಸುತ್ತೂರು ವೀರಸಿಂಹಾಸನ ಜಗದ್ಗುರು ಸಂಸ್ಥಾನಮಠದ ಕಾರ್ಯದಕ್ಷ ಅಧ್ಯಕ್ಷರಾದ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮಿಗಳವರು ಸ್ವರವಚನ ಸಾಹಿತ್ಯದ ಪ್ರಕಾಶನ ಯೋಜನೆಯನ್ನು "ಶ್ರೀ ಶಿವರಾತ್ರೀಶ್ವರ ಧಾರ್ಮಿಕ ದತ್ತಿ"ಯ ಆಶ್ರಯದಲ್ಲಿ ಹಮ್ಮಿಕೊಂಡು ಅದನ್ನು ಕ್ರಿಯಾನ್ವಿತಗೊಳಿಸಿರುವುದು ಮಹನೀಯ ವಿಷಯ. ಈ ಯೋಜನೆಯ ಮೊದಲ ಹಂತವಾಗಿ ಡಾ. ಎಂ.ಎಂ. ಕಲಬುರ್ಗಿ ಅವರ ನಿರ್ದೇಶನದಲ್ಲಿ ಬೇರೆ ಬೇರೆ ಸಂಶೋಧಕ ವಿದ್ವಾಂಸರಿಂದ ಸಂಪಾದಿತವಾದ ಕೆಳಗಿನ ಈ ಐದು ಸ್ವರವಚನ ಸಂಪುಟಗಳು (೧೯೯೫) ಬಿಡುಗಡೆಗೊಂಡಿವೆ.

೧. ೧ನೆಯ ಸಂಪುಟ: ಸಂ. ಎಸ್. ಶಿವಣ್ಣ, ಬೆಂ.ವಿ.ವಿ.

೨. ೨ನೆಯ ಸಂಪುಟ: ಸಂ. ಎಸ್. ಶಿವಣ್ಣ, ಬೆಂ. ವಿ.ವಿ.

೩. ೩ನೆಯ ಸಂಪುಟ: (ಕರಿಬಸವೇಶ್ವರನ ಸ್ವರವಚನ)ಸಂ.ಜಿ.ಜಿ.ಮಂಜುನಾಥನ್,ಮೈ.ವಿ.ವಿ.

೪. ೪ನೆಯ ಸಂಪುಟ: ಸಂ. ವೈ. ಸಿ. ಭಾನುಮತಿ, ಮೈ.ವಿ.ವಿ.

೫. ೫ನೆಯ ಸಂಪುಟ: (ನೀಲಗ್ರೀವನ ಸ್ವರವಚನಗಳು) ಸಂ. ಕೆ.ಆರ್.ಶೇಷಗಿರಿ.

ಒಂದು ಸಮಗ್ರ ಯೋಜನೆ ಹಾಕಿಕೊಂಡು ಇನ್ನೂ ಹತ್ತಾರು ಸಂಪುಟಗಳಲ್ಲಿ ಸಮಗ್ರ ಸ್ವರವಚನ ವಾಙ್ಮಯ ಬೆಳಕಿಗೆ ಬರುವಂತೆ ಮಾಡಲು ಈ ಸಂಸ್ಥೆ ಸರಿಕಲ್ಪಿಸಿರುವುದು ನಿಜಕ್ಕೂ ಮೆಚ್ಚತಕ್ಕ ವಿಷಯ.

ಹೀಗೆ ನಮ್ಮ ನಾಡಿನಲ್ಲಿ ಸ್ವರವಚನ ಸಾಹಿತ್ಯ ಪ್ರಕಟವಾಗುತ್ತ ಬಂದಿದೆ. ಈ ರಾಶಿಯಲ್ಲಿ ನನ್ನ ಕಣ್ಣಿಗೆ ಬಿದ್ದುದನ್ನು ಮಾತ್ರ ದಾಖಲಿಸಲಾಗಿದೆ. ಇದಕ್ಕೆ ಹೊರತಾಗಿ ಇನ್ನೂ ಅನೇಕ ಮುದ್ರಿತ ಕೃತಿಗಳು ಅಲ್ಲಲ್ಲಿ ಅಡಗಿ ಕುಳಿತಿದೆ. ಸಮಗ್ರ ಸಂಶೋಧನೆಯಿಂದ ಅವು ಹೊರಬಂದು, ಅಪ್ರಕಟಿತ ಕೃತಿಗಳು ಬೆಳಕು ಕಾಣಲು ಮಾರ್ಗದರ್ಶನ ಮಾಡುವುದು ಅವಶ್ಯವಿದೆ.



# ಸ್ವರವಚನ ಹಾಡುವ - ಪ್ರಸಾರ ಮಾಡುವ ಬಗೆ

*ಸದಾನಂದ ಕನವಳ್ಳಿ*

ಭಾರತೀಯ ಸಂಸ್ಕೃತಿಯಲ್ಲಿ ಹಾಡುಗಬ್ಬಗಳ ಪ್ರಾಚೀನ ಪರಂಪರೆಯಿದೆ. ಹಾಡುಗಬ್ಬಗಳು ಓದು ಬಾರದವರನ್ನೂ ತಲುಪುತ್ತವೆ. ಹಾಡು ಕೇಳಲು ಓದು ಬರಬೇಕಾದುದಿಲ್ಲ. ಜಯದೇವನ "ಗೀತಗೋವಿಂದ" ಅತ್ಯಂತ ಜನಪ್ರಿಯ ಹಾಡುಗಬ್ಬ. ಅದೊಂದು ಕೃಷ್ಣಭಕ್ತಿಯ ಅಷ್ಟಪದಿ ಕಾವ್ಯ. ಕಾಶ್ಮೀರದಿಂದ ಕೇರಳದವರೆಗೆ, ಗುಜರಾತಿನಿಂದ ಆಸಾಮಿನವರೆಗೆ ಈ ಗೇಯ ಕಾವ್ಯ ಹಲವಾರು ರಾಗಗಳಲ್ಲಿ ಇಂದಿಗೂ ಹಾಡಲ್ಪಡುತ್ತಿರುವುದು ಶತಮಾನಗಳುದ್ದಕ್ಕೂ ಅದು ಪಡೆದಿರುವ ಜನಪ್ರಿಯತೆಯ ನಿದರ್ಶನ. ಭಕ್ತಿಪಂಥದ ಸಂತಕವಿಗಳಾದ ಚೈತನ್ಯ ಮಹಾಪ್ರಭು, ತುಕಾರಾಮ, ಜ್ಞಾನದೇವ ಮೊದಲಾದವರ ಭಕ್ತಿಗೀತೆಗಳನ್ನು ಶಾಸ್ತ್ರೀಯ ಸಂಗೀತದ ರಾಗಗಳಿಗೆ ಅಳವಡಿಸಿ ಸುಶ್ರಾವ್ಯವಾಗಿ ಹಾಡಲಾಗುತ್ತಿದೆ. ಮಹಾರಾಷ್ಟ್ರದಲ್ಲಿ ಅಭಂಗ ಹಾಡುವ ಪರಂಪರೆಯೆ ನಿರ್ಮಾಣಗೊಂಡಿದೆ. ಕಬೀರ ಭಜನೆಗಳನ್ನು ಹಾಡುವ ಪರಂಪರೆಯೂ ನಿರ್ಮಾಣಗೊಂಡಿದೆ.

ಕನ್ನಡದಲ್ಲಿ ಹಾಡುಗಬ್ಬಗಳ ಕೊರತೆಯಿಲ್ಲ. ಸ್ವರವಚನಗಳೆಂಬ ಹಾಡುಗಬ್ಬಗಳ ಸುದೀರ್ಘ ಪರಂಪರೆಯಿದೆ. ಹೆಸರೇ ಸೂಚಿಸುವಂತೆ ಸ್ವರವಚನಗಳು ಸ್ವರಬದ್ಧವಾಗಿ ಹಾಡಲುದ್ದೇಶಿತವಾದವುಗಳು. ಪ್ರತಿಯೊಂದಕ್ಕೂ ರಾಗತಾಲಗಳ ನಿರ್ದೇಶನವಿದೆ. ಅವೆಲ್ಲ ಕರ್ನಾಟಕಿ ರಾಗತಾಲಗಳು. ಏಕೆಂದರೆ, ಅಂದಿನ ಕಾಲದಲ್ಲಿ ಕರ್ನಾಟಕದಲ್ಲಿ ಹಿಂದುಸ್ತಾನಿ ಸಂಗೀತ ಲವಲೇಶವೂ ಇರಲಿಲ್ಲ. ಏನಿದ್ದರೂ ಕರ್ನಾಟಕದಲ್ಲಿ ಹಿಂದುಸ್ತಾನಿ ಸಂಗೀತ ಅಂಕುರಿಸಿದುದು ಕಳೆದ ನೂರು ವರ್ಷಗಳ ಎಡಬಲದಲ್ಲಿ. ಹಲವಾರು ಸ್ವರವಚನಗಳಿಗೆ ರಾಗತಾಲ "ನಿಮ್ಮಿಚ್ಛೆ" ಎಂದಿದ್ದಾರೆ. ಹಾಡುವವರಿಗೂ ಸ್ವಾತಂತ್ರ್ಯ ಬೇಕಲ್ಲ! ನಿರ್ದೇಶಿತ ರಾಗತಾಲಗಳಲ್ಲಿ ಬಹುಪಾಲು ಇಂದು ಪ್ರಚಲಿತವಿರಲಿಕ್ಕೂ ಇಲ್ಲ. ಆದರೆ ಸ್ವರವಚನಕಾರರಿಗೆ ಸಂಗೀತಜ್ಞಾನವಿತ್ತೆಂಬುದು ಸುಸ್ಪಷ್ಟ. ಸ್ವರವಚನಗಳ ಉದ್ದೇಶ ಹಾಡುಗಬ್ಬಗಳ ಮೂಲಕ ಸಮಾಜದಲ್ಲಿ ಭಕ್ತಿ ನೀತಿ ಪಸರಿಸುವುದೇ ಆಗಿತ್ತು. ಆದುದರಿಂದ, ಅವು ಬಹಳ ಸರಳವಾಗಿವೆ. ಸುಶ್ರಾವ್ಯವಾಗಿ ಹಾಡಲು ಬರುವಂತಿವೆ. ಇಂಥ ಒಂದು ಶ್ರೇಷ್ಠ ಪರಂಪರೆ ಅದು ಹೇಗೋ ನಿಂತುಹೋಗಿರುವುದು ದುರ್ದೈವದ ಸಂಗತಿ.

ಅಂತೆಯೇ ಸ್ವರವಚನಗಳನ್ನು ಹಾಡುವ ಪರಂಪರೆಯನ್ನು ಪುನರುಜ್ಜೀವಿಸುವ ಅಗತ್ಯವಿದೆ. ಇಂಥ ಒಂದು ಸಾಹಿತ್ಯ ಸಂಗೀತ ನಿಧಿಯನ್ನು ಪುನಃ ಪ್ರತಿಷ್ಠಾಪಿಸುವ

ಆವಶ್ಯಕತೆಯಿದೆ. ಮಿಕ್ಕ ಅನೇಕರು ಸ್ವರವಚನಗಳನ್ನು ರಚಿಸಿದಂತೆ ಪ್ರಮುಖ ವಚನಕಾರರಾದ ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ, ಚೆನ್ನಬಸವಣ್ಣ, ಸಿದ್ಧರಾಮ, ಮಡಿವಾಳ ಮಾಚಯ್ಯ, ಸಕಳೇಶ ಮಾದರಸ, ನೀಲಮ್ಮ ಮುಂತಾದವರೂ ಸ್ವರವಚನಗಳನ್ನು ರಚಿಸಿದ್ದಾರೆಂದರೆ ಅವುಗಳ ಸಾಮಾಜಿಕ ಮಹತ್ವ ಮನದಟ್ಟಾಗುತ್ತದೆ. ವಚನಗಳನ್ನು ಹಾಡಲು ಬರುವುದಿಲ್ಲ ಎನ್ನುವ ಕಾಲವೂ ಒಂದಿತ್ತು. ಪಂಚಾಕ್ಷರಿ ಗವಾಯಿ, ಮಲ್ಲಿಕಾರ್ಜುನ ಮನಸೂರ, ಬಸವರಾಜ ರಾಜಗುರು ಮೊದಲಾದ ಉದ್ದಾಮ ಸಂಗೀತಗಾರರ ಪುಣ್ಯದಿಂದ ವಚನಗಳನ್ನು ಶಾಸ್ತ್ರೀಯ ರಾಗಗಳಿಗೆ ಅಳವಡಿಸಿ ಹಾಡುವ ಪದ್ಧತಿ ಕರ್ನಾಟಕಿ ಹಿಂದುಸ್ತಾನಿ ಸಂಗೀತಗಳೆರಡರಲ್ಲೂ ಪ್ರಚಲಿತವಾಗಿದೆ. ಅವು ಎಷ್ಟು ಚೆನ್ನಾಗಿ ರಾಗಗಳಿಗೆ ಅಳವಡುತ್ತವೆನ್ನುವುದು ಅಚ್ಚರಿ ಮೂಡಿಸುತ್ತದೆ.

ಆದರೂ ಕನ್ನಡ ಸಂಗೀತಗಾರರು ಅಭಿಮಾನಶೂನ್ಯರೆಂದೇ ಹೇಳಬೇಕು. ಏಕೆಂದರೆ, ಕರ್ನಾಟಕಿ ಸಂಗೀತದಲ್ಲಿ ಬರಿ ತಮಿಳು, ತೆಲುಗು ರಚನೆಗಳನ್ನು ಹಾಡುತ್ತಾರೆ. ಆ ಸಂಗೀತ ಪದ್ಧತಿಗೇ ಹೆಸರನ್ನಿತ್ತ ಕರ್ನಾಟಕದಲ್ಲೂ ತಮಿಳು ತೆಲುಗು ರಚನೆಗಳು ರಾರಾಜಿಸುವುದೆಂದರೇನು? ಕನ್ನಡ ರಚನೆಗಳನ್ನು ಯೋಜಿಸುವ ಪ್ರಯತ್ನ ಏಕೆ ನಡೆಯುತ್ತಿಲ್ಲ? ಕನ್ನಡಿಗರಲ್ಲಿ ಪ್ರತಿಭಾವಂತರಿಲ್ಲವೆಂದೇ? ಅಥವಾ ಕೀಳರಿಮೆಯಿಂದಲೇ? ಅಥವಾ ಅಂಧಾನುಕರಣೆಯಿಂದಲೇ? ಎಲ್ಲವೂ ಅಷ್ಟಿಷ್ಟು ಇದ್ದೀತು. ಹಿಂದುಸ್ತಾನಿ ಸಂಗೀತದಲ್ಲಾದರೆ ಹಿಂದಿ ಚೀಜುಗಳನ್ನು, ಮರಾಠಿ ಅಭಂಗ, ನಾಟ್ಯಗೀತೆಗಳನ್ನು ಹಾಡುತ್ತಾರೆ. ಇತರರು ಹಾಡುತ್ತಾರೆಂದು ನಮ್ಮವರೂ ಅವನ್ನೇ ಹಾಡಬೇಕೇಕೆ? ನಮ್ಮವರು ನಮ್ಮ ರಾಜ್ಯದಲ್ಲಾದರೆ ಒಂದು ವಚನವನ್ನೋ ದಾಸರ ಪದವನ್ನೋ ತಮ್ಮ ಕಚೇರಿಯಲ್ಲಿ ಹಾಡಿಯಾರು. ಆದರೆ, ಹೊರಗಡೆ ತಪ್ಪಿಯೂ ಕನ್ನಡ ಪದಗಳನ್ನು ಹಾಡುವುದಿಲ್ಲ. ವಿಪರ್ಯಾಸವಲ್ಲವೆ? ಕನ್ನಡನಾಡಿನಲ್ಲಿ ಹಿಂದಿ, ಮರಾಠಿ ಚೀಜು (ಕೃತಿ)ಗಳನ್ನು ಆಸ್ವಾದಿಸಬಹುದಾದರೆ ಹೊರ ರಾಜ್ಯಗಳಲ್ಲಿ ಕನ್ನಡ ಚೀಜುಗಳ ಆಸ್ವಾದನೆಗೆ ಏನು ಅಡ್ಡಿ? ಅಂಗಿ ಹಾಕಲು ಹ್ಯಾಂಗರ್ ಇರುವಂತೆ ಚೀಜು ರಾಗಕ್ಕೊಂದು ಹ್ಯಾಂಗರ್ ಅಷ್ಟೆ. ಹ್ಯಾಂಗರ್ ಯಾವ ವಸ್ತುವಿನಿಂದಾದರೆ ಏನು? ಕಟ್ಟಿಗೆಯದೂ ಸರಿ, ಕಬ್ಬಿಣದ್ದೂ ಸರಿ, ಅಲ್ಯೂಮಿನಿಯಮ್ಮಿನದೂ ಸರಿ, ಪ್ಲಾಸ್ಟಿಕ್ಕಿನದೂ ಸರಿ. ಹಾಗೆಯೆ, ಚೀಜು ಹಿಂದಿಯಲ್ಲಿರುವಂತೆ ಕನ್ನಡದಲ್ಲಿ ಏಕಾಗಬಾರದು? ಈ ಸಂದರ್ಭದ ಹಿನ್ನೆಲೆಯಲ್ಲಿ ಸ್ವರವಚನಗಳನ್ನು ಹಾಡುವುದನ್ನು ಜನಪ್ರಿಯಗೊಳಿಸುವ ಬಗೆಗೆ ಆಲೋಚಿಸಬೇಕು.

ಕಾಲಗರ್ಭದಲ್ಲಿ ಹೂತುಹೋಗಬಹುದಾಗಿದ್ದ ಸ್ವರವಚನಗಳನ್ನು ಪ್ರಕಟಿಸುವ ಮೂಲಕ ಸಂರಕ್ಷಿಸಿದ ಶ್ರೇಯಸ್ಸು ಗದುಗಿನ ತೋಂಟದಾರ್ಯ ಮಠಕ್ಕೆ ಹಾಗೂ ಮೈಸೂರಿನ ಶಿವರಾತ್ರೀಶ್ವರ ಮಠಕ್ಕೆ ಸಲ್ಲಬೇಕು. ಹತ್ತೆಂಟು ಸಂಪುಟಗಳು ಹೊರಬಂದು ಅವುಗಳತ್ತ ಗಮನ ಹರಿಯುವಂತಾಗಿದೆ. ಸ್ವರವಚನಗಳಲ್ಲಿ ಹುದುಗಿದ ಸಂಗೀತವನ್ನು ಹೊರಹೊಮ್ಮಿಸುವ ಪ್ರಯತ್ನವೂ ಆಗಬೇಕು. ಒಂದು ನಾಟಕ ಹೇಗೆ ರಂಗಮಂಚದ ಮೇಲೆ ಪ್ರದರ್ಶನಗೊಂಡಾಗಲೆ ಸಾರ್ಥಕತೆ ಪಡೆಯುವುದೋ ಹಾಗೆಯೇ ಸ್ವರವಚನಗಳನ್ನೂ ಹಾಡಿದಾಗಲೆ ಅವು ಸಾರ್ಥಕತೆ ಪಡೆಯುವುದು. ಆ ದಿಶೆಯಲ್ಲಿ ಯೋಚನೆ, ಯೋಜನೆ

ಹಮ್ಮಿಕೊಂಡು ಸ್ವರವಚನಗಳನ್ನು ಜನಪ್ರಿಯಗೊಳಿಸಬೇಕಿದೆ. ಈ ಜವಾಬ್ದಾರಿಯೂ ಅವುಗಳನ್ನು ಪ್ರಕಟಿಸಿರುವ ಮಠಗಳ ಕೊರಳಿಗೇ ಬಿದ್ದರೆ ಆಶ್ಚರ್ಯಪಡಬೇಕಿಲ್ಲ.

ಪ್ರಥಮ ಹೆಜ್ಜೆಯಾಗಿ ಸಂಗೀತಗಾರರ ಗೋಷ್ಠಿ ಕರೆದು ಸ್ವರವಚನಗಳನ್ನು ಹಾಡುವ ಬಗೆಗೆ ಚರ್ಚಿಸಿ ರೂಪರೇಷೆ ಸಿದ್ಧಪಡಿಸಬೇಕು. ಆಸಕ್ತ ಮಠಗಳು ತಮ್ಮ ಸುತ್ತಮುತ್ತಲಿನ ಸಂಗೀತಗಾರರ ಕಮ್ಮಟ ಏರ್ಪಡಿಸಬಹುದು. ಸ್ವರವಚನಗಳನ್ನು ಸಂಗೀತಕ್ಕೆ ಅಳವಡಿಸಿದ ಮೇಲೆ ಸ್ವರವಚನಗಳ ಪ್ರಸಾರಕ್ಕೆ ಸಮೂಹ ಮಾಧ್ಯಮಗಳನ್ನು ವ್ಯಾಪಕವಾಗಿ ಬಳಸಿಕೊಳ್ಳಬೇಕು.

ಆಕಾಶವಾಣಿಯಲ್ಲಿ "ವಂದನಾ" ಎಂಬ ಭಕ್ತಿಗೀತೆಗಳ ದೈನಂದಿಕ ಬೆಳಗಿನ ಕಾರ್ಯಕ್ರಮವಿರುತ್ತದೆ. ಸ್ವರವಚನಗಳು ಅದಕ್ಕೆ ಹೇಳಿಮಾಡಿಸಿದಂತಹವುಗಳು. ಏಕೆಂದರೆ ಅವು ಭಕ್ತಿಯನ್ನೇ, ನೀತಿಯನ್ನೇ ಬೋಧಿಸುತ್ತವೆ. ಸಮಾಜೋನ್ನತಿಯ ಗುರಿ ಹೊಂದಿರುತ್ತವೆ. "ವಂದನಾ"ದಲ್ಲಿ ಭಾಗವಹಿಸುವ ಹಾಡುಗಾರರಿಗೆ ಸ್ವರವಚನಗಳ ರುಚಿ ಹಚ್ಚಬೇಕು. ಆಕಾಶವಾಣಿಯಲ್ಲಿ ಪ್ರತ್ಯೇಕ, ವಿಶೇಷ ಸ್ವರವಚನಗಳ ಕಾರ್ಯಕ್ರಮಕ್ಕೂ ಪ್ರಯತ್ನಿಸಬೇಕು.

ಇದು ಕ್ಯಾಸೆಟ್ ಯುಗ. ಕ್ಯಾಸೆಟ್ ಮೂಲಕ ಹಾಡುಗಳು ತ್ವರಿತ ಗತಿಯಲ್ಲಿ ಪ್ರಸಾರವಾಗಿ ಲೋಕಪ್ರಿಯವಾಗುತ್ತವೆ. ಉದಾರಹಣೆಗೆ, ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ ಶಿಶುನಾಳ ಶರೀಫರ ಹಾಡುಗಳ ಪ್ರಥಮಾವೃತ್ತಿಯ ೭೦೦೦ ಪ್ರತಿಗಳು ಒಂದೇ ವಾರದಲ್ಲಿ ಮಾರಾಟವಾಗಿಬಿಟ್ಟವು. ಅದಕ್ಕೆ ಕಾರಣವೆಂದರೆ ಅಷ್ಟೊತ್ತಿಗೆ ಕ್ಯಾಸೆಟ್‌ಗಳ ಮೂಲಕ ಶಿಶುನಾಳ ಶರೀಫರ ಹಾಡುಗಳು ಜನರ ಕಿವಿ ತಲುಪಿದ್ದವು. ಕ್ಯಾಸೆಟ್ ಸುಲಭ ವಿಧಾನವೂ ಅಹುದು. ಸ್ವರವಚನಗಳನ್ನು ಒಬ್ಬೊಬ್ಬರು, ಇಬ್ಬಿಬ್ಬರು, ವೃಂದ ಹಾಡಲು ಸಾಧ್ಯವಿದೆ. ಹಾಗೆ ಅಣಿಗೊಳಿಸಿ ಸಂಕ್ಷಿಪ್ತ ವಿವರಣೆ ನೀಡುತ್ತ ಧ್ವನಿಮುದ್ರಣ ಮಾಡಿಸಬೇಕು. ಮಾಡಿಸಬೇಕು ಎನ್ನುವುದರ ತಾತ್ಪರ್ಯವಿಷ್ಟೇ. ಕ್ಯಾಸೆಟ್ ಕಂಪನಿಗಳು ಇದರಿಂದ ಲಾಭವಾದೀತೊ ಇಲ್ಲವೊ ಎನ್ನುವ ಸಂದೇಹ ತಾಳುವುದು ಸಹಜ. ಎಲ್ಲ ಮಠಗಳು ತಲಾ ನೂರೋ ಇನ್ನೂರೋ, ಐನೂರೋ ಕ್ಯಾಸೆಟ್‌ಗಳ ಹಣ ಮುಂಗಡ ಕೊಟ್ಟು ಕ್ಯಾಸೆಟ್ ಕಂಪನಿಗಳನ್ನು ಪ್ರೇರೇಪಿಸಬೇಕು. ತಾವು ಕೊಂಡ ಕ್ಯಾಸೆಟ್‌ಗಳನ್ನು ಭಕ್ತಾದಿಗಳಿಗೆ ಹಂಚಬೇಕು. ಅಂದರೆ ತೊಡಗಿಸಿದ ದುಡ್ಡು ವಾಪಸು ಬರುತ್ತದೆ. ಆ ಕ್ಯಾಸೆಟ್‌ಗಳನ್ನು ತಮ್ಮ ತಮ್ಮ ಮಠಗಳ ಸುಪ್ರಭಾತದಲ್ಲಿ, ಸಮಾರಂಭಗಳಿಗೆ ಮುನ್ನ ಕೇಳಿಸಬೇಕು. ಕ್ಯಾಸೆಟ್ ಹೊರಬಂದ ಮೇಲೆ ಅವುಗಳನ್ನು ಪತ್ರಿಕೆಗಳಿಗೆ ವಿಮರ್ಶೆಗಾಗಿ ಕಳಿಸಬೇಕು. ಪತ್ರಿಕೆಗಳಲ್ಲಿ ಸ್ವರವಚನಗಳ ಬಗೆಗೆ ಲೇಖನ ಬರೆಸಬೇಕು.

ಇನ್ನು, ಪ್ರಬಲ ದೃಶ್ಯ ಸಮೂಹ ಮಾಧ್ಯಮವಾದ ದೂರದರ್ಶನವನ್ನು ಸ್ವರವಚನಗಳ ಪ್ರಸಾರಕ್ಕೆ ಬಳಸಿಕೊಳ್ಳಬೇಕು. ಪ್ರಾಯೋಜಕರನ್ನು ಹುಡುಕಿ ಅರ್ಧರ್ಧ ಘಂಟೆಯ ಸ್ವರವಚನ ಕಾರ್ಯಕ್ರಮಗಳನ್ನು ಪ್ರಸಾರ ಮಾಡಬೇಕು. ಯಾರೂ ಪ್ರಾಯೋಜಕರು ಮುಂದೆ ಬರದಿದ್ದರೆ ಮಠಗಳು ತಾವೇ ಮುಂದಾಗಿ

ಪ್ರಾಯೋಜಕರಾಗಬಹುದು. ಒಟ್ಟಿನಲ್ಲಿ, ಸ್ವರವಚನಗಳು ಪ್ರಸಾರವಾಗಬೇಕು, ಜನಮನವನ್ನು ತಲುಪಬೇಕೆಂಬ ಗುರಿ ಗಟ್ಟಿಯಾಗಿದ್ದರೆ ಇದೆಲ್ಲ ಸಾಧ್ಯ.

ಇನ್ನೂ ಒಂದು ಗ್ರಾಮೀಣ ಮಾಧ್ಯಮವುಂಟು. ಅದನ್ನು ದುಡಿಸಿಕೊಂಡರೆ ಸ್ವರವಚನಗಳ ಪ್ರಸಾರ ವ್ಯಾಪಕವಾಗಿ ಆಗುವುದು. ಎಂಥ ದೂರದರ್ಶನ ಯುಗವೆಂದರೂ ಪ್ರತಿಯೊಂದು ಹಳ್ಳಿಯಲ್ಲಿ ಒಂದೋ ಎರಡೋ ಭಜನಾಮೇಳ ಇದ್ದೇ ಇರುತ್ತವೆ. ಆದರೆ, ಚಲನಚಿತ್ರಗಳ ಪ್ರಭಾವದಿಂದ ಭಜನೆಗಳ ಧಾಟಿಯಲ್ಲೂ ಚಿತ್ರಗೀತೆಗಳ ಅನುಕರಣ ನಡೆದಿದೆ. ಭಜನೆಯೆಂದರೆ ಗಟ್ಟಿಯಾಗಿ ಚೀರುವುದು, ವೇಗವಾಗಿ ತಬಲಾ ಪೇಟಿ ನುಡಿಸುವುದು ಎಂಬ ತಪ್ಪು ಅಭಿಪ್ರಾಯ ಬೇರೂರಿದೆ. ಅದರ ಬದಲು ಸ್ವರವಚನಗಳಂಥ ಉದಾತ್ತ ಗೀತೆಗಳನ್ನು ಒಳ್ಳೊಳ್ಳೆ ಧಾಟಿಗಳಲ್ಲಿ ಸಂಯೋಜಿಸಿ ಭಜನಾಮೇಳಗಳಿಗೆ ಕಲಿಸಬೇಕು. ಪ್ರತಿಯೊಂದು ಮಠ ತನ್ನ ಸುತ್ತಮುತ್ತಲಿನ ಭಜನಾಮೇಳಗಳ ಕಮ್ಮಟ ಏರ್ಪಡಿಸಿ ಸ್ವರವಚನಗಳನ್ನು ಹಾಡುವ ತರಬೇತಿಯನ್ನು ನುರಿತ ಸಂಗೀತಗಾರರಿಂದ ನೀಡಿಸಬೇಕು.

ಇನ್ನೊಂದು ಮಾಡಬಹುದಾಗಿದೆ. ಅದಕ್ಕೆ ಗಟ್ಟಿಗತನ ಬೇಕು. ಸಿಕ್ಖರು ಗುರುದ್ವಾರಾಗಳಲ್ಲಿ ೨೪ ಗಂಟೆಗಳೂ ಶಬದ (ಶಬ್ದ=ವಾಣಿ, ದೇವವಾಣಿ, ಸಂತವಾಣಿ) ಕೀರ್ತನೆ ಮಾಡುತ್ತಾರೆ. ಪಕ್ಕವಾದ್ಯಗಳೊಂದಿಗೆ ಶಬದ ಹಾಡುತ್ತಾರೆ. ಆ ರೀತಿ ಮಠಗಳಲ್ಲಿ ಸ್ವರವಚನಗಳನ್ನು ಹಾಡಬಹುದಾಗಿದೆ. ಕಡೆ ಪಕ್ಷ ಸ್ವರವಚನಗಳ ಕ್ಯಾಸೆಟ್ಟಾದರೂ ಹಾಕಬಹುದು.

ಇಷ್ಟೆಲ್ಲಕ್ಕೂ ಮೊದಲು ಸ್ವರವಚನಗಳನ್ನು ಸಂಗೀತಕ್ಕೆ ಅಳವಡಿಸಬೇಕು. ಅಂದರೆ ಮಾತ್ರ ಮಿಕ್ಕೆಲ್ಲ ಸಾಧ್ಯ. ಇಂಥ ಪ್ರಯತ್ನವೊಂದು ಧಾರವಾಡದಲ್ಲಿ ಕುಡಿಯಿಟ್ಟಿದೆ. ೧೯೯೫ರ ಶಿವರಾತ್ರಿಯಂದು ಬಸವರಾಜ ರಾಜಗುರು ಶಿಷ್ಯ ಶ್ರೀಪಾದ ಹೆಗಡೆ ಅವರ ಭಕ್ತಿಸಂಗೀತ ಕಾರ್ಯಕ್ರಮ ಗದುಗಿನ ತೋಂಟದಾರ್ಯ ಮಠದಲ್ಲಿತ್ತು. ಶ್ರೀಮಠ ಪ್ರಕಟಿಸಿದ ಎಲ್ಲ ಸ್ವರವಚನ ಪುಸ್ತಕಗಳನ್ನು ಶ್ರೀಪಾದರಿಗೆ ಕೊಡಿಸಿದೆ. ಅವುಗಳ ಬಗೆಗೆ, ಅವುಗಳಲ್ಲಿ ಅಂತರ್ಗತವಾದ ಸಂಗೀತದ ಬಗೆಗೆ ಅವರ ತಲೆ ಕೆಡಿಸತೊಡಗಿದೆ. ಇಂದು ಅವರು ಮೂರು ನಾಲ್ಕು ಘಂಟೆಯವರೆಗಿನ ಸ್ವರವಚನ ಗಾಯನ ಕಾರ್ಯಕ್ರಮ ನೀಡುವ ಸಿದ್ಧತೆ ಮಾಡಿಕೊಂಡಿರುವರು. ಅವುಗಳನ್ನು ವೈವಿಧ್ಯಮಯ ಧಾಟಿಗಳಲ್ಲಿ ಸಂಯೋಜಿಸಿದ್ದಾರೆ: ಶಾಸ್ತ್ರೀಯ ಸಂಗೀತದ ಧಾಟಿಗಳು, ಲಘು ಶಾಸ್ತ್ರೀಯ ಸಂಗೀತದ ಧಾಟಿಗಳು, ಜಾನಪದ ಧಾಟಿಗಳು, ಅಭಂಗ ಧಾಟಿಗಳು, ಭಾವಗೀತೆ ಧಾಟಿಗಳು ಇತ್ಯಾದಿ.

ಸ್ವರವಚನ ಸಾಹಿತ್ಯಿಕವಾಗಿಯೂ ಸಂಗೀತಾತ್ಮಕವಾಗಿಯೂ ಅಮೂಲ್ಯ ಸಂಪತ್ತು. ಆ ಸಂಪತ್ತನ್ನು ಸಂರಕ್ಷಿಸುವುದೊಂದು ಮಣಿಹ.



# ಸ್ವರವಚನದ ವಸ್ತುಸ್ವರೂಪ

*ಜಿ.ಎ. ಶಿವಲಿಂಗಯ್ಯ*

ಮರ್ತ್ಯಲೋಕದವರ ಮನದ
ಮೈಲಿಗೆಯ ಕಳೆಯಲೆಂದು
ಗೀತ-ಮಾತೆಂಬ ಜ್ಯೋತಿಯ
ಬೆಳಗಿ ಕೊಟ್ಟರು ಕೂಡಲ ಚನ್ನಸಂಗನ ಶರಣರು

ಎಂದು ಚನ್ನಬಸವಣ್ಣನವರು ತಮ್ಮ ಒಂದು ವಚನದಲ್ಲಿ 'ಶರಣಸಾಹಿತ್ಯ'ವಾಣಿಯನ್ನು ಗೀತ-ಮಾತು ಎಂದು ಕರೆದಿದ್ದಾರೆ. ಅವನ ಮಾತಿನಂತೆ ಶರಣಸಾಹಿತ್ಯ ಎರಡು ಬಗೆಯಾಗಿದೆ. ಒಂದು: ಗೀತ. ಎರಡು: ಮಾತು. ಈ ಎರಡು ಬಗೆಗಳಲ್ಲಿ ಯಾವುದೂ ಒಂದಕ್ಕಿಂತ ಒಂದು ಮೇಲೂ ಅಲ್ಲ, ಕೀಳೂ ಅಲ್ಲ.

'ಗೀತ' ಎಂದರೆ ಶಿವಶರಣರು ರಚಿಸಿರುವ ಸ್ವರವಚನಗಳು ಎಂದೇ ತಿಳಿಯಬೇಕು. ಇದನ್ನೇ ಹಾಡುಗಳು, ಪದಗಳು, ತತ್ತ್ವದ ಪದಗಳು ಎಂದು ಪರ್ಯಾಯವಾಗಿ ಹಲವಾರು ಎಡೆಗಳಲ್ಲಿ ಕರೆಯಲಾಗಿದೆ. ಈ ಸ್ವರವಚನಗಳು ಸಂಗೀತ ಸಾರ್ವಭೌಮರಿಂದ ಮೊದಲ್ಗೊಂಡು ತನ್ನಿಷ್ಟ ಬಂದಂತೆ ಹಾಡಿಕೊಳ್ಳುವ ಸಾಮಾನ್ಯನವರೆಗೂ ಪ್ರಿಯವಾಗಿವೆ. ಸ್ವರವಚನಗಳು ಛಂದೋ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕೆಂಬ ವಿಧಿಗೆ ಒಳಗಾಗದೆ, ಬಹುಪಾಲು ಸ್ವಚ್ಛಂದವಾಗಿಯೂ ಸಾಗಿರುವುದು ಉಂಟು. ಆದರೂ ಮಾರ್ಗ ಅಥವಾ ಪ್ರೌಢತೆಯ ಸಂಪ್ರದಾಯಕ್ಕೆ ಕಾಲಿಡದಂತೆ ಎಚ್ಚರಿಕೆಯಿಂದಿರುವುದೂ ಬಹಳ ಮುಖ್ಯವಾಗಿದೆ. ಎಂದರೆ ಇವುಗಳ ರಚನೆಯು ದೇಸೀಯವಾಗಿರುವುದು ಅಷ್ಟೇ ಮುಖ್ಯವಾಗಿದೆ. ಇನ್ನು 'ಮಾತು' ಎಂದರೆ 'ವಚನ'ವೆಂದು ಪ್ರಸಿದ್ಧವಾಗಿರುವ ಸರ್ವಗ್ರಾಹ್ಯವಾಗಿರುವ ಶಿವಶರಣರ "ವಚನ" ಸಾಹಿತ್ಯ.

ಶರಣರು ರಚಿಸಿದ ಹಾಡುಗಳು, ಪದಗಳು, ತತ್ತ್ವದ ಪದಗಳನ್ನು ಮಾತ್ರ 'ಸ್ವರವಚನ'ಗಳು ಎಂದು ಕರೆದಿರುವುದು ವಿಶಿಷ್ಟವಾದುದು. ಹರಿದಾಸರ ಪದಗಳನ್ನು 'ಸ್ವರವಚನಗಳು' ಎಂದು ಕರೆದಿರುವುದು ಎಲ್ಲೂ ಕಂಡುಬಂದಿಲ್ಲ. ಇಲ್ಲಿ 'ಸ್ವರ'ವೆಂದರೆ (ಸಂಗೀತ) ರಾಗದಿಂದ ಕೂಡಿದುದು ಎಂಬ ಅರ್ಥ. ವಚನಗಳು ಸಂಗೀತಕ್ಕೆ ಅಳವಟ್ಟಾಗ, ಅಂದರೆ ಶಾಸ್ತ್ರೀಯವಾಗಿ ಗೇಯವಾದಾಗ ವಚನರಚನೆಯೂ ಕೊಂಚಮಟ್ಟಿಗೆ

ಬದಲಾಗಬೇಕು. ಈ ವಿಚಾರದಿಂದ ನೋಡಿದಾಗ ಸ್ವರವಚನಗಳು ಪಲ್ಲವಿ, ಮತ್ತು ನುಡಿಗಳಿಂದ ಕೂಡಿರುವುದು ಕಂಡುಬರುತ್ತದೆ.

ಶರಣರು ಸಮಾಜದ ಸರ್ವೋದಯಕ್ಕಾಗಿ ತತ್ತ್ವ, ಜ್ಞಾನ, ನೀತಿ, ಕಾಯಕ ಮುಂತಾದುವನ್ನು ವಚನಗಳ ಮೂಲಕ ಪ್ರಚಾರ ಮಾಡುವಾಗ ಅವರಿಗೆ ಸಂಗೀತದ ಮಾಧ್ಯಮದ ಅವಶ್ಯಕತೆ ಇತ್ತೆ? ಎಂಬ ಪ್ರಶ್ನೆಯು ಏಳಬಹುದು. ಸಂಗೀತ ರಹಿತವಾದ ವಚನಗಳ ಮೂಲಕವೇ ಈ ಕಾರ್ಯ ಅಧಿಕವಾಗಿ ನಡೆದಿದೆ. ಶರಣರಿಗೆ ಇದೆಲ್ಲವೂ ಗೊತ್ತು. ಆದರೆ, ಕೆಲವು ವೇಳೆ ರಾಗದ ಪ್ರಭಾವದಿಂದ ವ್ಯಕ್ತಿಯ ಮೇಲೆ ಪರಿಣಾಮ ಇನ್ನೂ ಅಧಿಕವಾಗುತ್ತದೆ ಎಂಬುದನ್ನು ಶರಣರು ಬಲ್ಲವರಾಗಿದ್ದರು.

ರಾಜನು ಆಸ್ಥಾನದಲ್ಲಿ ಸಪ್ತಾಂಗ ಪರಿವೇಷ್ಟಿತನಾಗಿರುತ್ತಾನೆ. ಇಲ್ಲದಿದ್ದರೆ ಅದು ರಾಜಸಭೆಯೇ ಅಲ್ಲ. ಆ ಸಪ್ತಾಂಗಗಳು ಯಾವುವೆಂದರೆ:

ವಿದ್ವಾಂಸ, ಕವಿ, ಗಾಯಕ, ಭಟ್ಟ, ಪರಿಹಾಸಕ, ಇತಿಹಾಸಜ್ಞ, ಪುರಾಣಿಕ ಇಂತಹ ರಾಜನ ಆಸ್ಥಾನದಲ್ಲಿ ಕಾವ್ಯದ ಪ್ರತಿನಿಧಿಯಾದ ಕವಿಯೂ, ಸಂಗೀತದ ಪ್ರತಿನಿಧಿಯಾದ ಗಾಯಕನೂ ಬಂಧಿತರಾಗಿರುವುದು ವ್ಯಕ್ತವಾಯಿತು. ಈ ಇಬ್ಬರನ್ನೂ ರಾಜಸಭೆಯಿಂದ ಎಳೆದು ತಂದು ಜನಸಾಮಾನ್ಯರ ಮಧ್ಯಕ್ಕೆ ನಿಲ್ಲಿಸಿದ ಶರಣರ ಮಹತ್ಸಾಧನೆ ಸಾಮಾನ್ಯವಾದುದಲ್ಲ.

ಶರಣರು ಸಂಪ್ರದಾಯ ಪಾಲಕರಲ್ಲ, ಜನತೆಯ ಹಿತಕ್ಕಾಗಿ ಸಂಪ್ರದಾಯವನ್ನೂ ಮುರಿಯುತ್ತಾರೆ. ಸಾಹಿತ್ಯದಲ್ಲಿ ಇದಕ್ಕೆ ನಿದರ್ಶನವಿದೆ. ಸ್ವರವಚನಗಳಲ್ಲಿ ಗೇಯಾನುಕೂಲವಾದ ನುಡಿಗಳು ಛಂದಸ್ಸಿನ ರೀತಿಯಲ್ಲಿ ಬರಬೇಕು. ಆದರೆ ಛಂದಸ್ಸಿನ ನಿಯಮವನ್ನು ಮೀರಿರುವುದಕ್ಕೆ ಒಂದು ಉದಾಹರಣೆಯನ್ನು ಕೊಡಬಹುದು. ಷಟ್ಪದಿ ಛಂದಸ್ಸಿನ ನುಡಿಗಳಲ್ಲಿ ನ್ಯಾಯವಾಗಿ ಆರು ಸಾಲುಗಳು ಇರಬೇಕು. ಆದರೆ ಒಂದು ಸ್ವರವಚನದಲ್ಲಿ ಛಂದಸ್ಸು ಷಟ್ಪದಿಯಲ್ಲಿದ್ದರೂ, ಪಾದಗಳು ಒಂಬತ್ತು ಆಗಿರುತ್ತವೆ. ಎಂದರೆ ಇವರಲ್ಲಿ ಸಾಹಿತ್ಯದಲ್ಲಿ ಪ್ರಯೋಗಶೀಲತೆಯೂ ಇತ್ತು ಎಂಬುದು ವ್ಯಕ್ತವಾಗುತ್ತದೆ. ಇನ್ನೊಂದು ಮುಖ್ಯವಾದ. ವಿಷಯವನ್ನು ತಿಳಿಸಿ ಪ್ರಬಂಧದ ವಿಷಯಕ್ಕೆ ಬರುತ್ತೇನೆ. ಇಟಲಿಯ ಒಬ್ಬ ಕವಿ ಪೆಟ್ರಾರ್ಕ್ ಎಂಬುವನು ೧೩೭೪ರಲ್ಲಿ ಗತಿಸಿದನು. ಈತನು ಭಾವಗೀತೆಗಳ ಪ್ರಸಾರದಲ್ಲಿ Sonnet ಎಂಬುದಕ್ಕೆ ಆದ್ಯಪ್ರವರ್ತಕ ಎಂದು ತಿಳಿದು ಬಂದಿದೆ. ಈ ಪ್ರಕಾರವು ಇಟಲಿಯಿಂದ ಇಂಗ್ಲೆಂಡಿಗೆ ಹೋಗಿ ಶೇಕ್ಸ್‌ಪಿಯರ್, ವರ್ಡ್ಸ್‌ವರ್ತ್ ಮುಂತಾದ ಮಹಾಕವಿಗಳಿಂದ ಜಗತ್ಪ್ರಸಿದ್ಧವಾಯಿತು. ಸಾನೆಟ್ ಎಂಬುದು ೧೪ ಸಾಲುಗಳ ಒಂದು ಪದ್ಯ, ಅಥವಾ ಭಾವಗೀತೆ. ೬ ಸಾಲಿನ ಒಂದು ನುಡಿ, ಮತ್ತು ೮ ಸಾಲಿನ ಮತ್ತೊಂದು ನುಡಿ ಕೂಡಿ ೧೪ ಸಾಲಿನ ಒಂದು ಭಾವಗೀತೆಯಾಗಬಹುದು. ಇಲ್ಲವೆ ೨ ಸಾಲಿನ ಒಂದು ನುಡಿಯಿದ್ದು ಮತ್ತು ೪ ಸಾಲಿನ ೩ ನುಡಿಗಳಿಂದ ಕೂಡಿ ಒಟ್ಟು ೧೪ ಸಾಲಿನ ಸಾನೆಟ್ ಆಗಬಹುದು. ಇದೇ ಸಾನೆಟ್ ಪ್ರಕಾರದ ಭಾವಗೀತೆ. ಇಂತಹ ಒಂದು ಸಾನೆಟ್ ಪ್ರಕಾರವು ೧೨ ನೆಯ ಶತಮಾನದಲ್ಲಿ ಶಿವಶರಣರಿಂದ ಕರ್ನಾಟಕದಲ್ಲಿ ಪ್ರಾರಂಭವಾಗಿತ್ತು

ಎಂದರೆ ನಿಜಕ್ಕೂ ನಾವು ಹೆಮ್ಮೆ ಪಡಬೇಕು. ಪಾಶ್ಚಾತ್ಯ ವಿದ್ವಾಂಸರು ಭಾರತಕ್ಕೆ ಬಂದು ಇಲ್ಲಿನ ಭಾಷೆ, ಸಾಹಿತ್ಯ, ಸಂಸ್ಕೃತಿ ಮೊದಲಾದವುಗಳನ್ನು ಹುಡುಕುತ್ತಿದ್ದಾಗ ಕನ್ನಡ ಸಾಹಿತ್ಯದ ಸ್ವರವಚನಗಳು ಸಿಕ್ಕು ಈ ಸಾನೆಟ್‌ಗಳು ಅವರಿಗೆ ಪರಿಚಯವಾಗಿದ್ದಿದ್ದರೆ, ಈ ವಿಷಯವು ವಿಶ್ವಕೋಶದಲ್ಲಿ ದಾಖಲಾಗಿ ಪೆಟ್ರಾರ್ಕನ ಹೆಸರೇ ಇಲ್ಲವಾಗಿ ಶಿವಶರಣರೇ ಈ ಸಾನೆಟಿಗೆ ಆದ್ಯ ಪ್ರವರ್ತಕರೆಂದು ತಿಳಿಸುತ್ತಿತ್ತು.

ಸುಮಾರು ೧೯೩೦ಕ್ಕೆ ಹಿಂದೆ 'ಸ್ವರವಚನಗಳು' ಎನ್ನುವ ಹೆಸರಿನ ಅಚ್ಚಾದ ಪುಸ್ತಕಗಳು ನನ್ನ ಕಣ್ಣಿಗೆ ಬಿದ್ದಂತಿಲ್ಲ. ವೀರಶೈವ ವಾಗ್ಗೇಯಕಾರರಾದ

| | |
|---|---|
| ನಿಜಗುಣಶಿವಯೋಗಿಗಳ | ಕೈವಲ್ಯಪದ್ಧತಿ |
| ಸರ್ಪಭೂಷಣರ | ಕೈವಲ್ಯ ಕಲ್ಪವಲ್ಲರಿ |
| ಮುಪ್ಪಿನ ಷಡಕ್ಷರಿಗಳ | ಕೈವಲ್ಯಪದ |
| ಬಾಲಲೀಲಾ ಮಹಂತ ಶಿವಯೋಗಿಗಳ | ತತ್ತ್ವದ ಪದಗಳು |
| ಘನಮಠ ನಾಗಭೂಷಣ ಶಿವಯೋಗಿಗಳ | ತತ್ತ್ವದ ಪದಗಳು |
| ಶಾಲ್ಯದ ಕೃಷ್ಣರಾಜರ | ಭಕ್ತಿ ಸರೋವರ |
| | ಜ್ಞಾನ ಸರೋವರ |

ಎಂಬ ಬೆರಳು ಎಣಿಕೆಗೆ ನಿಲುಕುವಷ್ಟು ಕೃತಿಗಳು ಮಾತ್ರ ಪ್ರಚಾರದಲ್ಲಿದ್ದುವು. ಉಳಿದ ಅಸಂಖ್ಯಾತ ಪದಗಳು ಓಲೆಗರಿಯ ಕಟ್ಟಿನಲ್ಲಿಯೇ ಶ್ರದ್ಧೆಯಿಂದ ಅಭ್ಯಾಸ ಮಾಡಿದವರ ಬಾಯಿಪಾಠದಲ್ಲಿಯೂ ಇದ್ದು, ಬಹಳಷ್ಟು ಜನರಿಗೆ ಇವುಗಳ ತತ್ತ್ವಸಂಪತ್ತು ದೊರೆತಿರಲಿಲ್ಲ. ಶರಣರ ಪರಿಭಾಷೆಯಲ್ಲಿಯೇ ಹೇಳುವುದಾದರೆ "ಇವೆಲ್ಲ ಇದ್ದುವು ಇಲ್ಲದಂತೆ" ಎಂದು ಹೇಳಬಹುದು. ಗದುಗಿನ ಶ್ರೀ ತೋಂಟದಾರ್ಯ ಸಂಸ್ಥಾನ ಮಠದಲ್ಲಿ ಹತ್ತು ಸ್ವರವಚನಗಳ ಪುಸ್ತಕಗಳು ಪ್ರಕಟವಾಗಿರುವುದು ಒಂದು ವಿಕ್ರಮವೆಂದೇ ಹೇಳಬೇಕು. ಇನ್ನು ಬೇರೆ ಬೇರೆ ಮಠದ ಮಹಾಸ್ವಾಮಿಗಳು ಕೆಲವು ಸ್ವರವಚನಗಳನ್ನು ಪ್ರಕಟಿಸಿರುತ್ತಾರೆ. ಪ್ರಸ್ತುತ 'ಶ್ರೀ ಶಿವರಾತ್ರೀಶ್ವರ ಧಾರ್ಮಿಕ ದತ್ತಿ'ಯ ಆಶ್ರಯದಲ್ಲಿ ಸುಮಾರು ಹದಿನೈದು ಸಂಪುಟಗಳ ಪ್ರಕಟಿಸುವ ಯೋಜನೆ ಸಂಕಲ್ಪಗೊಂಡಿದೆ. ಈಗಾಗಲೇ ೫ ಸಂಪುಟಗಳು ಹೊರಬಂದಿರುವುದು ತಿಳಿದ ವಿಷಯವಾಗಿದೆ. ಈ ಕಾರ್ಯಕ್ರಮವು "ಇನ್ನು ಸ್ವರವಚನಗಳು ಕತ್ತಲೆಯಲ್ಲಿ ಇರಲು ಬಿಡುವುದಿಲ್ಲ" ಎಂಬುದಾಗಿ ಘೋಷಿಸಿರುವಂತೆ ಕಂಡುಬರುತ್ತದೆ.

ಸ್ವರವಚನಗಳು ಒಂದು ರೀತಿಯಲ್ಲಿ ಭಾವಗೀತೆಗಳಾಗಿವೆ. ಅಲೌಕಿಕ ಅನುಭವಗಳನ್ನು ಲೌಕಿಕ ಅನುಭವದ ಮೂಲಕ ಅಭಿವ್ಯಕ್ತಗೊಳಿಸಿ ಮಾನವನ ಮನಸ್ಸನ್ನು ಸಂಸ್ಕಾರಗೊಳಿಸಿದ್ದಾರೆ ಶಿವಶರಣರು. ಇದರ ವಸ್ತು ಪ್ರಧಾನವಾಗಿ "ವಸ್ತು"ವಿನಲ್ಲಿ ಸಂಯೋಗವಾಗುವುದೇ ಆಗಿರುತ್ತದೆ. ಇದೇ ಕಾರಣವಾಗಿ ಸತಿ-ಪತಿಭಾವ, ವಿರಹಭಾವ, ಮೊದಲಾದವು ಇರುತ್ತವೆ. ಕೆಲವು ಸ್ವರವಚನಗಳು ಸಮಷ್ಟಿಯಲ್ಲಿ ಷಟ್‌ಸ್ಥಲ, ಅಷ್ಟಾವರಣ, ನೂರೊಂದು ಸ್ಥಲ, ಇನ್ನೂರ ಹದಿನಾರು ಸ್ಥಲಗಳೇ ಮೊದಲಾದ ಸಿದ್ಧಾಂತ ನಿರೂಪಣೆಗಳೇ ವಸ್ತುವಾಗಿರುತ್ತವೆ. ಪರವಸ್ತುವನ್ನು ಕುರಿತ ಪ್ರಾರ್ಥನೆಗಳಂತೂ ಅತ್ಯಂತ

ಮನೋಹರವಾಗಿರುತ್ತವೆ. ಇವುಗಳಲ್ಲಿ ಭಕ್ತನು ಭಗವಂತನಿಗೆ ಎಷ್ಟು ನಿಕಟನಾಗಿದ್ದಾನೆ, ಎಷ್ಟು ಸಲುಗೆಯಿಂದ ಇದ್ದಾನೆ ಎಂಬುದು ತಿಳಿದುಬರುತ್ತದೆ. ಕೆಲವು ಸ್ವರವಚನಗಳಲ್ಲಿ ಗೊತ್ತು ಗುರಿಯಿಲ್ಲದೆ ಎಲ್ಲವನ್ನೂ ಹೇಳಿಕೊಂಡು ಸಾಗುತ್ತವೆ. ಇನ್ನೂ ಕೆಲವುಗಳಲ್ಲಿ ನೀತಿ ನಿರೂಪಣೆಯೂ ಇರುತ್ತದೆ. ಮತ್ತೆ ಕೆಲವುಗಳಲ್ಲಿ ಶರಣರ ಲಿಂಗೈಕ್ಯದ ವಿಷಯಗಳು ನಿರೂಪಿತವಾಗಿ ಚರಮಗೀತೆಯಾಗಿರುತ್ತವೆ. ಒಟ್ಟಿನಲ್ಲಿ ಸ್ವರವಚನಗಳೆಲ್ಲವೂ ಅನುಭಾವಿಕ ಹಿನ್ನೆಲೆಯಲ್ಲಿರುವುದು ಗಮನಾರ್ಹ.

ವಸ್ತು ಎಂದರೆ ಜೀವಾತ್ಮ ಎಂಬ ಅರ್ಥವಿದ್ದರೂ ಅನುಭಾವಿಕ ಗೀತೆಗಳಲ್ಲಿ ಪರಾತ್ಪರವಸ್ತು ಎಂದೇ ಕರೆಯಲಾಗಿದೆ. ಈ ವಸ್ತುವಿನ ಸ್ವರೂಪವನ್ನು ಬಹಳ ಸರಳವಾಗಿ ತಿಳಿಸಿಕೊಡುವ ಈ ಸ್ವರವಚನವನ್ನು ನೋಡಿ -

ಅಲ್ಲ ಅಲ್ಲನೆಂದು ಗುರುವೆ ನಿಮ್ಮ ಬರಿದೆ
ಬಲ್ಲಿದ ಮುಸಲಮಾನರು ಕರೆವರದೇಕೋ ||ಪ||

ಜಗವ ಪುಟ್ಟಿಸುವ ಜಗದೊಳಗೆ ಬೆರೆವನಲ್ಲ
ಬಗೆಬಗೆಯ ಭಜನೆಯ ಬಲೆಗೆ ಸಿಕ್ಕುವನಲ್ಲ
ಗಗನಾದಿ ಪಂಚಭೂತದ ರೂಪು ತಾನಲ್ಲ
ಮಿಗೆ ತನ್ನನರಿವರ ಮನಕೆ ಗೋಚರನಲ್ಲ
ಸಗುಣ ರೂಪನಲ್ಲ ಸಕಲರೊಳು ಬೆರಸಿಪ್ಪನಲ್ಲ
ನಿಗಮ ವಿದೂರನಲ್ಲ ವಿಚಾರಿಸೆ ಅನ್ಯನಲ್ಲ ||೧||

ಭೇದವಾದಿಗಳ ತರ್ಕಕೆ ನಿಲುಕುವನಲ್ಲ
ಮೇದಿನಿಯೊಳು ಬಿಂದು ಕಳೆಗಳ ರೂಪು ತಾನಲ್ಲ
ಭೇದಿಸಿದಜಹರಿಗಳಿಗೆ ಕಾಣಿಸನಲ್ಲ
ಚೋದ್ಯದಿಂ ಭಾವಿಪರಿಗೆ ವೇಧಿಸಿ ತೋರ್ಪನಲ್ಲ
ಬೋಧರೂಪಕ ನೀನಲ್ಲ ಬೋಧಿಪ ಗುರುವಿರಲು ನೀನಲ್ಲ
ಮೇದಿನಿಯೊಳು ಬೆಳಕಿನಾ ಬಗೆಗೆ ನಿಲುಕುವನಲ್ಲ ||೨||

ಕರಣೇಂದ್ರಿಯಂಗಳ ಕಾಟದವನಲ್ಲ,
ಮೆರೆವಷ್ಟ ಮದಗಳ ಹಮ್ಮಿನವನೇ ಅಲ್ಲ
ಅರಿಷಡುವರ್ಗನಲ್ಲ, ತಾಪತ್ರಯ ಭ್ರಮಿತನಲ್ಲ
ಪರಿದಾಡುತಿಹ ದಶವಾಯುರೂಪನಲ್ಲ
ಪೂರೆಯಾಗಿ ತೋರುವ ಸಪ್ತವ್ಯಸನದವನಲ್ಲ
ನೆರೆ ಏಕವಾಗಿಹ ಪೀಠತ್ರಯದೊಳು ಗಂಗೇಶ ನೀನಲ್ಲ ||೩||

ಈ ಸ್ವರವಚನದಲ್ಲಿ ಅಲ್ಲ, ಅಲ್ಲ ಎನ್ನುವ ಶಬ್ದ, ಉಪನಿಷತ್ತಿನಲ್ಲಿ ಭಗವತ್ ಸ್ವರೂಪವನ್ನು ನೇತಿ ನೇತಿ ಎಂದು ಹೇಳಿರುವುದನ್ನು ನೆನಪಿಗೆ ತಂದುಕೊಡುತ್ತದೆ.

ಇದುವರೆಗೂ ಅಜ್ಞಾತನಾಗಿದ್ದ ಇದರ ಕರ್ತೃ ಈಗ ಬಯಲಿಗೆ ಬಂದಿದ್ದಾನೆ. ಇವನ ಹೆಸರು ಹೊನ್ನ ಎಂಬುದಾಗಿ. ಇವನನ್ನು ಬೆಳಕಿಗೆ ತಂದವರು ತುಮಕೂರಿನ ಡಾ. ನಂಜುಂಡಸ್ವಾಮಿ ಅವರು.

ಜಾಣನಾದ ಭಕ್ತನು ಲೌಕಿಕ ಪಾರಮಾರ್ಥವೆರಡನ್ನು ಹೇಗೆ ಸರಿದೂಗಿಸಿಕೊಂಡು ಹೋಗುತ್ತಾನೆ ಎಂಬುದೇ ವಸ್ತುವಾಗುಳ್ಳ ನಿಜಗುಣಶಿವಯೋಗಿಗಳ ಸ್ವರವಚನ ಎಷ್ಟು ಮನೋಹರವಾಗಿದೆ ನೋಡಿ:

ಜಾಣನು ಲೌಕಿಕ ಪರಮಾರ್ಥವೆರಡನು
ಮಾಣದೆ ಕೂಡಿ ನಡೆಸುತಿಹನೆಂತು ||ಪ||

ತರುಣಿಯ ಮೊಲೆಯೊಂದನುಣುತಲಣುಗೇನನ್ನ
ಕರದೊಳುಳಿದ ಕುಚಾಗ್ರವನೋವುವಂತೆ
ನರಜನ್ಮವಿಡಿದಿಹ ಭೋಗಾನುಭವದೊಳು
ಪರಲೋಕಗತಿಯ ಸಾಧನದೊಳೊಂದಿಹನು ||೧||

ಕೊಳನ ಹೊಕ್ಕರೆಯೊಡಲಿನ ತಂಪು ಬಿಸಿಲಿನ
ಜಳವನು ಮಿಕ್ಕ ಮೈಯೊಳು ಕಾಣ್ಬನಂತೆ
ತಿಳಿವಿನ ಸುಖವನು ವಿಷಯ ಬಾಧೆಯನು ಸಂ
ಗೊಳಿಸುತೆ ಸಮಯವೊಂದರೊಳೈದುತಿಹನು ||೨||

ಪರದ ಸಂಗವ ಸೊಗಸನು ಮರೆಯದೆ
ಪುರುಷನೊಳೋದುವ ಪುಂಶ್ಚಲಿಯಂತೆ
ಗುರುಶಂಭುಲಿಂಗದ ನೆನಹು ನೆಲಸಿ ಬಾಹ್ಯ
ಪರಿಹರದಭಿರತಿಯನು ಪಿಂಗದಿಹನು ||೩||

ಪರವನ್ನೇ ನಂಬಿದವನು ಇಹದವರಿಗೆ ವಿಚಿತ್ರ ವ್ಯಕ್ತಿಯೂ ಭಾರವಾದವನೂ ಆಗುತ್ತಾನೆ. ಇಹವನ್ನೇ ನಂಬಿದವನು ದುರಾಶಾಪೀಡಿತನೂ ಕಾಮುಕನೂ ಸಂಸ್ಕೃತಿಯುಳ್ಳವನೂ ಆಗುತ್ತಾನೆ. ಆದರೆ ಲೌಕಿಕವನ್ನೂ ಬಿಡದೆ ಪರಮಾರ್ಥವನ್ನೂ ಬಿಡದೆ ಕಮಲ ಪತ್ರದ ನೀರಿನಂತೆ ಅವನು ಬಾಳು ಸಾಗಿಸುವುದು ನಿಜಕ್ಕೂ ಅಚ್ಚರಿಯಲ್ಲವೆ? ಇದಕ್ಕೆ ಬಸವಣ್ಣನವರ ಜೀವನವೇ ಸಾಕ್ಷಿಯಾಗಿದೆ.

ಯಾವುದೇ ಧರ್ಮ ಸೈದ್ಧಾಂತಿಕ ತಳಹದಿಯಿಲ್ಲದಿದ್ದರೆ ಅದಕ್ಕೆ ನೆಲೆ, ಬೆಲೆ ಎರಡೂ ಇರುವುದಿಲ್ಲ. ಆದುದರಿಂದಲೇ ವೀರಶೈವ ಧರ್ಮಸೌಧವು ಷಟ್‌ಸ್ಥಲ ಸಿದ್ಧಾಂತ ಅಸ್ತಿಭಾರದ ಮೇಲೆ ಭದ್ರವಾಗಿ ನಿಂತಿದೆ. ಈ ಸಿದ್ಧಾಂತವು ಸ್ವರವಚನಗಳಲ್ಲಿ ಮೊದಲಿಗೆ ಜಕ್ಕಣನ ಸಂಗ್ರಹದಿಂದ ತಿಳಿದುಬರುತ್ತದೆ. ಶರಣರು ರಚಿಸಿರುವ ಸ್ವರವಚನಗಳಲ್ಲಿ ಆಯ್ದು ಸಂಗ್ರಹಗೊಳಿಸಿದ ಇವನ ಕೃತಿಯೇ ನೂರೊಂದು ಸ್ಥಲ.

'ಶೀಲಸಂಪಾದನಾಸ್ಥಲ'ವೆಂಬ ಅವಾಂತರಸ್ಥಲದ ಸ್ವರವಚನವು ಬಸವಣ್ಣನವರದಾಗಿದೆ. ಇಲ್ಲಿ 'ಶೀಲ' ಎಂದ ತಕ್ಷಣವೇ ೬೪ ಶೀಲಗಳ ನೆನಪಾಗುತ್ತದೆ. ಆದರೆ ಇಲ್ಲಿನ ವಸ್ತುವೇ ಮತ್ತೊಂದು ತೆರನಾಗಿದೆ.

ಕಾಮ ಕ್ರೋಧ ಲೋಭ ಮೋಹ
ತಾಮಸ ಮದ ವಿಮಾತ್ಸರ್ಯಂಗಳ
ಸೀಮೆಗೆ ಸಿಲುಕದ ಶೀಲದೊಳಗೆ ಶಿವ
ತಾ ಮನೆಗಟ್ಟಿಹನನವರತ ||ಪ||

ಅಂಗ ಪ್ರಾಣಾಂತರ್ಬಹಿರಂಗವ
ನುಂಗಿಯುಗುಳುತಿಹ ಮಾಯಾ
ಸಂಗವ ಹಿಂಗದೆ ನಾನಾ ಶೀಲವ
ಹಿಡಿದಡೆ ಫಲಮೇನದರಿಂದ. ||೧||

ತನುಗುಣಗಳನಂಗೀಕರಿಸದೆ ಮ
ತ್ತನುಕರಿಸದೆ ಕರಣಾದಿ ವಿಕಾರವ
ನೆನಹನು ಲಿಂಗದೊಳಗೆ ಮುಟ್ಟಿಸ
ಬಲ್ಲಡೆ ತಾನದು ಶೀಲ. ||೨||

ಸೀಮೆಯ ಸಂಕಲ್ಪದ ಶೀಲದ ಮನ
ತಾಮಸದಲಿ ಮತಿಗೆಟ್ಟಿಹುದು
ತಾಮಸ ಸೀಮೆಯನರಿಯದೆ ನಿಜ ನಿ
ಸ್ಸೀಮೆಯೊಳಿರುತಿರ್ಪುದೆ ಶೀಲ ||೩||

ಶಿವಶರಣರನಂಬುವುದೇ ಶೀಲವು
ಅವಗುಣಗಳ ಹೊದ್ದಡದು ಶೀಲವು
ಶಿವದಾಸೋಹದೊಳೆರಡರಿಯದ
ಇರಬಲ್ಲಡೆಯಿದು ಶೀಲ ||೪ ||

ಅಂಗದೊಳಗೆ ಗುರು ಲಿಂಗದೊಳಗೆ ಮನ
ಜಂಗಮದೊಳು ಧನವರ್ಪಿತವಾಗಿ
ಲಿಂಗಾಲಿಂಗಿತವಾಗಿರಬಲ್ಲಡೆ ಸಂಗನೊಳದು ಶೀಲ. ||೫||

ಮುಟ್ಟಿನ ಷಡಕ್ಷರಿಗಳ ಕೈವಲ್ಯಪದ ಸಿದ್ಧಾಂತವೇ ಆಗಿದ್ದರೂ ಕ್ರಮವನ್ನನುಸರಿಸದ, ಭಕ್ತನ ಮನಸ್ಸು ಆಪ್ಯಾಯನವಾಗುವಂತೆ ಮಾತೃಸಂಹಿತೆಯಲ್ಲಿ ಬೋಧಿಸಿರುವಂತೆ ಕಂಡು ಬರುತ್ತದೆ. ಮಾನವನು ನಶ್ವರನೆಂದು ತಿಳಿಸುವ ವಸ್ತುವನ್ನುಳ್ಳ ಈ ಸ್ವರವಚನ ಬೆಡಗಿನಿಂದ ಕೂಡಿದೆ.

ಬಿಂಬದೊಳಗೆ ಒಂದು ಪ್ರಾಣವೆಂಬ ಸೂತ್ರ
ಬೊಂಬೆಯಂತೆ ಎಂದು ಇದ್ದರೊಂದು ದಿವಸ ಸಾವು ತಪ್ಪದು ||ಪ||

ಹುಟ್ಟುತೇನು ತಾ ತರಲಿಲ್ಲ, ಹೋಗುತೇನು ಒಯ್ಯಲಿಲ್ಲ
ಸುಟ್ಟುಸುಟ್ಟು ಸುಣ್ಣಾದರಳು ಆಯಿತಲ್ಲೋ ದೇಹ ||೧||

ಹೊಟ್ಟೆ ಬಲುಹು ಕೆಟ್ಟದೆಂದು ಇಷ್ಟು ಕಷ್ಟಮಾಡಿ ಪ್ರಾಣ
ಬಿಟ್ಟುಹೋಗುವಾಗ ಗೇಣು ಬಟ್ಟೆಯಿಲ್ಲವೋ ||೨||

ಅನ್ನ ವಸ್ತ್ರ ಭೋಗಿಯಾಗಿ ತನ್ನ ಸುಖವ ಅರಿತರಿಂದ
ಮಣ್ಣು ಪಾಲು ಆದಮೇಲೆ ಯಾರಿಗಾದಿತು ||೩||

ಬಿತ್ತಿ ಬೆಳೆದು ಉಂಡೇನೆಂದು ವ್ಯರ್ಥ ಚಿಂತೆ ಮಾಡಬೇಡ
ಸತ್ತು ಹೋದಮೇಲೆ ನಿನ್ನ ಅರ್ಥವ್ಯಾರಿಗೋ ||೪||

ಹೊನ್ನು ಹೆಣ್ಣು ಮಣ್ಣು ಮೂರು ತಣ್ಣಗಿರ್ದು
ಉಣ್ಣಲಿಲ್ಲ ಅಣ್ಣ ತಮ್ಮ ತಾಯಿ ತಂದೆ ಭ್ರಮಿಸಲಿಲ್ಲವೂ ||೫||

ಹತ್ತು ಎಂಟು ಲಕ್ಷ ಗಳಿಸಿ ಮತ್ತೆ ಸಾವುದೆಂದೂ ಪರರ
ಅರ್ಥಕಾಗಿ ಆಶೆಮಾಡಿ ನ್ಯಾಯವಾಡುತಾ ||೬||

ಬೆಳ್ಳಿ ಬಂಗಾರಿಟ್ಟುಕೊಂಡು ಒಳ್ಳೆ ವಸ್ತ್ರ ಧರಿಸಿಕೊಂಡು
ಳಳ್ಳ ಮರದಾ ಬೊಂಬೆಯಂತೆ ಆಡಿಹೋಯಿತೂ ||೭||

ಆರಳ ಆದರ ಮೇಲೆ ಗೆಜ್ಜೆ ಉರುಳಿತಲ್ಲಾ ನೀರಮೇಲೆ
ಗುಳ್ಳೆಯಂತೆ ಸಂವತ್ಸರವಾ ನೋಡಿರಕ್ಕಟಾ ||೮||

ಸತ್ಯ ಷಡಕ್ಷರಿಯಾ ಲಿಂಗ ಮೃತ್ಯುಜನರವಾಕ್ಯದಲ್ಲಿ
ಮುಕ್ತನಾದಮೇಲೆ ನಿನ್ನ ಸ್ತೋತ್ರ ಮಾಡುವೇ ||೯||

ಜೀವನ ಹುಟ್ಟುಸಾವಿನ ಚಕ್ರದಲ್ಲಿದೆ. ಶಿವನನ್ನು ನೆನೆಯದೆ ಬೇರೆ ಮಾರ್ಗವಿಲ್ಲ ಎಂಬುದೇ ಈ ಸ್ವರವಚನದ ವಿವರವಾದ ಅರ್ಥ.

ಸಿದ್ಧಾಂತವನ್ನು ಸ್ವರವಚನಗಳಿಂದ ತಿಳಿಸಿದ ಇಮ್ಮಡಿ ಮುರಿಗಾ ಗುರುಸಿದ್ಧರು ಬೇರೆ ಬೇರೆ ಸ್ವರವಚನಗಳನ್ನು ಬೋಧನೆಗೋಸ್ಕರವಾಗಿಯೇ ರಚಿಸಿರುವಂತೆ ಕಂಡುಬರುತ್ತದೆ. ಈ ಸ್ವರವಚನದ ವಸ್ತು ವಿವೇಕವನ್ನು ತಿಳಿಸುವುದು.

ನಿನ್ನ ನೀನೆ ತಿಳಿದು ನೋಡ ಸಕಲ ಜನ ನಿಂದೆಯು ಬೇಡ
ಭಿನ್ನ ಭಾವವನು ಬಿಟ್ಟು ಬಿನ್ನಣವಳವಟ್ಟುವಿಗ ||ಪ||

ದೇಹವನಾರ್ಮೆಯ ತಾನು ದೇಗುಲದಂತೆ ಎಲ್ಲರಿಗೆ
ಮೋಹದಕರಣಗಳು ತಾವು ಮೋಸದಾ ತೋರಿಕೆಗಳ್ಕೆಸೆ ||೧||

ಬೈದರು ಪರರೆನ್ನನೆಂದು ಬೈರೂಪಾದ ಮಾತನಾಡದಿರು
ಹದನೆ ನೀ ಬಯ್ಸು ಮರವೆಯ ಹಾದಿಯನವರೆ ಬೈದಪರು ||೨||

ಮಾರಿಯ ಮನೆಯೌತಣವು ಮರಿಯದ ಸಂಸಾರವು
ಕೂರಿತಹ ಕರ್ಮಾವಳಿಯೋ ಕುಶಲಿ ಶಿವಲಿಂಗದಿ ಬೆರೆಯೋ ||೩||

ನಿಜಗುಣರ ಸಮಕಾಲೀನರಾದ ಜಿಗುನಿ ಮರುಳಾರ್ಯರ ಸ್ವರವಚನಗಳು ಮನನ ಯೋಗ್ಯವಾಗಿವೆ. ಇವರು ಅತ್ಯಂತ ಪ್ರಸಿದ್ಧ ಶಿವತತ್ತ್ವವೇತ್ತರೆಂಬುದು ಅವರ ಸ್ವರವಚನಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ಶರಣನ ಇರವನ್ನು ವಿವರಿಸುವುದೇ ವಸ್ತುವಾಗಿರುವ ಇವರ ಸ್ವರವಚನವನ್ನು ಗಮನಿಸೋಣ.

ಎಂತಿಹನೆಂದುಪಮಿಸಬಹುದು
ಚಿಂತೆಯಳಿದ ನಿಭ್ರಾಂತ ಲಿಂಗನ ||ಪ||

ತಾರಾಪಥವ ಬಿಡದೆ ಚರಿಸುತ್ತಿಹ
ಮಾರುತನಂತೆ ಮನವು ಘನವ
ಸೇರಿ ಸಮಸ್ತ ವಿಷಯ ಸುಯಿಧಾನದೊಳು ಸಂ
ಚಾರವಡೆದು ಸುಖಿಸುವ ಘನಶರಣನ ||೧||

ಮಂದರಾದ್ರಿಯ ಕಂಪನವಡಗಿದಮೃತ
ಸಿಂಧು ಚಲನೆಯಳಿದಂದದಲಿ
ಒಂದುವರಿಯದಾನಂದ ಶರಧಿ ನಿ
ಷ್ಯಂದವಾದ ನಿರುಪಮ ಘನಶರಣನ ||೨||

ಇಂತು ಮನವು ಘನದಿಂದಗಲದೆ ಬಾ
ಹ್ಯಾಂತರ ವಿಷಯ ಸುಖಂಗಳನು
ಸಂತವಿಡುತ ಲಿಂಗದಿ ನಿಜಗುರುಸಿದ್ಧ
ಶಾಂತನಾಗಾಚರಿಸುವ ಘನ ಶರಣನ ||೩||

ಮನಸ್ಸು ಘನಲಿಂಗವನ್ನು ಬಿಡದೆ ಲೌಕಿಕ ವಿಷಯಗಳನ್ನು ಅನುಭವಿಸಿ ಅವಕ್ಕೆ ಅಧೀನನಾಗದೆ ಶಾಂತಿಯಿಂದ ಶಿವನನರ್ಚಿಸುವ ಶರಣನು ಘನವಲ್ಲವೇ?

ಹಾಗಲವಾಡಿ ಮುದ್ವೀರಸ್ವಾಮಿಗಳು ಹುಟ್ಟಿನಿಂದಲೇ ವಿರಕ್ತರು, ರಾಜ ಸುಖಕ್ಕಿಂತ ರಾಜಯೋಗವೇ ಮೇಲೆಂದು ನಿರ್ಣಯಿಸಿ ಅನುಭಾವಿಗಳಾದವರು. ಮುದ್ವೀರ ಸ್ವಾಮಿಗಳ ಕುಲದ ವಿಷಯವನ್ನೇ ವಸ್ತುವಾಗುಳ್ಳ ಈ ಸ್ವರವಚನವನ್ನು ನೋಡೋಣ:

ಕುಲಕ್ಕಾಕೆ ಹೋರುತಿಹರು ತನ್ನೊಳಿರುತಿರ್ಪ
ಹೊಲೆತನವನು ತಿಳಿಯದೆ ನರರು ||ಪ||

ಅಶನ ವ್ಯಸನ ವಸನಂಗಳು ಮೊದಲಾದ
ಪಸರದೊಳಗೆ ಮುಂಗಾಣದೆ ಮುಳುಗಿ
ಪುಸಿಯ ಸಂಸ್ಕೃತಿಯ ವಿಸರದ ಗಸಣಿಯೊಳು
ಹಸಗೆಡಲದುವೆ ಮಾದಿಗರ ಕುಲವು ||೧||

ತನುಕರಣೇಂದ್ರಿಯಗಳ ಪುಂಜದೊಳು ಸಿಲ್ಕಿ
ಕನಲಿ ಕಂಗೆಟ್ಟು ಕರ್‍ರನೆ ಕರಗಿ
ಮನಸಿನ ಮಾಯೆ ಮಹಾಘನವೆಂದದ
ರನುವರಿದಿಹುದೆ ಶೂದ್ರತೆಯಹುದು ||೨||

ಮರವೆಯರಿವೆಯೆಂಬುಭಯ ಬುದ್ಧಿ ಪೆರತಾಗಿ
ಬರಿಯ ದಿವ್ಯಾಕಾಶ ರೂಪವಾಗಿ
ಮೆರೆವ ಶ್ರೀಗುರು ಸಂಗಮೇಶನೊಳಗೆ ಮನ
ವೆರಕವಾಗಿಹುದೆ ಬ್ರಾಹ್ಮಣ ಕುಲವು ||೩||

ಸಿದ್ಧಲಿಂಗರ ಶಿಷ್ಯ ಪರಂಪರೆಯಲ್ಲಿ ಬರುವ ಕೆಸ್ತೂರದೇವರ ಸ್ವರವಚನಗಳು ತುಂಬ ಸರಳವಾಗಿ ರಚಿತವಾಗಿವೆ. ವೀರವಿರಾಗಿಯಾದ ಕೆಸ್ತೂರದೇವರು ಗುರುಸಿದ್ಧಲಿಂಗ ಅಂಕಿತದಲ್ಲಿ ತಮ್ಮ ಅನುಭಾವವನ್ನು ತಮ್ಮದೇ ಆದ ರೀತಿಯಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ. ಸದ್ವಿದ್ಯೆಯನ್ನೇ ವಸ್ತುವಾಗಿ ಉಳ್ಳ ಕೆಸ್ತೂರುದೇವರ ಸ್ವರವಚನವನ್ನು ಈಗ ನೋಡೋಣ.

ಓದಿದೊಡೇನು ಕೇಳಿದೊಡೇನು ಬಿಡದೆ
ನೋಡಿ ಲಿಂಗದಿ ಮನ ಮೂಡಿ ಮುಳುಗದೆ ||ಪ||

ಇದಿರ ಜರೆದು ತನ್ನ ಮೆರೆವುದೋದುಗಳಲ್ಲ
ಹದಿರು ಚದಿರು ಸದಮದ ಬಿಡದಾ
ಹದನನರಿಯದಿಹುದದು ಓದು ತಾನಲ್ಲ
ಪುದಿದು ಲಿಂಗದಿ ಪ್ರಾಣವೆರೆದುದು ಓದು ||೧||

ನುಡಿದಂತೆ ನಡೆ ನಡೆಯೊಳು ನುಡಿದುದೆ ಓದು
ಷಡುವರ್ಗಕರಣವ ಸುಡುವುದೋದು
ಬಿಡದೆ ಲಿಂಗದಿ ಮನವೊಡವೆರದುದೆ ಓದು
ದೃಢ ಚಿತ್ತವಿಲ್ಲದುದೇತರ ಓದು ||೨||

ವಚನವ ಹಾಡಿ ತಾ ರಚನೆಯ ನುಡಿದೊಂದ
ಯಾಚಿಸಿ ಬೇಡದೆ ಇಹುದದು ಓದು
ಅಚಲದಿ ಮನ ಭಾವ ಗುರುಸಿದ್ಧಲಿಂಗನ
ವಚನವರಿದಾಚರಿಸುವುದೇ ಓದು ||೩||

ದುರುಳರ ನಡುವೆ ಅಜ್ಞಾನಿಗಳ ನಡುವೆ ಬದುಕಿ ಬಾಳಿದ ಕೂಡಲೂರು ಬಸವಲಿಂಗ ಶರಣರು ಕೋರೈಸುವಂತಹ ಸ್ವರವಚನಗಳನ್ನು ರಚಿಸಿದ್ದಾರೆ. ಗುರುವಿನ ಚಮತ್ಕಾರವೇ ವಸ್ತುವಾಗುಳ್ಳ ಇವರ ಕೆಲವು ಸ್ವರವಚನಗಳು ನಿತ್ಯ ಪಠಣಯೋಗ್ಯವಾಗಿವೆ. ಅವುಗಳಲ್ಲಿ ಒಂದನ್ನು ನೋಡೋಣ.

ಗುರುದೇವ ಗುರುದೇವ ನೀ ಎನ್ನ ತಂದೆ
ಕರುಣಿಸಿ ಕರೆದರೆ ನಾ ನಂಬಿ ಬಂದೆ ||ಪ||

ನೀ ಕೊಟ್ಟ ವಾಕ್ಯವ ಎಂದಿಗು ಮರೆಯೆ। ಬೇಕೆಂದು ಲೋಕಕ್ಕೆ ಕರೆತಂದಿ ದೊರೆಯೆ ||೧||

ಬಡವನಿಗೆ ಭಾಗ್ಯವು ಎಡವಿ ದೊರೆತಂತೆ। ಕಡುಮೂರ್ಖನ ತಂದು ಮಾಡಿದೆ ನಿನ್ನಂತೆ ||೨||

ನರತನವಳಿದೆನ್ನ ಹರನ ಮಾಡಿದಿ ತಂದೆ। ಗುರುವು ಕೂಡಲೂರೇಶ ನೀ ಎನ್ನೊಳಗಿದ್ದೆ ||೩||

ಕಡಕೋಳದ ಮಡಿವಾಳಪ್ಪನವರು ಸ್ವಸ್ವರೂಪಜ್ಞಾನಿಗಳು. ಸಾವಿರಾರು ಸ್ವರವಚನಗಳನ್ನು ರಚಿಸಿದ್ದಾರೆ. ಸಾಮಾನ್ಯ ಜನರ ತಿಳುವಳಿಕೆಗೋಸ್ಕರವಾಗಿಯೇ ಇವರ ಹಾಡುಗಳು ಸರಳವಾಗಿವೆ. ಲೋಕದ ಮೂಢನಂಬಿಕೆ, ಆಚರಣೆಗಳನ್ನು ಕಂಡು ವಿಡಂಬನಾತ್ಮಕವಾಗಿ ಕೆಲವಾರು ಪದಗಳನ್ನು ಹಾಡಿದ್ದಾರೆ. ಪ್ರಾರ್ಥನೆ, ತತ್ತ್ವ, ವಿಡಂಬನೆ, ಮಹಿಮೆಗಳನ್ನು ವಸ್ತುವಾಗಿವುಳ್ಳ ಅನೇಕ ಸ್ವರವಚನಗಳು ಇವೆ. ಇವುಗಳಲ್ಲಿ ವಿಡಂಬನೆಯೇ ವಸ್ತುವಾಗುಳ್ಳ ಒಂದು ಸ್ವರವಚನವನ್ನು ಗಮನಿಸುವ.

ಏನೇನು ಹಗರಾಣ ಮಾಡುವರೀ। ಜನರು ಇದಕಾರಂಜುವರು
ಮಾನ ಅಪಮಾನ ಖೂನ ಅರಿಯದವರು। ಮಾನಗೇಡಿ ಮಾನವರು

ಹೆಂಡಕುಡುಕರಿಗೆ ಹಿತವನು ಮಾಡುವರು। ಬಂಡಗೇಡಿ ಮಾನವರು
ಕಂಡರೆ ಸೇರರು ಕಾಣದೆ ಬೊಗಳುವರು। ಕುಂಡಿ ಹಡಿಸುವ ಜನರು

ಕಾಮ ಕ್ರೋಧ ಲೋಭ ಮೋಹದಲ್ಲಿರುವರು। ಮದದೊಳು ಮೆರೆಯುವರು
ಕಾಮಿತ ಕಂಡರೆ ಖೂನ ಹಿಡಿಯದವರು। ಅಪಘಾತಕ ಜನರು

ಆಡಿದರಿಗೆ ಆಡಿದ್ದಿರಹುವದು। ನನದೇನು ಕೆಡಹುವದು
ನೀಡಿದ ಅಮೃತ ನಿಜಭಕ್ತನ ಕರಿದು। ಮಾಡಿದ ಮಹಾಗುರು ಮಾಹಾಂತನ
ಬಿರುದು ತಾ ಪಡದ್ದು ಬರಹುವದು

ಆಡುಮಾತಿನ ಸೊಗಡಿನ ಮರೆಯಲ್ಲಿ ಇವರ ವಿಡಂಬನೆ ಚಾಟಿ ಏಟಿನಂತೆ ಚುರುಕಾಗಿದೆ.

ಶಂಕರದೇವರು ಸು. ೧೩೪೦ರಲ್ಲಿದ್ದ ಶರಣರು. ಇವರು ಕವಿಗಳಾಗಿ ಅನೇಕ ಕೃತಿಗಳನ್ನು ಬರೆದಿದ್ದರೂ ಜನಸಾಮಾನ್ಯರ ಹೃದಯದ ಆಕಾಂಕ್ಷೆಯನ್ನರಿತ ಇವರು ಅವರಿಗಾಗಿ ಕೆಲವಾರು ಸ್ವರವಚನಗಳನ್ನು ರಚಿಸಿರುತ್ತಾರೆ. ಇವರ ಕೆಲವು ಸ್ವರವಚನಗಳಲ್ಲಿ

ಬಸವಾದಿ ಶರಣರ ವಚನಗಳು ಸೇರಿಕೊಂಡಿರುವಂತೆ ಭಾಸವಾಗುತ್ತವೆ. ಪರಬ್ರಹ್ಮವೇ ವಸ್ತುವಾಗುಳ್ಳ ಈ ಹಾಡನ್ನು ನೋಡೋಣ.

ಬಲ್ಲ ಮಹಾತ್ಮರು ಬಲ್ಲರೈಸಲ್ಲದೆ
ಸೊಲ್ಲಿಗಭೇದ್ಯನ ನಾನೆತ್ತ ಬಲ್ಲೆ ||ಪ||

ಉತುಪತಿ ಸ್ಥಿತಿ ಲಯವಿಲ್ಲದಂದು
ಪೃಥುವಿಯಾಕಾಶಗಳಿಲ್ಲದಂದು
ನುತ ಗುಣತ್ರಯಗಳಿಲ್ಲದಂದೊಪ್ಪುವ
ಅತೀತ ಬೊಮ್ಮವ ನಾನೆತ್ತ ಬಲ್ಲೆ ||೧||

ಮೂದೇವರ ಮೂರ್ತಿಯಿಲ್ಲದಂದು
ನಾದ ಬಿಂದು ಕಳೆಗಳಿಲ್ಲದಂದು
ಆದಿ ಅನಾದಿಯಿಂದತತ್ತಲೆನಿಸುವ
ನಾದಿಯ ಶೂನ್ಯನ ನಾನೆತ್ತ ಬಲ್ಲೆ ||೨||

ಲಾಲಿತ ಸಲಿಲ ಬಲಿದಾಲಿಕಲ್ಲಾದಂತೆ
ಆಲಿಕಲ್ಲದು ಬಲಿದು ಸಲಿಲವಾದಂತೆ
ಲೀಲೆಬಲಿದು ವಿಶ್ವವಾಗಿ ತನ್ನಿಂದಾದ
ಲೀಲೆ ತಾನಾದುದ ನಾನೆತ್ತಬಲ್ಲೆ ||೩||

ಧ್ಯಾನಧಾರಣ ಸಮಾಧಿಗೆ ನಿಲುಕದ
ಮಾನಸಹಾಯಕ ವಾಕ್ಯಕ್ಕೆ ನಿಲುಕದ
ಆನಂದ ಸತ್ತು ಚಿತ್ತುಗಳಿಗೈದದ
ಆ ನಿರಾಕಾರನ ನಾನೆತ್ತ ಬಲ್ಲೆ ||೪||

ಬೀಜದೊಳಗೆ ವೃಕ್ಷ ವರ ಭಾನುಕಾಂತದೆ
ತೇಜ ಚಂದ್ರಾಪುಷ್ಪದೆ ಜಲವೆಂತಂತೆ
ವೇದಿಸಿ ಸಕಲತತ್ವಗಳನಂತವರೊಳು
ರಾಜಿಸುವೈಕ್ಯವ ನಾನೆತ್ತಬಲ್ಲೆ ||೫||

ಜೀವಪರಮರೀರ್ವರ ಯೋಗದ
ಠಾವಿಗೆ ತಾನೆ ಸಾಕ್ಷಿಕನಾಗಿ
ಭಾವ ನಿರ್ಭಾವರ ಅವಧಿಯಿಂದತ್ತತ್ತ
ತೀವಿದಗಮ್ಯನ ನಾನೆತ್ತ ಬಲ್ಲೆ ||೬||

ಗಂಗೆಯೊಳಿಹ ದಿನಕರ ಬಿಂಬದಂತೆ ವೃ
ಕ್ಷಂಗಳೊಳಿಹ ಪಾವಕನಂತೆ
ಅಂಗದೊಳಿದ್ದಿಲ್ಲದಂತಿಹ ಶಂಕರ
ಲಿಂಗನ ಘನವನು ನಾನೆತ್ತಬಲ್ಲೆ ||೭||

ಇದಕ್ಕಿಂತ ಸುಲಭವಾಗಿ ಪರಬ್ರಹ್ಮವನ್ನು ತಿಳಿಸುವುದು ಅಸಾಧ್ಯ.

ಓರ್ವ ಜಾನಪದ ಸ್ವರವಚನಕಾರರಂತೆ ಕಂಡುಬರುವ ಗುರುಬಸವಾರ್ಯನು ತನ್ನ ಹಾಡುಗಳಲ್ಲಿ ಆಡುಮಾತಿನ ಬಳಕೆಯನ್ನೇ ಮೇಲಾಗಿ ಬಳಸಿ ಆ ಮೂಲಕ ಜನರಿಗೆ ನೀತಿಯನ್ನು ಅನುಭಾವವನ್ನು ಭಕ್ತಿಯನ್ನು ವಿರಕ್ತಿಯನ್ನು ಸರಾಗವಾಗಿ ತಿಳಿಸುತ್ತಾನೆ. ಭವಸಾಗರದಿಂದ ದಾಟಿಸು ಎಂಬ ಮೊರೆಯೇ ವಸ್ತುವಾಗಿ ಉಳ್ಳ ಈ ಸ್ವರವಚನ 'ಇಂತಿದೆ.

ನೋಡಿ ನಂಬಿದೆ ನಿನ್ನ ಅಂಬಿಗ ಎನ್ನ
ಕಾಡದೆ ದಾಟಿಸು ಅಂಬಿಗ ||ಪ||

ಹೊಳೆಯ ಹಾದಿಯ ನೋಡು ಅಂಬಿಗ
ಎಳಮುಂದೆ ಸೆಳಹುಗಳುಂಟು ಅಂಬಿಗ
ಮಳಲ ಹರಿಗೋಲನು ಅಂಬಿಗ ನೀನು
ತಿಳಿನೀರ ಕಡೆ ಹಾಯಿಸು ಅಂಬಿಗ ||೧||

ಹುಟ್ಟೊಂದರಲಿ ತೆಗೆ ಅಂಬಿಗ ನಿನ್ನ
ಹುಟ್ಟಲರಿದಾದರೆ ಅಂಬಿಗ
ಬಟ್ಟೆಗೆಟ್ಟಿಪ್ಪರು ಅಂಬಿಗ ಕರ
ಹೊಟ್ಟೆಯವನಲಿ ಹೋಗುವ ಅಂಬಿಗ ||೨||

ಹರಕು ಹರಗೋಲಲಿ ಅಂಬಿಗ ಅಲ್ಲಿ
ಮುರುಕು ಒಂಭತ್ತಲ್ಲೊ ಅಂಬಿಗ
ತರಹರಿಸಿ ಎಲ್ಲವನು ಅಂಬಿಗ
ಗುರುಬಸವನ ತಡಿಗೊಯ್ಯೊ ಅಂಬಿಗ ||೩||

ವೀರಶೈವಧರ್ಮ ಭಕ್ತಿಪ್ರಧಾನವಾದುದು. ಶಕ್ತಿ ಅದಕ್ಕೆ ಅನುಸಾರಿಯಾದುದು. ಒಂದು ಭಾವಪ್ರಧಾನ, ಮತ್ತೊಂದು ಕ್ರಿಯಾಪ್ರಧಾನ. ನೂರಕ್ಕೆ ನೂರರಷ್ಟು ಭಕ್ತಿಯ ಅತ್ಯಗತ್ಯ ಲಿಂಗಾಂಗ ಸಾಮರಸ್ಯದ ಮೊದಲ ಸೋಪಾನಕ್ಕೆ. ಪ್ರತಿಯೊಬ್ಬ ಭಕ್ತನು ಭಕ್ತಿವಿವಾಹವಾಗಿ ಶಿವವೃತೆಯಾಗಿರುತ್ತಾನೆ. ಶಿವನಿಗೂ ಇವನಿಗೂ ಇರುವ ಸಂಬಂಧ ಸತಿ-ಪತಿ ಸಂಬಂಧ. ಸ್ತ್ರೀ ಪುರುಷರಾದಿಯಾಗಿ ಭಕ್ತರೆಲ್ಲರೂ ಶಿವನಿಗೆ ಸತಿಯರೇ. ಅನುಭಾವಿಕ ಭಾಷೆಯಲ್ಲಿ "ಸತಿಯಿಲ್ಲದಿದ್ದರೆ ಸದ್ಗತಿಯಿಲ್ಲ" ಎನ್ನುವ ಒಂದು ಮಾತಿದೆ. ಆದ್ದರಿಂದ ಎಲ್ಲರೂ ಪರಮ ಸತಿಯರಾಗಿ ಶಿವಗತಿಯನ್ನು ಪಡೆಯುತ್ತಾರೆ.

ಲೌಕಿಕವಾದ ಮಾತುಗಳಲ್ಲಿ ಸತಿ-ಪತಿಯರ ವಿರಹವೇ ವಸ್ತುವಾಗುಳ್ಳ ಸ್ವರವಚನಗಳು ಬೇಕಾದಷ್ಟಿವೆ. ಅವುಗಳಲ್ಲಿ ನೀಲಗ್ರೀವ ಅಂಕಿತದ ಒಂದು ಸ್ವರವಚನವನ್ನು ನೋಡೋಣ:

ವನಿತೆಯರಿಂದೆಮ್ಮ ವಲ್ಲಭನೊಳು ಯೋಗ
ಕನಸಿನೊಳಾದುದೆಂಬವರೆ ಪುಣ್ಯೆಯರಮ್ಮಾ ||ಪ||

ಕಾಮಿನೀ ಎನ್ನ ವಿಯೋಗದಿ ಬೇಗಾ
ಸೀಮೆಯಾಗಿದೆ ತನುವಿನ ಸಿರಿಮನಸು
ನೇಮದಿಂದುರೆ ನೆಲೆಗೊಂಡು ನಿದ್ರೆಯೊಳೊಂದ
ಲಾ ಮಹಾ ಕನಸಾಹದವರ್ಗೆ ಸುಕೃತವಮ್ಮಾ ||೧||

ಏಸು ಜನ್ಮದ ಪಾಪಿಯೋ ಎನಗೊಮ್ಮೆ ಹಾ
ಹಾ ಸುದತಿರೋಲಗದೆ ಪ್ರಿಯನಗಲೆ
ಲೇಸ ನೆನೆಯೆ ನಿದ್ರೆಯಿಲ್ಲ ಕನಸು ಇಲ್ಲ
ವಾ ಸುಗುಣನ ಕೂಟವೆನಗೆಂತುಟಮ್ಮಾ ||೨||

ಕಡುತವಕದಿ ಎನ್ನ ಏಕಾಂತ ನೀಲಗ್ರೀವ
ನೊಡವೆರದರೆ ಪರವಶ ಮೂರ್ಛೆಯಾಗಾ
ಸಡಗರಿಪುದು ಸಂತಸದಿಂದಲಲ್ಲದೆ
ಪಡೆದುದಿಲ್ಲಾನು ವಿಯೋಗ ನಿದ್ರೆಯಮ್ಮಾ ||೩||

ವಚನ ಸಾಹಿತ್ಯ ಕನ್ನಡ ಸಾಹಿತ್ಯದಲ್ಲಿ ಅತ್ಯದ್ಭುತವಾದುದಾಗಿದೆ. ಅದಕ್ಕೆ ಸಂವಾದಿಯಾಗಿಯೇ ಸ್ವರವಚನವೂ ಬೆಳೆದುಕೊಂಡು ಬಂದಿದೆ. ವೀರಶೈವ ಧರ್ಮದ ಮೂರು ಮುಖ್ಯ ಪುಣ್ಯ ಕಾಲಗಳಲ್ಲಿ ಮಹಾನುಭಾವಿಗಳಿಂದ ಸ್ವರವಚನಗಳ ಕೃಷಿಯು ಹುಲುಸಾಗಿ ಸಾಗಿಬಂದಿದೆ. ನಾಡಿನ ಜನತೆ ಈ ಪುಣ್ಯವಾದಿ ಫಸಲನ್ನು ಶ್ರದ್ಧೆಯಿಂದ ತಮ್ಮದನ್ನಾಗಿ ಮಾಡಿಕೊಂಡರೆ ಕೈಲಾಸವನ್ನು ಅರಸುವ ಗೊಡವೆ ಇಲ್ಲದಂತಾಗುತ್ತದೆ. ಪರಶಿವನು ಅಲ್ಲಿಂದಿಳಿದು ಬಂದು ನಮ್ಮೊಡನೆಯೇ ಇರುತ್ತಾನೆ. ಇದಕ್ಕಿಂತ ಉತ್ತಮವಾದ ಸಾಂಗತ್ಯ ಇನ್ನಾವುದಿದೆ?



# ಸ್ವರವಚನದ ಸಾಹಿತ್ಯಸ್ವರೂಪ

*ಈಶ್ವರಯ್ಯ ಮಠ*

**ಸ್ವರವಚನ:**

'ಸ್ವರವಚನ' ಇದು ಸ್ವರ ಮತ್ತು ವಚನ ಎಂಬೆರಡು ಶಬ್ದಗಳಿಂದ ನಿಷ್ಪನ್ನವಾದ ಸಂಯುಕ್ತಪದ. 'ಸ್ವರ' ಎಂದರೆ ಧ್ವನಿ, ಧಾಟಿ, ರಾಗ ಅಥವಾ ಕವಿತೆಯನ್ನು ಹಾಡುವ ಪದ್ಧತಿ ಎಂದೆಲ್ಲ ಅರ್ಥಗಳಿವೆ. ಕಾರಣ ರಾಗಯುಕ್ತವಾಗಿ ಹಾಡಬಲ್ಲ 'ವಚನ'ಗಳನ್ನು 'ಸ್ವರವಚನ'ಗಳೆಂದು ಕರೆದಂತೆ ತೋರುತ್ತದೆ. ದಂಡಿಗೆ (= ವೀಣೆ), ದಮಡಿ (=ಆವುಜ), ಚಳ್ಳಂ( =ತಾಳ)ಗಳ ಮೇಳದೊಂದಿಗೆ ಸ್ವರ ಹಿಡಿದು ಹಾಡಿದಾಗ ಮಾತ್ರ, ಸಂಪೂರ್ಣ ತನ್ಮತನವನ್ನು ಬಿಚ್ಚಿಕೊಂಡು ಆರ್ದ್ರವಾಗಬಲ್ಲ ಈ 'ಗೀತ'ಸಾಹಿತ್ಯ ಪ್ರಕಾರಕ್ಕೆ 'ಸ್ವರವಚನ'ವೆಂಬುದು ಅನ್ವರ್ಥಕವೆನಿಸಿದೆ. ತಮ್ಮ ಹಾಡುಗಳಿಗೆ ಈ ಹೆಸರನ್ನು ಸ್ವತಃ ಶರಣರೇ ಕೊಟ್ಟಿದ್ದಾರೆ ಎಂಬುದು ಒಬ್ಬ ಅಜ್ಞಾತ ವಚನಕಾರನ ಸ್ವರವಚನದಿಂದ ತಿಳಿದು ಬರುತ್ತದೆ[೧].

ಸಾಧನಾವಸ್ಥೆಯಲ್ಲಿದ್ದ ಭಕ್ತ, ಪಂಚೇಂದ್ರಿಯಗಳನ್ನು ಗೆಲ್ಲುವ ಶಕ್ತಿ ನೀಡೆಂದು ಭಗವಂತನನ್ನು ಭಜಿಸಿ ಹಾಡಿದ್ದು 'ಭಜನೆ'ಯಾಯಿತು.

ಅರಿಷಡ್ವರ್ಗಗಳನ್ನು ಗೆದ್ದು 'ಅಂಗ-ಲಿಂಗ-ಲೀಯ'ವಾಗಿ 'ಸಂಗ'ಸುಖದ ಸ್ವಾನುಭವವು ಹಾಡಾಗಿ ಹರಿದು 'ಅನುಭಾವಪದ'ವಾಯಿತು.

ಬುದ್ಧಿಪ್ರಧಾನವಾದ ತತ್ತ್ವಚಿಂತನೆಗೆ, ಭಾವಕೋಶದ ಉಕ್ಕು ಬಂದು ತಂತಾನೆ ರಾಗ-ತಾಳಗಳಿಗೆ ಭೋರ್ಗರೆದದ್ದು 'ತತ್ತ್ವಪದ'ವಾಯಿತು.

'ತನ್ನ ತಾನರಿದು' ಕೇವಲತ್ವದ ಪದವಿಗೇರಿ ಆನಂದಾನುಭೂತಿಯಲ್ಲಿ ಹಾಡಿದ್ದು 'ಕೈವಲ್ಯಪದ'ವಾಯಿತು.

ಹೀಗೆ ರೂಪದೃಷ್ಟಿಯಿಂದ ಹಾಡು ಅಥವಾ ಭಜನೆ; ವಸ್ತುವಿನ ದೃಷ್ಟಿಯಿಂದ ತತ್ತ್ವಪದ ಅಥವಾ ಅನುಭಾವಪದ; ಆತ್ಯಂತಿಕ ಗುರಿಯ ದೃಷ್ಟಿಯಿಂದ ಕೈವಲ್ಯಪದ ಎಂದೆಲ್ಲ

೧. ರಾಜೂರ ವೀರಣ್ಣ: ಶಿವಯೋಗ ಪ್ರದೀಪಿಕೆ-ಪ್ರಸ್ತಾವನೆ, ಪು. xii.

ಕರೆಯಿಸಿಕೊಳ್ಳುವ ಶರಣರ ಈ 'ಗೀತ' ಸಾಹಿತ್ಯ ಪ್ರಕಾರವನ್ನು ಸೂತ್ರರೂಪದ 'ಸ್ವರವಚನ' ಎಂಬ ಪದದಲ್ಲಿ ಅಡಕಗೊಳಿಸುವುದು ಸೂಕ್ತ. ಸ್ವರಸಹಿತವಾಗಿ ಮತ್ತು ಸ್ವರ ಸ-ಹಿತವಾಗಿ ಸಾಮಾನ್ಯರಿಗೂ ಅರ್ಥ ಸ್ಫುಟವಾಗುವಂತೆ ಹಾಡುವ ವಚನ, ಸ್ವರವಚನ.

## ಸ್ವರವಚನದ ಸ್ವರೂಪ:

ಸ್ವರವಚನಸಾಹಿತ್ಯಕ್ಕೆ ಎಂಟುನೂರು ವರ್ಷಗಳ ಸುದೀರ್ಘ ಇತಿಹಾಸವಿದೆ. ಭಕ್ತಿ ಸೆಲೆಯಾಗಿ, ತತ್ತ್ವ ನೆಲೆಯಾಗಿ ರಚನೆಗೊಂಡ ಈ ಹಾಡುಗಬ್ಬವು ಕಾಲಕ್ಕೆ ತಕ್ಕಂತೆ ಏರಿಳಿಯುತ್ತ ಇಂದಿನ ವರೆಗೆ ಹರಿದುಬಂದಿದೆ. ಕನ್ನಡದ ಇತರ ಸಾಹಿತ್ಯ ಪ್ರಕಾರಗಳಂತೆ ಇದೂ ಕೂಡ ಧರ್ಮದ ಪರಿಧಿಯಲ್ಲಿಯೇ ಪ್ರಬುದ್ಧವಾಯಿತು. ವೈಯಕ್ತಿಕ ಒತ್ತಡ, ಪರಿಸರದ ಪ್ರಭಾವಗಳಿಂದ ದಟ್ಟವಾಗಿ ಬೆಳೆದು, ಕನ್ನಡನಾಡಿನ ಜನಮನದಲ್ಲಿ; ಮನೆ-ಮಠಗಳಲ್ಲೆಲ್ಲ ಹರಡಿಕೊಂಡಿತು. ಈಗ ದೊರೆತ ಸ್ವರವಚನಗಳ ಸಂಖ್ಯೆ ದೊಡ್ಡದಿದೆಯಾದರೂ, ದೊರೆಯದಿದ್ದುದರ ಪ್ರಮಾಣ ಇದಕ್ಕೂ ಅಧಿಕವಾಗಿದೆ. ಇದು ವರೆಗೆ ಪ್ರಕಟಗೊಂಡ ಕೃತಿಗಳನ್ನು ಅನುಲಕ್ಷಿಸಿ, ಸ್ವರವಚನಗಳ ಪ್ರಮುಖ ಲಕ್ಷಣಗಳನ್ನು ಹೀಗೆ ಗುರುತಿಸಬಹುದಾಗಿದೆ:

೧. ಸಾಮಾನ್ಯವಾಗಿ ಎಲ್ಲ ಸ್ವರವಚನಗಳಿಗೆ ರಾಗನಿರ್ದೇಶನವಿದ್ದು, ವಿರಳವಾಗಿ ತಾಳ ನಿರ್ದೇಶನವಿರುತ್ತದೆ. ರಾಗ-ತಾಳಗಳನ್ನು ಹೊಂದಿಯೂ ನಿರ್ದೇಶನವಿಲ್ಲದ ಹಾಡುಗಳು ಕೂಡ ಉಪಲಬ್ಧವಾಗಿವೆ. ಒಮ್ಮೊಮ್ಮೆ ಒಂದು ಸ್ವರವಚನಕ್ಕೆ ಬೇರೆ ಬೇರೆ ರಾಗಗಳ ನಿರ್ದೇಶನವಿದ್ದ ಉದಾಹರಣೆಗಳೂ ಉಂಟು.

೨. ಪ್ರತಿ ಹಾಡಿಗೂ ಪ್ರಾರಂಭದಲ್ಲಿ ಹಾಡಲೆಂದು ಪಲ್ಲವಿಯಿದ್ದು, ಅಪರೂಪಕ್ಕೆ ವಿಶೇಷಾರ್ಥವನ್ನು ಸೂಚಿಸಲು ಅನುಪಲ್ಲವಿಯೂ ಇರುತ್ತವೆ. ಪಲ್ಲವಿಯಿಲ್ಲದ ಹಾಡುಗಳೂ ಅಲ್ಲಲ್ಲಿ ದೊರೆಯುತ್ತವೆ. ಅಂಥವುಗಳನ್ನು ಸ್ವರಬೊಲ್ಲಿಗಳೆಂದು ಕರೆಯಲಾಗುತ್ತದೆ. ಪ್ರತಿ ನುಡಿಯ ಮೊದಲು ಆವರ್ತನವಾಗುವ 'ಪಲ್ಲವಿ' ಪದ್ಯದ ಸಾರವನ್ನು ಹೇಳುತ್ತದೆ.

೩. ಸಾಮಾನ್ಯವಾಗಿ ನಾಲ್ಕು ಚರಣಗಳ ನುಡಿ ಅಥವಾ ಪದಗಳಿದ್ದು, ಒಮ್ಮೊಮ್ಮೆ ಮೂರು, ಆರು, ಅಪರೂಪಕ್ಕೆ ಎರಡು ಚರಣಗಳನ್ನು ಒಳಗೊಂಡ ನುಡಿಗಳೂ ದೊರೆಯುತ್ತವೆ. ಸಾಮಾನ್ಯವಾಗಿ ಪ್ರತಿ ಹಾಡಿಗೆ ಒಂದಕ್ಕಿಂತ ಹೆಚ್ಚು ನುಡಿಗಳಿದ್ದು, ೩, ೫, ೭, ೯, ೧೧, ೧೩ ಹೀಗೆ ಬೆಸ ಸಂಖ್ಯೆಯ, ಕೆಲವೊಮ್ಮೆ ಸರಿ ಸಂಖ್ಯೆಯ ನುಡಿಗಳನ್ನೊಳಗೊಂಡ ಸ್ವರವಚನಗಳು ಸಿಗುತ್ತವೆ. ನುಡಿಗಳಲ್ಲಿ ಸ್ವರವಚನ ವಿಷಯ ನಿರೂಪಣೆಯಿರುತ್ತದೆ.

೪. ಪ್ರತಿ ಸ್ವರವಚನದ ಕೊನೆಗೆ ಕವಿಯ ಇಷ್ಟದೇವರ 'ಮುದ್ರಿಕೆ' ಅಥವಾ 'ಅಂಕಿತ'ವಿದ್ದು ಕರ್ತೃವನ್ನು ಗುರುತಿಸಲು ಸಹಾಯಕವಾಗಿವೆ.

೫. ಸ್ವರವಚನಗಳಲ್ಲಿ ಶೈವಧರ್ಮದ, ಅದರಲ್ಲೂ ಬಸವಾದಿ ಪ್ರಮಥರ ಪ್ರಭಾವ ಪ್ರತ್ಯಕ್ಷವಾಗಿ ಇಲ್ಲವೆ ಪರೋಕ್ಷವಾಗಿ ಕಂಡುಬರುತ್ತದೆ. ಮುಖ್ಯವಾಗಿ ವೀರಶೈವಸಿದ್ಧಾಂತ ಪ್ರತಿಪಾದನೆಯೇ ಇವುಗಳ ಧ್ಯೇಯ. ಇಲ್ಲಿ ಗುರು-ಲಿಂಗ-ಜಂಗಮದ ವರ್ಣನೆ; ಕಾಯಕ-ದಾಸೋಹ-ಶಿವಯೋಗದ ವಿವರಣೆ; ಶರಣಸತಿ-ಲಿಂಗಪತಿ ಭಾವ ಸಾದ್ಯಂತವಾಗಿ ಎದ್ದು ತೋರುತ್ತದೆ. ಅರಿವು-ಆಚಾರ-ಅನುಭಾವದ ನಿರೂಪಣೆ, ಆತ್ಮನಿವೇದನೆ, ನೀತಿಬೋಧನೆ ಮತ್ತು ಲೋಕವಿಡಂಬನೆ- ಈ ಸಾಹಿತ್ಯಪ್ರಕಾರದ ವಸ್ತುವಾಗಿರುವುದುಂಟು.

೬. ಗಂಡ-ಮಿಂಡ, ಅತ್ತಿ-ಅತ್ತಿಗೆ, ಮಾವ-ಮೈದುನ, ಅಕ್ಕ-ಮಕ್ಕಳು, ಮುಂತಾದ ಸಂಬಂಧವಾಚಿ ಪದಗಳನ್ನು ಅನುಭಾವದ ಪರಿಭಾಷೆಯಾಗಿ ಬಳಸುವುದು ಈ ಸಾಹಿತ್ಯಪ್ರಕಾರದ ವೈಶಿಷ್ಟ್ಯವಾಗಿದೆ. ಕುರಿ-ಕ್ವಾಣ, ಕೋಳಿ-ಕೋಗಿಲೆ; ಕ್ವಾಡಗ-ಕತ್ತೆಗಳಂಥ ಚಿರಪರಿಚಿತ ಪಶು-ಪಕ್ಷಿಗಳು ಉಪಮೆ-ರೂಪಕಗಳಾಗಿ ಬಳಕೆಗೊಂಡಿವೆ.

೭. ಸಾಮಾನ್ಯವಾಗಿ ಆದಿಪ್ರಾಸ ಪ್ರತಿಚರಣದಲ್ಲಿದ್ದು; ಕೆಲವೆಡೆ ಅಂತ್ಯಪ್ರಾಸ; ಅಲ್ಲಲ್ಲಿ ಮಧ್ಯಪ್ರಾಸಗಳೂ ಕಂಡುಬರುತ್ತವೆ.

೮. 'ವಿಶೇಷವಾಗಿ ಅಂಶಗಣದ ಕರ್ನಾಟಕ ವಿಷಯ ಜಾತಿ ಛಂದಸ್ಸಿನಲ್ಲಿಯೇ ಏಳೆ, ತ್ರಿಪದಿ, ಉತ್ಸಾಹ, ಛಂದೋವತಂಸ, ಅಕ್ಕರ, ಷಟ್ಪದಿ, ಚೌಪದಿ ಅಪರೂಪವಾಗಿ ಮದನವತಿ ಅಕ್ಕರಿಕೆ ಇರುತ್ತವೆ. ಮಾತ್ರಾಗಣದ ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ ಷಟ್ಪದಿಗಳನ್ನೂ; ಸೀಸ, ಸಾಂಗತ್ಯ ಮುಂತಾದ ಛಂದಗಳನ್ನೂ ಸ್ವರವಚನಗಳಿಗೆ ಬಳಸುವುದುಂಟು'[೨]. ಹಲವೆಡೆ ಗೀತೆಗಳು ಸ್ವಚ್ಛಂದವಾಗಿಯೂ ಇವೆ.

೯. ಸ್ವರವಚನಗಳನ್ನು ನಾದಮಾಧುರ್ಯಕ್ಕಾಗಿ, ತಂತಿವಾದ್ಯ, ತಾಳವಾದ್ಯ, ಗಾಳಿ ವಾದ್ಯಗಳಿಗೆ ಮೇಳೈಸುವುದುಂಟು. ಇವು ಪರಿಪೂರ್ಣತೆ ಪಡೆಯಲು ತಾಳಹಾಕುವ ತಾಳಧರರೂ; ಚರ್ಮವಾದ್ಯ ಬಾರಿಸುವ ಅವುಜರೂ; ಹಾಡುವ ಮೇಳದವರೂ ಇರಬೇಕಾಗುತ್ತದೆ. 'ಸೂರು' ಹಿಡಿದು ಏಕವ್ಯಕ್ತಿ ಹಾಡಬಹುದಾದರೂ ಹಿಮ್ಮೇಳವಿದ್ದರೆ ಹಾಡಿಗೆ ಕೋಡು ಮೂಡುತ್ತದೆ.

## ಒಂದು ಸ್ವತಂತ್ರ ಸಾಹಿತ್ಯರೂಪ :

ಸ್ವರವಚನಸಾಹಿತ್ಯ ಜೇಡರ ದಾಸಿಮಯ್ಯನಿಂದ ಆರಂಭಗೊಂಡು, ಸಕಲೇಶ ಮಾದರಸ, ಬಸವಣ್ಣ, ಅಕ್ಕಮಹಾದೇವಿ, ಸಿದ್ಧರಾಮ, ಅಲ್ಲಮಾದಿ ಸಮಕಾಲೀನರಿಂದ ಸಾಕಷ್ಟು ಸೃಷ್ಟಿಯಾಯಿತು. ಬಳಿಕ ಹರಿಹರ ರಾಘವಾಂಕರ ಕಾಲದಲ್ಲಿ ಕ್ಷೀಣವಾಗಿ ಮುಂದುವರಿಯಿತು. ಪ್ರೌಢದೇವರಾಯನ ಕಾಲದ ನೂರೊಂದು ವಿರಕ್ತರ ಸಾಲಿಗೆ ಸೇರಿದ ಕರಸ್ಥಲದ ನಾಗಿದೇವ, ಗುರುಬಸವಾದಿಗಳಲ್ಲಿ ಮತ್ತೆ ಸರಿಯಾಗಿ ಬೆಳೆದು; ನಿಜಗುಣ ಶಿವಯೋಗಿಯ ಕೈಯಲ್ಲಿ ಕೈವಲ್ಯಕ್ಕೇರಿತು. ತರುವಾಯದ ಮುಪ್ಪಿನ ಷಡಕ್ಷರಿ,

---

೨. ಗಿರಿರಾಜು, ಪಿ. ಎಂ. : ವೀರಶೈವ ಹಾಡುಗಬ್ಬಗಳು(ಸಿದ್ಧಗಂಗಾಶ್ರೀ)ಪು. ೮೯.

ಸರ್ಪಭೂಷಣ ಶಿವಯೋಗಿ, ಬಾಲಲೀಲಾ ಮಹಾಂತ ಶಿವಯೋಗಿ, ಮೈಲಾರ ಬಸವಲಿಂಗ ಶರಣರ ಅವಧಿಯಲ್ಲಿ ತುಂಬ ವ್ಯಾಪಕವಾಗಿ ಹರಡಿತು. ಹದಿನೇಳು-ಹದಿನೆಂಟನೆಯ ಶತಮಾನದಿಂದೀಚೆಗೆ ಸಾವಿರಾರು ಜನ ಶರಣರು ಸ್ವರವಚನಗಳನ್ನು ರಚಿಸಿ ಈ ಸಾಹಿತ್ಯರೂಪದ ಸಮೃದ್ಧಿಗೆ ಕಾರಣರಾಗಿದ್ದಾರೆ.

ಪ್ರಾರ್ಥನೆ-ಆತ್ಮನಿವೇದನೆ ಪ್ರೇರಣೆಯಿಂದ ಹುಟ್ಟಿ, ವೀರಶೈವ ಸಿದ್ಧಾಂತ ಪ್ರತಿಪಾದನೆಯ ಧೋರಣೆಯಿಂದ ಬೆಳೆದು, ಅನಂತರ ಲೋಕನೀತಿಯನ್ನೂ ತೆಕ್ಕೆಸಿಕೊಂಡ ಈ ಸ್ವರವಚನಸಾಹಿತ್ಯವು ತನ್ನದೇ ಆದ ಹಲವಾರು ವೈಶಿಷ್ಟ್ಯಗಳಿಂದ ಸ್ವತಂತ್ರವಾಗಿ, ಸಮೃದ್ಧವಾಗಿ ಬೆಳೆದುಬಂದಿದೆ.

ಆದರೆ ಬಹಳಷ್ಟು ಜನ ವಿದ್ವಾಂಸರು ಈ ರೂಪವನ್ನು ವಚನಗಳಲ್ಲಿ ಮೇಳೈಸಿ ಇಲ್ಲವೆ ಕೀರ್ತನೆಗಳಲ್ಲಿ ಕೂಡಿಸಿ ನೋಡುತ್ತಾರೆ. ಕೆಲವರಂತೂ ಇದನ್ನು ಸ್ವತಂತ್ರ ಸಾಹಿತ್ಯರೂಪವೇ ಅಲ್ಲವೆನ್ನುವಷ್ಟರ ಮಟ್ಟಿಗೆ ಅಲಕ್ಷಿಸಿದ್ದಾರೆ.

ವಿದ್ವಾಂಸರ ಈ ತೀರ್ಮಾನಕ್ಕೆ ಸ್ವರವಚನ ಮತ್ತು ಕೀರ್ತನೆಗಳಲ್ಲಿರುವ ರಾಚನಿಕ ರೂಪಸಾಮ್ಯತೆಯೇ ಮುಖ್ಯ ಕಾರಣವಾಗಿರಬಹುದು. ಹಾಗೆ ನೋಡಲು ಇವುಗಳ ಹೊರಗಿನ ರೂಪ ಒಂದೇಯಾಗಿ ಕಂಡರೂ, ಒಳಗಿನ 'ಹೂರಣ' ಬೇರೆಯೇ ಆಗಿದೆ. ಆದಕ್ಕಾಗಿ ಶರಣರ ಅನುಭಾವಪದಗಳನ್ನು ಸ್ವರವಚನಗಳೆಂದೂ ದಾಸರ ಹಾಡುಗಳನ್ನು ಕೀರ್ತನೆಗಳೆಂದೂ ಕರೆಯುವುದು ಹೆಚ್ಚು ಸಮಂಜಸವೆನಿಸುತ್ತದೆ. 'ಸ್ವರವಚನಗಳ ರಾಚನಿಕ ಆವರಣ ಸ್ವರವೆತ್ತಿ ಹಾಡುವ 'ಗೀತೆ'ಯಾಗಿರುವುದರಿಂದ; 'ವಚನ'ಗಳಿಂದಲೂ ಇವು ಬೇರ್ಪಟ್ಟು ಸ್ವತಂತ್ರ ಸಾಹಿತ್ಯರೂಪವಾಗಿ; ಸ್ವಯಂಪೂರ್ಣವಾಗಿ ಕಂಗೊಳಿಸುತ್ತವೆ.[೩]

## ಸ್ವರವಚನದ ಸಾಹಿತ್ಯಸ್ವರೂಪ :

ಸ್ವರವಚನಗಳು ಸಾಧಕನ ಆತ್ಮನಿವೇದನೆ, ನೀತಿಬೋಧನೆ, ವೀರಶೈವ ತತ್ತ್ವಪ್ರತಿಪಾದನೆ, ತತ್ ಕ್ಷಣದ ಭಾವನಾನುಭವದ ಅಭಿವ್ಯಕ್ತಿಗೆ ಮೀಸಲಾಗಿರುವುದರಿಂದ; ಇವುಗಳನ್ನು ಸಾಹಿತ್ಯಕೃತಿಗಳು ಎಂದು ಪರಿಗಣಿಸಬಹುದೆ? ಅನೇಕ ಶರಣರಿಂದ ಕಾಲಾನು ಕಾಲದಲ್ಲಿ ಬಿಡಿಬಿಡಿಯಾಗಿ ರಚನೆಯಾದ ಸ್ವರವಚನಗಳು 'ಸಾಹಿತ್ಯ' ಪಟ್ಟಕ್ಕೆ ಅರ್ಹತೆ ಪಡೆಯುತ್ತವೆಯೇ ಎಂಬುದು ಕೆಲವರ ಅನುಮಾನ.

ಹನ್ನೆರಡನೆಯ ಶತಮಾನದ ಶಿವಶರಣರು ಪಂಡಿತಮುಖಿಯಾಗಿದ್ದ ಮಾರ್ಗಸಾಹಿತ್ಯವನ್ನು ಜನಮುಖಿ ದೇಸಿಯೆಡೆಗೆ ಹೊರಳಿಸಿ; ಆಡಿ-ಹಾಡಿದರು. ಅವರ ರಚನೆಗಳಾದ ವಚನಗಳು ಮಾತನಾಡಿದ ಹಾಗೆ ಇದ್ದರೆ; ಸ್ವರವಚನಗಳು ಹಾಡಿದ ಹಾಗೆ ಇವೆ. ವಚನ ಮತ್ತು ಸ್ವರವಚನಗಳನ್ನು ನಾವು ಸಾಹಿತ್ಯಕೃತಿಗಳೆನ್ನಲು ಇರುವ ಮುಖ್ಯ ಕಾರಣ: ಅವುಗಳಲ್ಲಿರುವ ಸಾಹಿತ್ಯಗುಣ ಹಾಗೂ ಅವುಗಳ ಕರ್ತೃಗಳಲ್ಲಿರುವ ಸಾಹಿತ್ಯಿಕ ಮನೋಭಾವ.

೩ ಮಠ ಈಶ್ವರಯ್ಯ: ಸ್ವರವಚನಗಳು ಮತ್ತು ಕಡಕೋಳ ಮಡಿವಾಳೇಶ್ವರರು (ಅಪ್ರಕಟಿತ) ಎಂ. ಫಿಲ್. ಪ್ರಬಂಧ, ಪು. ೨೭

ಸಾಹಿತಿಯು ತಾನು ಕಂಡದ್ದನ್ನು ಹಾಗೇ ಇತರರಿಗೆ ತೋರಿಸುವುದಿಲ್ಲ; ಸಹೃದಯರ ಅನುಭವಕ್ಕೆ ಬರುವಂತೆ ಅದನ್ನು ರಮಣೀಯವಾಗಿ ನಿರೂಪಿಸುತ್ತಾನೆ; ದರ್ಶಿಸುತ್ತಾನೆ. ಜೀವನದ ಮೂಲಭೂತ ತತ್ತ್ವಗಳನ್ನು ಮನೋಹರವಾದ ಶಬ್ದಾರ್ಥಗಳಲ್ಲಿ ವಿನ್ಯಾಸಗೊಳಿಸಿ, ಸುಂದರವಾಗಿ ಪ್ರತಿಪಾದಿಸಲ್ಪಟ್ಟ ವಸ್ತು ಇಡಿಯಾದರೇನು? ಬಿಡಿಯಾದರೇನು? ಅದೆಲ್ಲ ಇಲ್ಲಿ ಗೌಣ. ಅಂತೆಯೇ ಬಿಡಿಬಿಡಿಯಾಗಿ ರಚನೆಗೊಂಡ ಸ್ವರವಚನಗಳೂ ಸಾಹಿತ್ಯಕೃತಿಗಳು ಎಂಬುದರಲ್ಲಿ ಯಾವ ಸಂದೇಹಕ್ಕೂ ಎಡೆಯಿಲ್ಲ.

ಸ್ವರವಚನಗಳಲ್ಲಿ ಅಖಂಡವಾದ ಒಂದು ಕಥಾವಸ್ತುವಿಲ್ಲ. ಇವು ವ್ಯಕ್ತಿನಿಷ್ಠ ರಚನೆಗಳೇ ವಿನಾ ವಸ್ತುನಿಷ್ಠ ರಚನೆಗಳಲ್ಲ. ಮಹಾಕಾವ್ಯದಂತೆ ಇಲ್ಲಿ ಅನೇಕ ಪಾತ್ರಗಳ ಪ್ರವೇಶವಿಲ್ಲ. ಒಂದೇ ಕೃತಿಯಲ್ಲಿ ಒಂಬತ್ತು ರಸಗಳ ಬೆರಕೆಯಿಲ್ಲ. ಇಲ್ಲಿ ಏಕವ್ಯಕ್ತಿಯ ಅನೇಕ ಭಾವಗಳ ಖಂಡ-ಖಂಡ ಅಭಿವ್ಯಕ್ತಿಯಿದೆ. ಆತ್ಮಸಮ್ಮುಖಿ 'ಅಧ್ಯಾತ್ಮವೇ ನಿಚಿತ ಪ್ರಯೋಜನ'ದೊಂದಿಗೆ ಸಮಾಜಸಮ್ಮುಖಿ ವಿಚಾರಧಾರೆಯೂ ಒಂದಿಷ್ಟು ಬಂದಿರುವುದುಂಟು. ಒಂದು ಸಾಹಿತ್ಯಕೃತಿಗಿರುವ 'ಅಖಂಡ'ತೆಯ ಅಭಾವವಿಲ್ಲಿದ್ದರೂ ಬಿಡಿ ಬಿಡಿಯಾದ ಸ್ವರವಚನಗಳನ್ನು ಇಡಿಯಾಗಿ ನೋಡಿದಾಗ ಪ್ರತಿಮೆ-ಸಂಕೇತ,ಗುಣ-ಅಲಂಕಾರ, ರಸ-ಧ್ವನಿ, ಗಾದೆ-ಒಗಟು, ಆಡುನುಡಿ-ಲೋಕಾನುಭವ, ಪ್ರಾಸಾನುಪ್ರಾಸಗಳನ್ನು ಗುರುತಿಸಬಹುದು. ಇಂಥ ಸಾಹಿತ್ಯಾಂಶಗಳಿಂದ ಸ್ವರವಚನಗಳು ರಸದ ಬುಗ್ಗೆಗಳಾಗಿ ಚಿಮ್ಮಿರುವುದನ್ನು ಮನಗಾಣಬಹುದು.

ಸ್ವರವಚನಗಳನ್ನು ರಚಿಸಿದ ಶಿವಶರಣರು ತಮ್ಮ ಹಾಡುಗಳಿಗೆ ಸಂಗೀತವನ್ನು ಆರೋಪಿಸಿಕೊಂಡೇ ಬರೆದರು. ಅವರ ದೃಷ್ಟಿಯಲ್ಲಿ ಒಂದು ಸ್ವರವಚನವು 'ಸಂಗತಿ-ಸಂಗೀತ-ಸಾಹಿತ್ಯ'ಗಳ ಸುಂದರ ಸಂಗಮವಾಗಿದೆ. ನಾವು ಸ್ವರವಚನಗಳನ್ನು ವಿಮರ್ಶಿಸುವಾಗ ಅದರ ಸಂಗೀತವೂ ನಮ್ಮೆದುರಿಗಿರುತ್ತದೆ. ಆದರೆ ಸಾಮಾನ್ಯವಾಗಿ ಅದು ಪರಿಗಣನೆಗೆ ಬರುವುದಿಲ್ಲ. ಇದರಿಂದ ಕವಿಗೆ ಮತ್ತು ಕೃತಿಗೆ ಅನ್ಯಾಯವಾಗುವ ಸಾಧ್ಯತೆಯೇ ಹೆಚ್ಚು. ಒಂದು ಜನಪದ ಕತೆಯನ್ನು ಮೌಖಿಕವಾಗಿ ಹೇಳುವಾಗ ಆಗುವ ಪರಿಣಾಮ; ಓದುತ್ತ ಹೋದರೆ ಆಗುವುದಿಲ್ಲ. ಹಾಗೆಯೇ ಒಂದು ನಾಟಕದ ಪ್ರದರ್ಶನದಲ್ಲಿ ಉಂಟಾಗುವ ಪರಿಪೂರ್ಣತೆ ಅದರ ಪಠನದಿಂದ ಆಗುವುದಿಲ್ಲ. ಇದೇ ರೀತಿ ಒಂದು ಸ್ವರವಚನ ಹಾಡಿದಾಗ ದಕ್ಕುವಷ್ಟು ಓದಿದಾಗ ದಕ್ಕುವುದಿಲ್ಲ. ಅದಕ್ಕಾಗಿ ಸ್ವರವಚನಗಳ ವಿಮರ್ಶೆಮಾಡುವಾಗ ಈ ಅಂಶವನ್ನು ಪ್ರಮುಖವಾಗಿ ಪರಿಗಣಿಸಬೇಕಾಗುತ್ತದೆ. ಇದು ನೀಡುವ ರಿಯಾಯಿತಿಯಲ್ಲ; ದಕ್ಕಬೇಕಾದ ನ್ಯಾಯ. ಈಗ ಬಸವಯುಗ, ನಿಜಗುಣಶಿವಯೋಗಿಯುಗ, ಕಡಕೋಳ ಮಡಿವಾಳಪ್ಪ, ಕೂಡಲೂರು ಬಸವಲಿಂಗ ಶರಣಯುಗವೆಂಬ ಮೂರು ಘಟ್ಟಗಳಲ್ಲಿ ಸಾಗಿಬಂದ ಈ ವಾಙ್ಮಯದ ಸಾಹಿತ್ಯಸ್ವರೂಪವನ್ನು ಕೆಲವು ಮಾದರಿಗಳ ಮೂಲಕ ಸ್ಪಷ್ಟಪಡಿಸಬಹುದು.

**ಬಸವಯುಗ:**

ಬಸವಾದಿ ಶಿವಶರಣರ ಸ್ವರವಚನಗಳು ಆತ್ಮನಿವೇದನೆ, ವೀರಶೈವ ತತ್ತ್ವ ಪ್ರತಿಪಾದನೆಗೆ ಪ್ರಧಾನವಾಗಿ ಮೀಸಲಾದಂಥವು. ಬಸವಣ್ಣ, ಅಕ್ಕಮಹಾದೇವಿ, ಅಲ್ಲಮ

ಸಿದ್ಧರಾಮ ಮುಂತಾದ ಶಿವಶರಣರು ತಮ್ಮ ಸ್ವರವಚನಗಳಲ್ಲಿ ಕನ್ನಡ ಭಾಷೆಯ ಸಾಂಕೇತಿಕ ಶಕ್ತಿಯನ್ನು ಸಾರ್ಥಕವಾಗಿ ದುಡಿಸಿಕೊಂಡಿದ್ದಾರೆ.

ಈ ಹಿನ್ನಲೆಯಲ್ಲಿ ಅಲ್ಲಮ ಪ್ರಭುಗಳ 'ಪ್ರಾಣಲಿಂಗಿ' ಎಂಬ ಸ್ವರವಚನವನ್ನು ಇಲ್ಲಿ ಗಮನಿಸಬಹುದು.

ನುಡಿಯ ಗಡಣದ ಬೆಳಗು ಮರುತ ಪರಿಮಳದಂತೆ
ಭಾವವಿಲ್ಲದ ಬಯಲು ಪರವು ತಾನೆ
ಅರುಹು ಕುರುಹಿನ ಮರಹು ತೆರಹಿಲ್ಲದಾ ಘನವು
ನಿಂದ ನಿಜ ಪದದಿಂದ ಪ್ರಭೆಯಾಯಿತು

ಎಂದು ಮುಂದುವರಿಯುವ ಈ ಸ್ವರವಚನ ಲೌಕಿಕರಾದ ನಮಗೆ ಸುಲಭವಾಗಿ ಅರ್ಥವಾಗುವುದಿಲ್ಲ. ಆದರೂ ಅದು ತನ್ನ ಅನುರಣನ ಗುಣದಿಂದ ಒಂದು ವಿಶಿಷ್ಟ ಅನುಭವವನ್ನು ನಮ್ಮಲ್ಲಿ ಉಂಟುಮಾಡುತ್ತದೆ. ಅನುಭಾವದ ಆಳ-ಅಗಲಗಳನ್ನು ಅರಿವಿಗೆ ತಂದುಕೊಡಲು 'ಜಗದಗಲ-ಮುಗಿಲಗಲದ' ಪ್ರತಿಮೆಗಳನ್ನು ಕೊಳ್ಳೆ ಹೊಡೆಯುವ ಈ ಗೀತೆ ಎಲ್ಲವನ್ನೂ ತನ್ನಲ್ಲಿ ಗರ್ಭೀಕರಿಸಿಕೊಂಡು ಮೈತುಂಬಿದೆ. ಈ ಸ್ವರವಚನದಲ್ಲಿ ಬರುವ

"ಎಳೆಯ ಮಾಣಿಕದಂತೆ ಹೊಳೆವ ಜ್ಞಾನದ ಜ್ಯೋತಿ
ನವನಾಳದಲಿ ಪ್ರಾಣಲಿಂಗ ಭರಿತ
ಪಿಂಡ ಬ್ರಹ್ಮಾಂಡವನು ಮೀರಿ ತೋರುವ ವಚನ
ಗಗನುದಯದ ಮೇಲೆ ಘನಕೆ ಗಮನ . . . . "

ಮತ್ತು

"ಇರುಳು ಮನವನೆ ನುಂಗಿ ಹಗಲು ಘನವನೆ ನುಂಗಿ
ಮಾತು ಮಥನವ ನುಂಗಿದಾತ ಭರಿತ . . . . "

ಹಾಗೂ

"ಧರೆಗೆ ನಿದ್ರೆಯು ಇಲ್ಲ, ಉದಕಕ್ಕೆ ಕನಸಿಲ್ಲ
ಅಗ್ನಿಕಳವಳಕೆ ಒಳಗಾಗದಂತೋ. . . ."

ಇಂಥ ಮಾತುಗಳಿಗೆ ಇರುವ ಪಾರಿಭಾಷಿಕ ವ್ಯಾಖ್ಯೆ-ವ್ಯಾಖ್ಯಾನಗಳೇನೇ ಇರಲಿ; ಆದರೆ ಇವು ಸಹೃದಯನ ಮನಸ್ಸಿನ ಮೇಲೆ ಹಾಕುವ 'ಛಾಪು' ಅನನ್ಯವಾಗಿದೆ. ಇದನ್ನು ಕೇಳಿಸಿಕೊಂಡವರ ಕಲ್ಪನಾ ತೆರೆಯ ಮೇಲೆ ಝಗ್ಗನೆ ಮೂಡುವ 'ಮಿಂಚು' ವಿಶಿಷ್ಟವಾಗಿ ಕಾಣುತ್ತದೆ.

ಸಾಧಕ ಜೀವಿಗೆ ತನ್ನಿಷ್ಟದೈವದಲ್ಲಿ ಅಚಲವಾದ ನಂಬುಗೆ. ಈ ಭವಸಾಗರವನ್ನು ದಾಟಲು ಆ ದೇವನ ಆಸರೆ ಬೇಕು. ಇಷ್ಟ ದೇವರನ್ನೇ 'ಅಂಬಿಗ'ನೆಂದು ಸಂಬೋಧಿಸಿ ಹಾಡುವ ಮಹಾದೇವಿಯಕ್ಕನ:

'ನಂಬಿದೆ ಗುರುವೇ ನಂಬಿದೆ ಸ್ವಾಮಿ
ನಂಬಿದೆ ಅಂಬಿಕಾ ರಮಣ ನೀನಂಬಿಗ' ||ಪ||

ಎಂದು ಆರಂಭವಾಗುವ ಸ್ವರವಚನದಲ್ಲಿ ಸಾಧಕ ಜೀವವು ವಿಷಯವಾಸನೆಯಿಂದ, ದುಃಖ-ದುರಿತಗಳ ಸೆಳವಿಗೆ ಸಿಕ್ಕು ಒದ್ದಾಡುವ ರೀತಿ ಪರಿಣಾಮಕಾರಿಯಾಗಿ ನಿರೂಪಿತವಾಗಿದೆ. ಈ ಭವಸಾಗರವನ್ನು ದಾಟಿಸಲು ಪ್ರಾರ್ಥಿಸುವ ಭಕ್ತಜೀವದ ಹಂಬಲ, ಆತುರ, ಆರ್ತತೆ ಕಣ್ಣಿಗೆ ಕಟ್ಟುವಂತೆ ಚಿತ್ರಿತವಾಗಿದೆ.

ಹೊಳೆಯ ಬರವ ನೋಡಂಬಿಗ
ಸೆಳಹು ಬಹಳ ಕಾಣಂಬಿಗ
ಸುಳುಹಿನೊಳಗೆ ಬಿದ್ದೆನಂಬಿಗ; ಎನ್ನ
ಸೆಳೆದುಕೊಳ್ಳೋ ನೀನಂಬಿಗ ||೧||

ಆರು ತೆರೆಯ ನೋಡಂಬಿಗ; ಬಲು
ಮೀರಿ ಬರುತಲಿವೆಲೆಯಂಬಿಗ;
ಹಾರಲೊದೆದು ಎನ್ನ ತಡಿಗೆ ಸೇರಿಸು ನೀ
ದೂರ ಮಾಡದಿರು ಅಂಬಿಗ; ||೨||

ತುಂಬಿದ ಹರಿಗೋಲಂಬಿಗ; ಅದ
ಕೊಂಬತ್ತು ಛಿದ್ರನೋಡಂಬಿಗ;
ಸಂಭ್ರಮವನು ನೋಡಂಬಿಗ; ಇದ
ರಿಂಬನರಿದು ತೆಗೆಯಂಬಿಗ ||೩||

ಹತ್ತು ಹತ್ತು ನೋಡಂಬಿಗ
ಹತ್ತಿದರ್ಬವರು ಅಂಬಿಗ
ಮುತ್ತಿಗೆಗೊಳಗಾದೆನಂಬಿಗ, ಎನ್ನ
ನೆತ್ತಿಕೊಳ್ಳೋ ನೀನಂಬಿಗ ||೪||

ಸತ್ಯವೆಂಬ ಹುಟ್ಟಂಬಿಗ ಸ
ದ್ಭಕ್ತಿಯೆಂಬ ಪಥವಂಬಿಗ
ನಿತ್ಯಮುಕ್ತ ನಮ್ಮ ಚೆನ್ನಮಲ್ಲಿಕಾರ್ಜುನನ
ಮುಕ್ತಿಮಂಟಪಕೊಯ್ಯೋ ಅಂಬಿಗ[೪] ||೫||

ಈ ಗೀತೆಯಲ್ಲಿ ವಿಶ್ವದ ಚರಾಚರಗಳ ಚಾಲಕ ಶಕ್ತಿಯನ್ನು ಅಂಬಿಗ ಎಂದು ಕರೆಯಲಾಗಿದೆ. ಮಾತು ಮಾತಿಗೆ ಬರುವ ಅಂಬಿಗ ಎಂಬ ಮೊರೆ; ಆರ್ತತೆಯನ್ನು ದಟ್ಟವಾಗಿಸುತ್ತಾ ಹೋಗುವುದು. ಉಕ್ಕೇರಿದ ಪ್ರವಾಹ; ಅದರ ಮರಣಾಂತಿಕ ಸುಳಿಗಳು, ಅಲ್ಲಿ ಸಾಗುತ್ತಿರುವ

---

೪. ರಾಜೂರ ವೀರಣ್ಣ(ಸಂ): ಶಿವಯೋಗ ಪ್ರದೀಪಿಕೆ, ಪು. ೨ ಮತ್ತು ೩.

ಛಿದ್ರಗಳಿರುವ ದೋಣಿ ಇವುಗಳ ಚಿತ್ರ ಬದುಕಿನ ನಿರರ್ಥಕ ಹೋರಾಟಕ್ಕೆ ಒಡ್ಡಿದ ದೃಶ್ಯವತ್ತಾದ ಪ್ರತಿಮೆಯಾಗಿ ನಿಲ್ಲುವುದು . . . . . ಸರ್ವಾರ್ಪಣೆ ಶರಣಾಗತಿಗಳ ಭಕ್ತಿ-ನಿರ್ಭರತೆಗಳನ್ನು ಕೇವಲ ಹೇಳಿಕೆಯಾಗಿಯಲ್ಲ; ಒಂದು ಘಟನೆಯಾಗಿ ತೋಡಿಕೊಳ್ಳುವುದು ಈ ಗೀತೆಯ ವೈಶಿಷ್ಟ್ಯವಾಗಿದೆ.[೫]

ಬಸವಾದಿ ಶಿವಶರಣರ ಸ್ವರವಚನಗಳ ಭಾಷೆ ಎಷ್ಟು ನೇರ ಮತ್ತು ಸರಳವೋ, ಅಷ್ಟೇ ತೀರ ಗೂಢ ಮತ್ತು ಗಂಭೀರವಾಗಿರುವುದರಿಂದ ಪರಿಣಾಮದಲ್ಲಿ ತೀವ್ರತೆ ಕಡಿಮೆಯಾಗುತ್ತದೆ. ಆದರೆ ಸೂರು ಹಿಡಿದು ಹಾಡಿದಾಗ ಅವು ಸಂಪೂರ್ಣ ತುಂಬಿಕೊಂಡು ಸೊಕ್ಕುತ್ತವೆ, ಉಕ್ಕುತ್ತವೆ.

## ನಿಜಗುಣ ಶಿವಯೋಗಿಯುಗ:

ನಿಜಗುಣಶಿವಯೋಗಿಗಳು ಸ್ವರವಚನಸಾಹಿತ್ಯವನ್ನು ಸಾರ್ಥಕವಾಗಿ ಬಳಸಿ, ಬೆಳೆಸಿದವರು. ಈ ಗೀತ ಪ್ರಕಾರವು ಅವರ ಕೈಯಲ್ಲಿ 'ಕೈವಲ್ಯ' ಪದವಿಗೇರಿತು. ಅಸಾಮಾನ್ಯ ಪಾಂಡಿತ್ಯ, ಉದ್ದಾಮ ಕಾವ್ಯಪ್ರತಿಭೆ, ವೀರವಿರಕ್ತಿ, ತೇಜೋಮಯವಾದ ಅನುಭಾವ, ವಿಪುಲ ಕಾವ್ಯನಿರ್ಮಾಣ, ಆಧ್ಯಾತ್ಮಜ್ಞಾನಕೋಶದ ರಚನೆ ಇವುಗಳ ಮೂಲಕ ನಿಜಗುಣರ ಕೃತಿಗಳು ಕನ್ನಡಸಾಹಿತ್ಯಕ್ಕೆ ಅಪೂರ್ವಕಾಂತಿಯನ್ನು ತಂದಿವೆ.[೬]

ನಿಜಗುಣಶಿವಯೋಗಿಗಳು ತಮ್ಮ ೧೭೪ ಹಾಡುಗಳನ್ನು ಐದು ಸ್ಥಲಗಳಲ್ಲಿ ಹೊಂದಿಸಿ, 'ಕೈವಲ್ಯ ಪದ್ಧತಿ' ಎಂಬ ಸ್ವತಂತ್ರ ಸ್ವರವಚನಸಂಕಲನವನ್ನು ಮೊತ್ತ ಮೊದಲ ಬಾರಿಗೆ ಹೊರತಂದರು. ಇದರಲ್ಲಿ ಗಹನವೂ ಗೂಢವೂ ಆದ ವಿಷಯವನ್ನು ಸರಳವೂ ಸುಂದರವೂ ಆದ ರೀತಿಯಲ್ಲಿ ನಿರೂಪಿಸಲಾಗಿದೆ. 'ಆರು ನಾನೆಂದು ವಿಚಾರಿಸು' ಎಂಬ ಈ ಸಂಕಲನದ ಪ್ರಥಮ ಸ್ವರವಚನವು ತುಂಬ ರೋಚಕವಾಗಿದೆ; ಬೋಧನಾತ್ಮಕವೂ ಆಗಿದೆ. ಅದರ ಅಮೃತ ರುಚಿಯನ್ನು ನಿಜಗುಣರಿಂದಲೇ ಕೇಳಬೇಕು.

'ದುರಿತ ಕರ್ಮವನೊಲ್ಲದಿರು; ಪುಣ್ಯವನೆ ಮಾಡು, ಹರನಡಿಯ ಪಿಡಿ; ಶಾಂತರೊಡನಾಡು, ಜೀವರೊಳು ಕರುಣವಿರಲಿ; ನೀತಿವಿದನಾಗು, ಪೊರ್ದಿದರಂ ಪೊರೆ, ಇಹದಲ್ಲಿ ಆರನೂ ನಿಂದಿಸಿ ನುಡಿಯದಿರು; ಮನಸಿಗೆ ಬಂದಂತೆ ನಡೆಯದಿರು; ಪುಸಿಯದೆ ಕುಂದುವಡೆಯದೆ ಇರು; ಕಾಮಾದಿಗಳನ್ನು ಜಯಿಸು; ಭವಮಾಲೆಗೆ ಅಲಸು; ಇರು; ಎಡರು ಬಂದು ಕವಿಯಲು ಅಂಜದೆ ಇರು; ಸಂಪದದೊಳು ಮದವ ಅಳಿದು ಇರು; ನಿನ್ನೊಳು ಏಕೋಭಾವನೆಯಿಂದ ಒಡಗೂಡು.

ನೀತಿ, ಸಂಸ್ಕೃತಿ, ಆಧ್ಯಾತ್ಮ ತತ್ತ್ವ ಇತ್ಯಾದಿಗಳನ್ನು ಇದಕ್ಕಿಂತಲೂ ಸುಲಭವಾಗಿ, ಸುಂದರವಾಗಿ, ಅರ್ಥಪೂರ್ಣವಾಗಿ ವಿವರಿಸುವುದು ಸಾಧ್ಯವಿಲ್ಲವೆಂದು ತೋರುತ್ತಿದೆ.

---

೫. ವೆಂಕಟೇಶಮೂರ್ತಿ ಎಚ್. ಎಸ್: ಕೀರ್ತನಕಾರರು, ಪು. ೭೮.
೬. ಮಾಳವಾಡ, ಸ. ಸ.: ಕಾವ್ಯ ಮತ್ತು ಜೀವನಚಿತ್ರಣ ಪು. ೧೦೦.

ಮುತ್ತಿನ ಹಾರದಂತಿರುವ ಇಂತಹ ನುಡಿಗಡಣ ನಿಜಗುಣರ ವಿಪುಲ ಕೃತಿಗಳಲ್ಲಿ ತುಂಬಿ ಬಂದಿದೆ. ಇಂತಹ ಭಾಂಡಾರ ಕನ್ನಡಿಗರದಾಗಿದೆ.[೭]

"ಜಾಣನು ಲೌಕಿಕ ಪಾರಮಾರ್ಥವೆರಡನು
ಮಾಣದೆ ಕೂಡಿ ನಡೆಸುತಿಹನಿಂತು ||ಪ||

ಎಂಬ ಹಾಡಿನಲ್ಲಿ ಲೌಕಿಕ, ಪಾರಮಾರ್ಥಗಳೆರಡನ್ನೂ ಏಕಕಾಲದಲ್ಲಿ ನಡೆಸುವವನ ಜಾಣ್ಮೆಯ ಚಿಂತನವಿದೆ. ತಾಯಿಯ ಮೊಲೆಯುಣ್ಣುವ ಮಗು ಒಂದು ಸ್ತನಪಾನ ಮಾಡುತ್ತ, ಇನ್ನೊಂದನ್ನು ಬಿಡದೆ ಹಿಡಿದುಕೊಳ್ಳುವಂತೆ ಎಂಬಲ್ಲಿ ಬಳಸಿದ ಉಪಮೆ ಕವಿಯ ದರ್ಶನದ ಪ್ರತೀಕದಂತಿದೆ.[೮]

ಕೈವಲ್ಯಪದ್ಧತಿಯಲ್ಲಿರುವ ಸ್ವರವಚನಗಳ ಗುರಿ ಸರಳವಾಗಿ, ನಿಚ್ಚಳವಾಗಿ ಜನಸಾಮಾನ್ಯರಿಗೆ ಮುಟ್ಟುವುದೇ ಆಗಿದೆ. ಮನವೆಂಬ ಕೋಗಿಲೆಯನ್ನು ಉದ್ದೇಶಿಸಿ ಪರಿಪರಿಯಾಗಿ ಮಾಡಿದ ಹಿತೋಪದೇಶ ತುಂಬ ಸೊಗಸಾಗಿ ಮೂಡಿಬಂದಿದೆ.

ಕೋಗಿಲೆ ಚೆಲ್ವ ಕೋಗಿಲೆ ಮುದ್ದು
ಕೋಗಿಲೆ ಜಾಣ ಕೋಗಿಲೆ ||ಪ||

ಹಿಂದೆ ತಪದೊಳೀಶನೊಂದಿರುತಿರಲೆಚ್ಚು
ಚೆಂದ ಕಾಮನ ಬಿಟ್ಟು ಕೋಗಿಲೆ
ಬಂದು ಬೇಗದಿ ಬಾಲೇಂದುಧರನ ಕೂಡಿ
ಕುಂದದೆ ನೀ ಬಾಳು ಕೋಗಿಲೆ ||೧||

ಮನುಮುನಿಗಳ ನೀತಿಯನು ಕೆಡಿಸುವ ದುಷ್ಟ
ಮನಸಿಜನನು ಮೀರಿ ಕೋಗಿಲೆ
ಘನಪದವನು ತನ್ನ ನೆನೆವರ್ಗೊಲಿದೀವ
ಧನದ ಮಿತ್ರನ ಸಾರು ಕೋಗಿಲೆ ||೨||

ಎಂದು ಮುಂದುವರಿಯುವ ಈ ಸ್ವರವಚನದಲ್ಲಿ ಕವಿಯ ಕಲ್ಪನಾವಿಲಾಸವಿದೆ. ಸೌಂದರ್ಯಪ್ರಜ್ಞೆ ಅರಳಿ ನಿಂತಿದೆ. 'ಕನ್ನಡ ಸಾಹಿತ್ಯಪ್ರಪಂಚದ ಕೋಗಿಲೆ ಕಾಮನ ಬಳಗಕ್ಕೂ ಆಧ್ಯಾತ್ಮ ಸೀಮೆಯ ಕೋಗಿಲೆ ಶಿವನ ಬಳಗಕ್ಕೂ ಸೇರಿರುವುದು ಪ್ರಸಿದ್ಧವಾಗಿದೆ . . . . . ಸಾಹಿತ್ಯ ಮತ್ತು ಆಧ್ಯಾತ್ಮಕ್ಕೆ ಎಲ್ಲೋ ಕೊಂಡಿ ಹಾಕಿದಂತಿದೆ ಈ ಹಾಡು. ಕಾಮನ ಬಳಗವನ್ನು ಬಿಟ್ಟು, ಶಿವನ ಬಳಗ ಸೇರುವಂತೆ ಕವಿ ಕೋಗಿಲೆಯನ್ನು ಒಲಿಸುವಾಗ ಭೋಗದ

---

೭. ಮಾಳವಾಡ, ಸ. ಸ.: - ಅದೇ- ಪು. ೧೧೧ ಮತ್ತು ೧೦೨.

೮. ವಾಲಿ, ಎಂ. ಎಸ್: ವೀರಶೈವ ಅನುಭಾವ ಪದಗಳ ಛಂದಸ್ಸು ಹಾಗೂ ಕಾವ್ಯಾಂಶಗಳು(ಘನಶ್ರೀ) ಪು. ೨೩೮.

೯. ನಾಗಭೂಷಣ ಶಾಸ್ತ್ರಿಗಳು: (ಸಂ): ನಿಜಗುಣಶಿವಯೋಗಿಗಳ ಕೈವಲ್ಯ ಪದ್ಧತಿ, ಪು. ೩೭.

ನಶ್ವರತೆ, ನಿರುಪಯುಕ್ತತೆಯನ್ನೂ ಯೋಗದ ಚಿರಂತನತೆ ಅಪೂರ್ವತೆಯನ್ನೂ ಅಕ್ಕ-ಪಕ್ಕದಲ್ಲಿಟ್ಟು ವರ್ಣಿಸುತ್ತಾ ಹೋಗುತ್ತಾರೆ. ತಪ್ಪುಮಾಡಿದವರನ್ನು ತಿದ್ದುವಾಗ ಕಂಡುಬರುವ, ಅನುಕಂಪ, ದಯಾರ್ದ್ರತೆಗಳು ನಿಜಗುಣರ ವ್ಯಕ್ತಿತ್ವಕ್ಕೆ ತಕ್ಕವಾಗಿವೆ. ಸಂಬೋಧನೆಯಲ್ಲಿ, ಬಳಸುವ ವಿಶೇಷಣಗಳಲ್ಲಿ ಹಟಮಾರಿ ಮಗುವನ್ನು ರಮಿಸಿ ಹೇಳುವ ಧಾಟಿಯಿದೆ.[೧೦]

ಸೃಷ್ಟಿಕರ್ತನಾದ ಶಂಭುವು ವಿಶ್ವವನ್ನು ನಿರ್ಮಿಸಿದುದರ ಜೊತೆಗೆ ಅದರಲ್ಲಿ ಹಿತ-ಅಹಿತಗಳೆರಡನ್ನೂ ಸೃಷ್ಟಿಸಿದ್ದಾನೆ ಎಂಬುದು ನಿಜಗುಣರ ನಿಲುವು. ಅವರ ಪ್ರಾರ್ಥನೆಯ ಪದ್ಯವೊಂದು ಹೀಗಿದೆ:

'ನೀನೊಲಿಯದ ನಿಮಿಷವೆ ಪಲವರುಷವ
ದಾನೆಂತುಳಿವೆನು ಮನ್ನಿಸು ದೇವ ||ಪ||

ಜ್ಞಾನ ವಿರೋಧಿ ಮಾಯಾವಿಕೃತಿ ಬಹು
ಧಾನ್ಯದೆ ಶುಕ್ಲಧಾತುಗಳಾಗೆ
ಈ ನಿಖಿಳ ಪ್ರಜೋತ್ಪತ್ತಿಯನವರೊಳು
ನೀನುಂಟುಮಾಳ್ಪೆ ಸರ್ವೇಶ್ವರ ||೧||

ಮುಳಿದು ಮನ್ಮಥನ ವಿಕ್ರಮವನು ಜಯಿಸಿ ಮು
ಪ್ಪೊಳಲದುರ್ಮುಖಿ ರಾಕ್ಷಸರನಿಕ್ಕಿ
ನಳಪಾರ್ಥಿವಾದಿ ಶ್ರೀ ಮುಖದ ಸೌಮ್ಯರಿಂಗೆ ಮಂ
ಜುಳಕರಾನಂದವೀವನುಪಮ ||೨||

ಭಾವಿಸೆ ಪ್ರಭವಾದಿ ಕ್ಷಯ ಕಡೆಯಾದವರ
ಭಾವ ವಿಕಾರತ್ವ ವಿರಹಿತ
ಜೀವ ದುಃಖಾರ್ಣವೋತ್ತರಣ ಪ್ಲವ ಮಹಿ
ಮಾವಿಭವದ ಶಂಭುಲಿಂಗವೆ'[೧೧] ||೩||

'ಈ ಪದ್ಯದಲ್ಲಿ 'ವಿರೋಧಿ', 'ವಿಕೃತಿ', 'ಬಹುಧಾನ್ಯ', 'ಶುಕ್ಲ', 'ಧಾತು', 'ವಿಕ್ರಮ', 'ದುರ್ಮುಖಿ', 'ಪ್ರಭವ', 'ರಾಕ್ಷಸ' ಮೊದಲಾದ ಪದಗಳಿಗೆ ಶ್ಲೇಷಾರ್ಥವಿದ್ದು ಅವೆಲ್ಲವೂ ನಮ್ಮ ಸಂವತ್ಸರಗಳ ಹೆಸರನ್ನು ಸೂಚಿಸುತ್ತವೆ. ನಮ್ಮ 'ಜೀವ'ನ ಸಂವತ್ಸರಗಳನ್ನೂ ಕವಿಯು ತಿಳಿಸುತ್ತ, ಆ ಸಂವತ್ಸರಗಳನ್ನು ಗೆಲ್ಲುವ ರೀತಿಯನ್ನು ಅತಿ ಕಲಾತ್ಮಕವಾಗಿ ವರ್ಣಿಸಿದ್ದಾನೆ'.[೧೨]

೧೦. ವೆಂಕಟೇಶಮೂರ್ತಿ ಎಚ್. ಎಸ್: ಕೀರ್ತನಕಾರರು, ಪು. ೧೦೯ ಮತ್ತು ೧೧೦.
೧೧. ನಾಗಭೂಷಣಶಾಸ್ತ್ರಿಗಳು: (ಸಂ): ನಿಜಗುಣಶಿವಯೋಗಿಗಳ ಕೈವಲ್ಯ ಪದ್ಧತಿ, ಪು. ೩೩.
೧೨. ಜವಳಿ ಬಿ. ಸಿ.: 'ಕೈವಲ್ಯ ಪದ್ಧತಿ' (ನಿಜಗುಣ ಶಿವಯೋಗಿಗಳು ಹಾಗೂ ಅವರ ಕೃತಿಗಳು)ಪು. ೨೪-೨೫.

ನಿಜಗುಣ ಶಿವಯೋಗಿಗಳ 'ಕೈವಲ್ಯ ಪದ್ಧತಿ'ಯಲ್ಲಿ ಉತ್ತಮ ಭಾವಗೀತೆ, ಕಾವ್ಯದ ಮಾಧುರ್ಯ, ತತ್ವೋಪದೇಶ, ಕಲ್ಪನಾವಿಲಾಸ ಮೊದಲಾದ ಗುಣಗಳನ್ನು ಕಾಣುತ್ತೇವೆ. . . . ಅವರ ವಾಣಿ ಪ್ರಾಸಾದಿಕ; ಕಾಂತಿಯುತ. ಅವರ ದೃಷ್ಟಾಂತಗಳು ಮಾರ್ಮಿಕ, ಪರಿಣಾಮಕಾರಿ. ಪದ್ಯಗಳಲ್ಲಿ ರಾಗ ಮಾಧುರ್ಯದೊಡನೆ ಭಾಷೆಯ ಸೌಂದರ್ಯ, ಭಾವದ ಜೋಡಣೆ ಇವೆ.[೧೨] ಅವರ ಈ ಎಲ್ಲ ಹಾಡುಗಳಲ್ಲಿ ಕಾಣುವ ಭಕ್ತಿಭಾವದ ಮಿಡಿತ, ಪ್ರಾಸದ ಸೊಗಸು, ಪದವಿನ್ಯಾಸದ ಬೆಡಗು, ಛಂದಸ್ಸಿನ ವೈವಿಧ್ಯತೆ, ಅಲಂಕಾರಗಳ ಮಾಧುರ್ಯ, ಸೌಂದರ್ಯಪ್ರಜ್ಞೆ, ಸಂಗೀತದ ನಯಗಾರಿಕೆ ಇವು ಎತ್ತಿ ಹೇಳಬೇಕಾದ ಅಂಶಗಳು.[೧೩] ಇದೇ ರೀತಿ ಈ ಯುಗದಲ್ಲಿ ಪರಿಗಣಿಸಬೇಕಾದ ಕರಸ್ಥಲದ ನಾಗಿದೇವ, ಸರ್ಪಭೂಷಣ ಶಿವಯೋಗಿ, ಮುಪ್ಪಿನ ಷಡಕ್ಷರಿಗಳ ರಚನೆಗಳೂ ಸಾಹಿತ್ಯದೃಷ್ಟಿಯಿಂದ ಗಮನಾರ್ಹವೆನಿಸಿವೆ.

## ಕಡಕೋಳ ಮಡಿವಾಳಪ್ಪ - ಕೂಡಲೂರು ಬಸವಲಿಂಗಶರಣಯುಗ

ಕಡಕೋಳ ಮಡಿವಾಳಪ್ಪನವರು ಅನುಭಾವಿ ಕವಿಗಳು. ಇವರ ಸ್ವರವಚನಗಳು ಶರಣ ತತ್ತ್ವಕ್ಕೆ ಬರೆದ ಭಾಷ್ಯದಂತೆ ಇವೆ. ಅವು ಕಾವ್ಯಸೌಂದರ್ಯ, ತತ್ತ್ವಗಾಂಭೀರ್ಯ, ಭಾವಬಂಧುರತೆಯಿಂದ ಒಡಮೂಡಿ ಬಂದಿವೆ. ಮಡಿವಾಳಪ್ಪನವರು ಆಡುನುಡಿಯನ್ನೇ ಅನುಭಾವದ ಅಭಿವ್ಯಕ್ತಿಗೆ ಬಳಸಿದ್ದಾರೆ. ಜನಪದರ ಭಾಷೆಗೆ ಆಧ್ಯಾತ್ಮದ ದೀಕ್ಷೆ ನೀಡಿದ್ದಾರೆ. ಗಾಂಪರ ವಾಣಿಗೆ ಕಾವ್ಯವಾಹಕ ಶಕ್ತಿ ಒದಗಿಸಿದ್ದಾರೆ. ಇವರ ಸ್ವರವಚನಗಳಲ್ಲಿ ಅಲ್ಲಲ್ಲಿ ಅಶ್ಲೀಲವೆನ್ನಬಹುದಾದ ಶಬ್ದಸಮೂಹಗಳು ಕಂಡುಬರುತ್ತವೆ. ಆದರೆ ಅವುಗಳ ಹಿಂದಿರುವ ತಾತ್ತ್ವಿಕ ಅರ್ಥ, ಸಾಮಾಜಿಕ ಕಳಕಳಿ, ತಪ್ಪನ್ನು ಪ್ರತಿಭಟಿಸುವ ಮನೋಭಾವ ನಮಗೆ ಅಪ್ಯಾಯಮಾನವೆನ್ನಿಸುತ್ತವೆ. ಇಲ್ಲಿ ಬರುವ ಪ್ರಾಸಾನುಪ್ರಾಸ, ಆಡುಮಾತು, ನಾಣ್ಣುಡಿಗಳು ಸಹೃದಯರ ಹೃನ್ಮನವನ್ನು ಸೂರೆಗೊಳ್ಳುತ್ತವೆ. ಏಕತಾರಿಯನ್ನು ಹಿಡಿದು, ತಂತಿ ಮೀಟುತ್ತ ತಾಳ-ದಮಡಿಗಳೊಂದಿಗೆ ಹಾಡಿದರಂತೂ ಹೃದಯ ತುಂಬಿ ಆರ್ದ್ರವಾಗುತ್ತದೆ. ಅಂತೆಯೇ ಅವು ಪಂಡಿತ ಪಾಮರರೆಲ್ಲರ ಪ್ರೀತಿಗೆ ಪಾತ್ರವಾಗಿವೆ.

ಮಡಿವಾಳಪ್ಪನವರು ಒಂದು ಹಾಡಿನಲ್ಲಿ ದೇಹವನ್ನು ಊರಿಗೆ ಹೋಲಿಸಿ ವರ್ಣಿಸಿದ್ದಾರೆ. ದೇಹದಲ್ಲಿ ಸಿಲುಕಿಕೊಂಡಿರುವ ಜೀವಾತ್ಮನು ಪಡುತ್ತಿರುವ ವೇದನೆಯನ್ನು ಈ ಪ್ರತಿಮಾ ರೂಪದ ಹಾಡು ಮಾರ್ಮಿಕವಾಗಿ ಹಿಡಿದಿಟ್ಟಿದ್ದನ್ನು ಅರಿಯಬಹುದು.[೧೪]

ನಾ ಬರಬಾರದಿತ್ತು ಈ ಊರಿಗೆ
ಬಂದು ಬಿದ್ದೇನೆ ಮಾಯದ ಬಲೆಯೊಳಗ
ಹೇಸಿಕಿ ಮಲಮೂತ್ರದೊಳಗ ||ಪ||

---

೧೩. ಜವಳಿ ಬಿ. ಸಿ.: 'ಕೈವಲ್ಯ ಪದ್ಧತಿ' (ನಿಜಗುಣ ಶಿವಯೋಗಿಗಳು ಹಾಗೂ ಅವರ ಕೃತಿಗಳು)ಪು. ೨೪-೨೫

೧೪. ವಾಲಿ. ಎಂ. ಎನ್: ವೀರಶೈವ ಅನುಭಾವ ಪದಗಳ ಛಂದಸ್ಸು ಹಾಗೂ ಕಾವ್ಯಾಂಶಗಳು(ಘನಶ್ರೀ), ಪು. ೨೩೯.

ಒಂಬತ್ತು ಬಾಗಿಲ ಊರೊಳಗ
ನಾ ಹೇಗೆ ದಾಟಲಿ ಇದರೊಳಗ
ಎಂಟು ಮಂದಿ ಕಳ್ಳರ ಭಯ ಆದೆನಗ
ಬೇಸರಾಯಿತು ಈ ಊರೆನಗ ॥೧॥

ಮೂವರ ಸಿಟ್ಟು ಆದ ಎನ್ನಮ್ಯಾಗ
ಐದು ಮಂದಿ ಘಾರ್‍ಯಾಕಾರ ಹಾರೆನಗ
ಇಷ್ಟು ಎಲ್ಲಾ ತಪ್ಪಿಸಿ ಹೋಗುದರೊಳಗ
ಇದಿಮಾಯಿ ಗಂಟ ಬಿತ್ತು ಹಾದ್ಯಾಗ[೧೧] ॥೨॥

ದೇಹವೆಂಬ ಊರಿಗೆ ಬರಲಾರದೆ ಬಂದ ಆತ್ಮನ ಪರಿತಪಿಸುವಿಕೆ ಈ ಹಾಡಿನಲ್ಲಿ ಹೃದಯಂಗಮವಾಗಿದೆ. ನವದ್ವಾರಗಳ, ಅಷ್ಟಮದಗಳ ಮಧ್ಯೆ ಸಿಲುಕಿ ಪರಮಾತ್ಮನ ಸಾನಿಧ್ಯಕ್ಕಾಗಿ ಹಾತೊರೆಯುವ ಪರಿ, ಮನಮುಟ್ಟುವಂತಿದೆ. ಮಲತ್ರಯಗಳ ಕಾಟ; ಪಂಚೇಂದ್ರಿಯಗಳ ಜಗ್ಗಾಟ ಹೇಗೆ ಸಾಧಕನ ಸಿದ್ಧಿಗೆ ಅಡ್ಡಿಯಾಗಿವೆ ಎಂಬುದರ ಚಿತ್ರಣ ಪ್ರತಿಮಾತ್ಮಕವಾಗಿದೆ.

ಮಡಿವಾಳಪ್ಪ ನಿಷ್ಠುರವಾದಿ, ಕಂಡದ್ದನ್ನು ಕಂಡಂತೆ ಹೇಳುವ ಧೀರ. ಹೀನ ಕೆಲಸದಲ್ಲಿ ತೊಡಗಿರುವವರನ್ನು (ಅತ) ನಾಯಿ, ಹುಚನಾಯಿಗಳ ಸಂಕೇತದ ಮೂಲಕ ವಿಡಂಬಿಸಿದ್ದಾರೆ(ನೆ).[೧೨]

ಉಂಡು ಮಲಗಿಕೊಂಬುವ ನಾಯಿ
ನಂಬಿದವರನು ಕೆಡಿಸುವ ನಾಯಿ
ಅವರ ಕಟ್ಟೆಯ ಮೇಲೆ ಕುಂತು
ಅವರ ಇಚ್ಛಾ ಹೇಳುವ ಲುಚ್ಚಾನಾಯಿ[೧೩]

ಹುಟ್ಟನ್ನೇ ತಮ್ಮಲ್ಲ ಯಶಸ್ಸಿನ ಗುಟ್ಟಾಗಿಸಿಕೊಂಡ ಕೆಲ ಪಟ್ಟಭದ್ರರು, ಮನುಷ್ಯ-ಮನುಷ್ಯರಲ್ಲೇ ಭೇದದ ಸೌಧ ನಿರ್ಮಿಸಿದ್ದಾರೆ. ಪರಸ್ಪರ ಮುಟ್ಟುತಟ್ಟು ಮಾಡದೆ ಮಡಿ-ಮೈಲಿಗೆ ಎಂದು ಅಡಿಗಡಿಗೆ ಹಾರುತ್ತಾರೆ. ಹುಚ್ಚೆದ್ದ ನಾಯಿಗಳಂತೆ ನಾ ಹೆಚ್ಚು ನೀ ಹೆಚ್ಚು ಎಂದು ಕಚ್ಚಾಡುತ್ತಾರೆ. ಇಂಥವರನ್ನು ಮಡಿವಾಳಪ್ಪನವರು;

ಉಚ್ಚ ನೀಚ ಅನ್ನತೀದಿ ಹುಚನಾಯಿ
ಉಚ್ಚೆಯೊಳಗ ಬಂದೀದಿ ಹುಚನಾಯಿ

೧೧. ಮಲ್ಲಿಕಾರ್ಜುನ ಶಿ. ಲಠ್ಠೆ: ಕಡಕೋಳ ಮಡಿವಾಳೇಶ್ವರ ವಿರಚಿತ ಸ್ವರವಚನಗಳು, ಪು. ೧೯೧.
೧೨. ಪೂಜಾರ ವ್ಹಿ. ಜಿ.: ಶರಣ ಸಾಹಿತ್ಯ ಮಾರ್ಗ, ಪು. ೧೨.
೧೩. ಮಲ್ಲಿಕಾರ್ಜುನ ಶಿ. ಲಠ್ಠೆ: ಕಡಕೋಳ ಮಡಿವಾಳೇಶ್ವರ ವಿರಚಿತ ಸ್ವರವಚನಗಳು, ಪು. ೯೯.

ಮುಟ್ಟಿ-ತಟ್ಟಿ ಅನ್ನತೀದಿ ಮಂಡಹೋಡಿ: ಮುಡ
ಚಿಟ್ಟಿನೊಳಗ ಬೆಳದಿ ಮರವಗೇಡಿ:ನೀ[೧೯]

ಎಂದು ಚುಚ್ಚುತ್ತಾರೆ.

ಮಡಿವಾಳಪ್ಪನವರ ಕೈಯಲ್ಲಿ ಭಾಷೆ ಹೇಗೆ ಬೇಕೋ ಹಾಗೆ ಬಾಗಿ ಬಳುಕಿ 'ಬದುಕು' ಮಾಡಿದೆ. 'ಸರ್ವಂಶಿವಮಯಂ' ಎಂಬ ಶರಣತತ್ತ್ವವು 'ವೀರಭಕ್ತ' ಎಂಬ ಸ್ವರವಚನದಲ್ಲಿ ಸುಲಭವಾಗಿ, ಶ್ರುತಿಸುಭಗವಾಗಿ ಹೊರಹೊಮ್ಮಿದೆ.

ರಾಗಿಗೆ ರೋಗಿಗೆ ಭೋಗಿಗೆ ಜೋಗಿಗೆ
ತ್ಯಾಗಿಗೆ ಯೋಗಿಗೆ ಶರಣಾರ್ಥಿ
ಮಾಗಿಗೆ ಬೇಗಿಗೆ ಕಾಗಿಗೆ ಗೂಗಿಗೆ
ಸೋಗಿಗೆ ಶೀಗಿಗೆ ಶರಣಾರ್ಥಿ

ಜಾರಿಗೆ ಜೋರಿಗೆ ಪೀರಿಗೆ
ವೀರಿಗೆ ಶೂರಗೆ ಶರಣಾರ್ಥಿ
ಊರಿಗೆ ದಾರಿಗೆ ನಾರಿಗೆ ನೀರಿಗೆ
ಮಾರಿಗೆ ಮೀರಿಗೆ ಶರಣಾರ್ಥಿ.[೨೦]

ಇಲ್ಲಿ ಪ್ರಾಸಾನುಪ್ರಾಸದ ಪ್ರವಾಹವೇ ಪ್ರವಹಿಸಿದೆ. 'ಪದಾರ್ಥ'ಗಳ ವಿದ್ಯುತ್ ಬೆಸುಗೆಯಿಂದಾಗಿ 'ಶಬ್ದವೈಚಿತ್ರ'ವುಂಟಾಗಿದೆ. ಸರ್ವಕ್ಕೂ ಶರಣು ಶರಣಾರ್ಥಿ ಎಂಬಲ್ಲಿ 'ಭಕ್ತಿ'ರಸದ ಘಟ್ಟಿಯಾಗಿದೆ. 'ಇಂಥ ಶಬ್ದಜಾಲವನ್ನು ಸೃಷ್ಟಿಸಿ ಕಾವ್ಯ ಕಟ್ಟುವ ಕಲೆ ಆತನಿಗೆ ಚೆನ್ನಾಗಿ ಸಿದ್ಧಿಸಿದೆ[೨೧]. ಮಡಿವಾಳಪ್ಪನವರ ಸ್ವರವಚನಗಳಲ್ಲಿ ಹಾಡುಗಾರಿಕೆ, ಪ್ರಾಸ, ಉಪಮೆ, ರೂಪಕಾದಿ ಅಲಂಕಾರಗಳಾಗಲಿ; ತತ್ತ್ವ ಸಿದ್ಧಾಂತ, ಅರ್ಥ ಭಾವವಾಗಲಿ ಅವರ ಪ್ರತಿಭಾನ್ವಿತ ಕವಿತ್ವಕ್ಕಂಟಿಕೊಂಡೇ ಬಂದಿವೆ. ಸಹಜ ಸುಂದರವಾಗಿವೆ.

ಉಪಮಾ, ರೂಪಕ, ದೃಷ್ಟಾಂತ ಮುಂತಾದ ಅರ್ಥಾಲಂಕಾರಗಳನ್ನೂ ಅನುಪ್ರಾಸ, ಚಿತ್ರಕವಿತ್ವ ಮುಂತಾದ ಶಬ್ದಾಲಂಕಾರಗಳನ್ನೂ ಮಡಿವಾಳಪ್ಪ ಸಹಜವೆನ್ನುವಂತೆ ಬಳಸಿ ತಮ್ಮ (ನ್ನ) ಸ್ವರವಚನಗಳನ್ನು ಸಹಜ ಕಾವ್ಯವಾಗಿಸಿದ್ದಾರೆ(ನೆ)[೨೨].

ಕೊಡಲೂರು ಬಸವಲಿಂಗ ಶರಣರು ಉತ್ತರ ಕರ್ನಾಟಕದ ಜನಪ್ರಿಯ ಸ್ವರವಚನಕಾರರು. ಜೀವನ ವೃತ್ತಿಯನ್ನು ಶಿವನ ತತ್ತ್ವವೆಂದು ಬಗೆದು ಬದುಕಿದವರು. ಸಾಮಾನ್ಯರೊಡನಿದ್ದೂ, ಅಸಾಮಾನ್ಯವಾಗಿ ಬಾಳಿದವರು. ಇವರು ಜನಪದ ಭಾಷೆಯನ್ನು ಬಳಸಿ ಅನೇಕ ಸ್ವರವಚನಗಳನ್ನು ರಚಿಸಿ ಪ್ರಸಿದ್ಧಿ ಪಡೆದಿದ್ದಾರೆ. ಶರಣಸತಿ-ಲಿಂಗಪತಿ,

---

೧೯. -ಅದೇ- ಪು. ೧೨೧.

೨೦. ಮಲ್ಲಿಕಾರ್ಜುನ ಶಿ. ಲಠ್ಠೆ: ಕಡಕೋಳ ಮಡಿವಾಳೇಶ್ವರ ವಿರಚಿತ ಸ್ವರವಚನಗಳು, ಪು. ೫೦.

೨೧. ಪೂಜಾರ ವ್ಹಿ. ಜಿ.: ಶರಣಸಾಹಿತ್ಯ ಮಾರ್ಗ, ಪು. ೨೨.

೨೨. ಪೂಜಾರ ವ್ಹಿ. ಜಿ. : ಬಸವಪಥ(ಸಪ್ಟೆಂಬರ್-೧೯೯೩)ಪು. ೨೫.

ಭಕ್ತಿ-ವಿರಕ್ತಿ; ಅರಿವು-ಆಧ್ಯಾತ್ಮಾದಿ ತತ್ತ್ವಗಳನ್ನು ತಮ್ಮ ಸ್ವರವಚನಗಳಲ್ಲಿ ಸೊಗಸಾಗಿ ಸೆರೆಹಿಡಿದಿದ್ದಾರೆ. ಶ್ರುತಿ ಸುಭಗವಾಗಿ ಹಾಡಿ ಜನಮನವನ್ನು ತಣಿಸಿದ್ದಾರೆ.

ವೀರಶೈವರು ಶರಣಸತಿ-ಲಿಂಗಪತಿ ಭಾವದ ಭಕ್ತಿಯನ್ನು ಅನುಷ್ಠಾನಗೊಳಿಸಿದವರು. ಶರಣ ಸತಿಯಾಗಿ ತನ್ನ ಪತಿ 'ಶಿವಲಿಂಗ'ನಿಗೆ ಅರ್ಪಿಸಿಕೊಳ್ಳುತ್ತಾನೆ. ಅಲೌಕಿಕ ಪತಿಯೊಡನೆ ಸಮರಸ ಸುಖವನ್ನು ಹೊಂದಿ ಆತ್ಯಂತಿಕ ಅನುಭವದಲ್ಲಿ ಮೈಮರೆಯುತ್ತಾನೆ.

ಹ್ಯಾಗೆ ಬಿಡುವೆನಮ್ಮ ನಾನಿವನ
ಸೊಗಸಿನ ಪ್ರಿಯನ
ಭೋಗ ರತಿಕಲೆ ನೆಲೆಯ ಬಲ್ಲವನ
ಸುಗುಣ ಸುಂದರನ ||ಪ||

ಅರಳಗಂಗಳೆ ಎಂದು ಕರೆವವನ। ಬೈತಲೆ
ಬೆರಳಿನಿಂದ ತಿದ್ದಿ ನೋಡುವವನ
ಹರಳ ಕುಂದಣ ಮೂಗುತಿಡುವವನ
ಪರಮಾನಂದ ಪಡುವ ಚದುರನ ||೧||

ಹತ್ತಿರ ಬಂದು ಸೆರಗು ಎಳೆವವನ
ಒತ್ತಿಸ್ತನಗಳ ಪಿಡಿಯುವವನ
ಎತ್ತಿ ಚುಂಬನ ಕೊಟ್ಟು ನಗುವವನ
ಮತ್ತೆ ಎಂಬತ್ತು ನಾಲ್ಕು ಕಲೆ ಬಲ್ಲವನ ||೨||

ಬಣ್ಣ ಬಣ್ಣದ ಸೀರೆ ಕೊಡುವವನ
ಉನ್ನತ ಕನ್ನಡಿ ತರುವವನ
ಹೊನ್ನ ಇಪ್ಪತ್ತೈದು ಕೊಡುವವನ
ನನ್ನ ನೋಡಿ ನೋಡಿ ಸುಖ ಪಡುವವನ ||೩||

ಮುತ್ತಿನ ವಾಲಿ ಕೊಡುವವನ
ಮತ್ತೆ ಬುಗುಡಿ ಜುಮುಕಿ ಇಡುವವನ
ಕಸ್ತೂರಿ ಹಣೆಗೆ ಹಚ್ಚಿ ತೀಡುವನ
'ಸುತ್ತ ಮುತ್ತ ನನ್ನ ತಿರುಗುವನ ||೪||

ತನ್ನ ದೇಹದ ಪರವೆ ಇಲ್ಲವಗ
ಎನ್ನ ಮೇಲೆ ದಯವು ಎಷ್ಟವಗ
ಧನ್ಯ ಕೂಡಲೂರೇಶ ಗುರು ಇವನ
ನನ್ನನೆಂದಿಗೂ ಬಿಡದವನ[೨೩] ||೫||

೨೩. ಶಾಂತರಸ: ಕೂಡಲೂರು ಬಸವಲಿಂಗ ಶರಣರ ಸ್ವರವಚನಗಳು, ಪು. ೩೦.

ಮೇಲು ನೋಟಕ್ಕೆ ಈ ಸ್ವರವಚನವು ಶೃಂಗಾರರಸದ ಚೆಲುಮೆಯಂತೆ ತೋರುತ್ತದೆ. ಲೌಕಿಕ ಸತಿಯೊಬ್ಬಳ ರತಿಭಾವದ ನಿರೂಪಣೆಯಂತೆ ಭಾಸವಾಗುತ್ತದೆ. ಆದರೆ ಒಳಗಡೆ ಭಕ್ತಿರಸ ಮಡುಗಟ್ಟಿದೆ. ಇಲ್ಲಿ ಬಳಸಿದ ರತಿಭೋಗದ ಉಪಮೆಗಳು; ಶಿವಯೋಗದ ಶಿಖರ ಹತ್ತಿರುವುದು ಅತ್ಯದ್ಭುತವಾಗಿದೆ. ಇಂಥ ಮಧುರಭಕ್ತಿಯ ಅನೇಕ ಸ್ವರವಚನಗಳನ್ನು ಕೂಡಲೂರು ಬಸವಲಿಂಗಶರಣರು ರಚಿಸಿದ್ದಾರೆ. ದಾಂಪತ್ಯದ ಉದಾಹರಣೆಗಳನ್ನೇ ಬಳಸಿ; ಲಿಂಗಾಂಗಸಾಮರಸ್ಯದ ತೊಡಕನ್ನು ಬಿಡಿಸಿ ಹರಡಿದ್ದಾರೆ.

ಕೂಡಲೂರು ಬಸವಲಿಂಗ ಶರಣರು 'ದುಡಿಮೆಯೇ ದೇವರು', 'ಕಾಯಕವೇ ಕೈಲಾಸ'ವೆಂದು ನೆರೆ ನಂಬಿದವರು. ವ್ಯಕ್ತಿಯು ಜೀವನ ನಿರ್ವಹಣೆಗಾಗಿ ಯಾವ ವೃತ್ತಿಯನ್ನೇ ಕೈಗೊಳ್ಳಲಿ, ಅಲ್ಲಿ ಶ್ರದ್ಧೆ, ನಿಷ್ಠೆ, ಪ್ರಾಮಾಣಿಕತೆಗಳಿದ್ದರೆ ಶಿವ ಖಂಡಿತವಾಗಿ ಒಲಿಯುತ್ತಾನೆ ಎಂಬುದು ಅವರ ನಿಲುವು. ಜೋಗೇರು, ಬಣಜಿಗರು, ಕುರುಬರು, ಒಕ್ಕಲಿಗರು, ಅಗಸರು ಎಂದು ಮುಂತಾಗಿ ತಮ್ಮನ್ನು ತಾವೇ ಸಂಬೋಧಿಸಿಕೊಂಡಿದ್ದಾರೆ. ಎಲ್ಲರೊಡನೆ ತಾದಾತ್ಮ್ಯ ಸಾಧಿಸಿ ಹಲವಾರು ಸ್ವರವಚನಗಳನ್ನು ರಚಿಸಿದ್ದಾರೆ. ಅಂಥವುಗಳಲ್ಲಿ ಒಂದು ಹಾಡು ಹೀಗಿದೆ:

ಜೋಗೇರು ನಾವು ಜೋಗೇರು
ಸೊಗಸಿನ ವಸ್ತುಗಳ ರಾಗದಿಂ ಮಾರುವ ||ಪ||

ಬಣ್ಣದ ಬೈಲೊಣಕಿ ಸಣ್ಣ ಭರಣಿ ಗುಳ್ಳಿ
ಭಿನ್ನ ಭಾವಗಳೆಲ್ಲ ಹೊನ್ನಿಲ್ಲದೆ ಮಾರುವ ||೧||

ಷಡ್ವರ್ಗ ಷಣ್ಮುಖಿ ಕಡಗ ಕಂಕಣವನ್ನು
ವಡಬಾಗ್ನಿಯೊಳಗಿನ ಡಬ್ಬಣ ಮಾರುವ ||೨||

ಸಂದ ಬ್ಯಾಳಿಯ ಮಣಿ ನಂದಪುರದಲಿ ತಂದು
ಒಂದು ಬಿಡದೆ ಸೂಜಿ ಕರಿಮಣಿ ಮಾರುವ ||೩||

ಹಾಲುಮಣಿ ಹವಳಸರ ಮೇಲು ಮಸ್ತಕದ ಕೀಲಿ
ನೆಲೆಯಿಲ್ಲದ ವಸ್ತು ಬೆಲೆಯಿಲ್ಲದೆ ಮಾರುವ ||೪||

ಚಿಲ್ಲರ ಸಾಮಾನು ಎಲ್ಲಾರ ಮಾರಿಕೊಂಡು
ಕೂಡಲೂರೇಶ ಬದುಕಂತ ಹೇಳಿದ [೨೪] ||೫||

ನಾವು ಸೊಗಸಾದ ವಸ್ತುಗಳನ್ನು ಪ್ರೀತಿಯಿಂದ ಮಾರುವ ಜೋಗೇರು. ಬಣ್ಣದ ಒನಕೆ, ಸಣ್ಣ ಭರಣಿ, ಕುಳ್ಳಿ ಮೊದಲಾದುವನ್ನು ಹೊನ್ನು-ಹಣ, ಬೆಲೆ ಇಲ್ಲದೇ ಮಾರುವವರು. ಷಡ್ವರ್ಗ, ಷಣ್ಮುಖಿ ಎಂಬ ಕಡಗ-ಕಂಕಣಗಳನ್ನು 'ಬಡಬಾಗ್ನಿ'ಯೊಳಗಿನ ಡಬ್ಬಣಗಳನ್ನು ಮಾರುತ್ತೇವೆ. ನಂದಪುರದಿಂದ ಬೇಳೆಯ ಮಣಿ ತಂದಿದ್ದೇವೆ. ಸೂಜಿ,

೨೪. ಶಾಂತರಸ: ಕೂಡಲೂರು ಬಸವಲಿಂಗ ಶರಣರ ಸ್ವರವಚನಗಳು, ಪು. ೭೭.

ಕಿರಿಮಣಿ ಇವೆ. ಹಾಲುಮಣಿ, ಹವಳಸರ, ಮೇಲು ಮಸ್ತಕದ ಕೀಲಿ ಮೊದಲಾದ ನೆಲೆ ಇಲ್ಲದ ವಸ್ತುಗಳನ್ನು ಬೆಲೆ ಇಲ್ಲದೇ ಮಾರುವವರು. ಚಿಲ್ಲರ ಸಾಮಾನುಗಳನ್ನು ಎಲ್ಲಿಯಾದರೂ ಮಾರಿಕೊಂಡು ಬದುಕು ಎಂದು ಕೂಡಲೂರೇಶನು ಹೇಳಿದ್ದಾನೆ.[೨೫] ಎಂಬುದು ಈ ಸ್ವರವಚನದ ಸಾಮಾನ್ಯರ್ಥವಾದರೂ, ಇದು ಅನಾವರಣಗೊಳಿಸುವ ವಿಶೇಷಾರ್ಥ ಆಧ್ಯಾತ್ಮಿಕವಾದುದು. ಹೀಗೆ ಸಾಮಾನ್ಯಾರ್ಥದಿಂದ ವಿಶೇಷಾರ್ಥ ಹೊರಡಿಸುವುದು; ಲೌಕಿಕ ಉದಾಹರಣೆಗಳಿಂದ ಅನುಭಾವದ ಅನಾವರಣ ಮಾಡಿಸುವುದು ಕೂಡಲೂರು ಬಸವಲಿಂಗ ಶರಣರಿಗೆ ನೀರು ಕುಡಿದಷ್ಟೇ ಸರಳವಾಗಿದೆ. ಈ ಯುಗದಲ್ಲಿ ನೂರಾರು ಶರಣರು ತಲೆದೋರಿ ಸಾವಿರಾರು ಸ್ವರವಚನ ರಚಿಸಿದ್ದು, ಅವುಗಳ ಅಧ್ಯಯನ ತೀರ ಅವಶ್ಯವೆನಿಸಿದೆ.

ಸುಮಾರು ಎಂಟುನೂರು ವರ್ಷಗಳ ದೀರ್ಘಾವಧಿಯಿಂದ ಬೆಳೆದು ಬಂದ ಸ್ವರವಚನಗಳು ಬಿಡಿ ಬಿಡಿಯಾಗಿ ಅರಳಿ ನಿಂತ ಕಾವ್ಯ ಕುಸುಮಗಳಾಗಿವೆ. ಈ ಸಾಹಿತ್ಯದಲ್ಲಿ ಬಳಕೆಯಾದ ವಸ್ತು, ಭಾಷೆ, ರೂಪಕ, ಸಂಕೇತ, ಅಲಂಕಾರಗಳು ಬಾಹ್ಯ ಸಾಹಿತ್ಯಾಂಶಗಳಾದರೆ; ಅನುಭಾವ, ಚಿಂತನೆ, ಕಲ್ಪನೆ, ನಂಬಿಕೆ, ವಿಚಾರ, ದರ್ಶನ ಇತ್ಯಾದಿಗಳು ಆಂತರಿಕ ಸಾಹಿತ್ಯಾಂಶಗಳಾಗಿವೆ. ಸ್ವರವಚನಗಳಲ್ಲಿ ಭಾವನಿರ್ಭರತೆಯೊಂದಿಗೆ; ಸೌಂದರ್ಯಪ್ರಜ್ಞೆಯೂ ಹದವರಿತು ಬೆರೆತುಕೊಂಡಿದೆ. ಲೌಕಿಕ ಬದುಕಿನ ಅನುಭವವೂ ಅಲೌಕಿಕ ಲೋಕದ ಅನುಭಾವವೂ ಹಾಲು ಜೇನಿನಂತೆ ಒಂದಾಗಿದೆ. ಆದಕ್ಕಾಗಿಯೇ ಅವು ಇಷ್ಟೊಂದು ಜನಪ್ರಿಯವಾಗಿವೆ, ಮನ ಸೂರೆಗೊಂಡಿವೆ. ಚಿರಕಾಲ ಬಾಳಿವೆ.

## ಗ್ರಂಥಋಣ


೧. ಶಿವಯೋಗ ಪ್ರದೀಪಿಕೆ: ಸಂ. ಡಾ. ವೀರಣ್ಣ ರಾಜೂರ

೨. ಸಿದ್ಧ ಗಂಗಾಶ್ರೀ: ಸಂ. ಎರೇಸೀಮೆ ಚೆನ್ನಪ್ಪ

೩. ಸ್ವರವಚನಗಳು ಮತ್ತು ಕಡಕೊಳ ಮಡಿವಾಳೇಶ್ವರರು (ಎಂ. ಫಿಲ್. ಪ್ರಬಂಧ ಅಪ್ರಕಟಿತ) : ಈಶ್ವರಯ್ಯ ಮಠ

೪. ಹರಿದಾಸ ಆಂದೋಲನ: ಒಂದು ಅಧ್ಯಯನ: ಡಾ. ಎನ್. ಕೆ. ರಾಮಶೇಷನ್

೫. ಸಾಹಿತ್ಯ ವಿಶ್ಲೇಷಣೆ: ಎಲ್. ಎಸ್. ಶೇಷಗಿರಿರಾವ

೬. ಶಿವದಾಸ ಗೀತಾಂಜಲಿ: ಡಾ. ಎಲ್. ಬಸವರಾಜು

೭. ಕೀರ್ತನಕಾರರು: ಎಚ್. ಎಸ್. ವೆಂಕಟೇಶಮೂರ್ತಿ

೮. ಕಾವ್ಯ ಮತ್ತು ಜೀವನ ಚಿತ್ರಣ: ಸ. ಸ. ಮಾಳವಾಡ

೯. ಘನಶ್ರೀ: ಡಾ. ಸಂಗಮೇಶ ಸವದತ್ತಿಮಠ


---

೨೫. ಶಾಸ್ತ್ರೀಮಠ ಎಮ್. ಜಿ.: ಕೂಡಲೂರು ಬಸವಲಿಂಗ ಶರಣರು, ಪು. ೧೦೪.

೧೦. ನಿಜಗುಣ ಶಿವಯೋಗಿಗಳ ಕೈವಲ್ಯ ಪದ್ಧತಿ: ಪಂ. ನಾಗಭೂಷಣ ಶಾಸ್ತ್ರಿಗಳು

೧೧. ನಿಜಗುಣ ಶಿವಯೋಗಿಗಳು ಹಾಗೂ ಅವರ ಕೃತಿಗಳು:
ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ

೧೨. ಶರಣ ಸಾಹಿತ್ಯ ಮಾರ್ಗ: ಡಾ. ವ್ಹಿ. ಜಿ. ಪೂಜಾರ

೧೩. ಕಡಕೋಳ ಮಡಿವಾಳೇಶ್ವರ ವಿರಚಿತ ಸ್ವರವಚನಗಳು:
ಡಾ. ಮಲ್ಲಿಕಾರ್ಜುನ ಶಿ. ಲಠ್ಠೆ

೧೪. ಬಸವ ಪಥ(ಸೆಪ್ಟೆಂಬರ್-೧೯೯೩): ಪ್ರ. ಸಂಪಾದಕ: ಪ್ರೊ. ಬಿ. ವಿರೂಪಾಕ್ಷಪ್ಪ

೧೫. ಕೂಡಲೂರು ಬಸವಲಿಂಗ ಶರಣರ ಸ್ವರವಚನಗಳು: ಸಂ. ಶಾಂತರಸ

೧೬. ಜಾನಪದ ಸಾಹಿತ್ಯದರ್ಶನ-ಭಾಗ-೫:ಸಂ. ಎಂ. ಎಸ್. ಸುಂಕಾಪುರ

೧೭. ಕೂಡಲೂರು ಬಸವಲಿಂಗ ಶರಣರು: ಡಾ. ಎಂ. ಜಿ. ಶಾಸ್ತ್ರೀಮಠ



# ಸ್ವರವಚನದ ಸಂಗೀತಸ್ವರೂಪ

*ಸರ್ವಮಂಗಳಾ ಶಂಕರ್*

"ಸಂಗೀತಮಪಿ ಸಾಹಿತ್ಯಂ ಸರಸ್ವತ್ಯಾಃ ಸ್ತನದ್ವಯಂ ಏಕಮಾಪಾತಮಧುರಂ ಅನ್ಯಥಾಲೋಚನಾಮೃತಂ" ಎಂಬ ಉಕ್ತಿ ಬಹು ಪ್ರಸಿದ್ಧವಾದುದು. ಸಂಗೀತ-ಸಾಹಿತ್ಯಗಳು ವಾಗ್ದೇವಿಯ ಸ್ತನದ್ವಯ. ಸಂಗೀತವು ಕೇಳಿದಾಕ್ಷಣ ಮನಸ್ಸಿಗೆ ಆಹ್ಲಾದವನ್ನು ನೀಡುವುದಾದರೆ, ಸಾಹಿತ್ಯವು ಹೆಚ್ಚಿನದಾಗಿ ಬುದ್ಧಿಶಕ್ತಿಯನ್ನು ಉದ್ದೀಪನಗೊಳಿಸುತ್ತದೆ. ಶಿವಶರಣರ ರಚನೆಗಳು ಸಂಗೀತ-ಸಾಹಿತ್ಯ ಎರಡರ ದೃಷ್ಟಿಯಿಂದಲೂ ವಿಶಿಷ್ಟತೆಯನ್ನು ಪಡೆದಿವೆ. ಆದುದರಿಂದ ಶಿವಶರಣರ ಸ್ವರವಚನಗಳನ್ನು ಸಾಹಿತ್ಯದ ದೃಷ್ಟಿಯಿಂದಲೂ, ಗೇಯ ರಚನೆ ಎಂಬ ದೃಷ್ಟಿಯಿಂದಲೂ ಪರಾಮರ್ಶಿಸುವುದು ಸೂಕ್ತವೆನಿಸುತ್ತದೆ.

## ಶಿವಶರಣರ ಸಾಹಿತ್ಯ ಪ್ರಕಾರ

ಶಿವಶರಣರ ಅಮೂಲ್ಯವಾದ ಸಾಹಿತ್ಯ ಪ್ರಕಾರವನ್ನು ವಚನ, ಸ್ವರವಚನ ಹಾಗೂ ಇತರ ಸಾಹಿತ್ಯ ಪ್ರಕಾರಗಳೆಂದು ಮೂರು ವಿಧವಾಗಿ ವಿಂಗಡಿಸಲು ಸಾಧ್ಯ. ಕನ್ನಡ ಸಾಹಿತ್ಯದಲ್ಲಿ ಸಿದ್ಧಾಂತ, ಸಾಹಿತ್ಯ ದೃಷ್ಟಿಯಿಂದ ಅಪೂರ್ವವೂ ಉತ್ಕೃಷ್ಟವೂ ಆಗಿರುವ ವಚನ ಸಾಹಿತ್ಯ-ಭಂಡಾರ ಒಂದು ಬಗೆಯದಾದರೆ, ಗಾಯನದ ಉದ್ದೇಶವಿರಿಸಿಕೊಂಡೇ ನಿರ್ಮಾಣಗೊಂಡ ಹಾಡುಗಳು ಎರಡನೆಯ ಬಗೆಯವು. ಇದೇ ಸ್ವರವಚನ. ಮಂತ್ರಗೋಪ್ಯ ಮಿಶ್ರಾರ್ಪಣ, ಕೋಲುಪದ, ಚಂದಮಾಮ, ಕರಣಹಸಿಗೆ, ಸೃಷ್ಟಿಯವಚನ, ಕಾಲಜ್ಞಾನ, ನಾಂದ್ಯ, ಉದ್ಧರಣೆವಾಕ್ಯ, ಬೊಲ್ಲಿ, ತ್ರಿವಿಧಿ, ಕಣಸ್ತೋತ್ರ, ಒನಕೆವಾಡು, ಗದ್ಯ, ಟೀಕಿ, ಇವು ಶಿವಶರಣರ ಇತರ ಸಾಹಿತ್ಯ ವರ್ಗಕ್ಕೆ ಸೇರುವ ರಚನೆಗಳು.

## ವಚನ ಹಾಗೂ ಸ್ವರವಚನಗಳ ಸ್ಥೂಲ ವಿವೇಚನೆ

ಗದ್ಯ ಪದ್ಯಗಳ ನಡುವಿನ ವಿಶಿಷ್ಟವಾದ ಒಂದು ಮುಕ್ತಸಾಹಿತ್ಯ ವಚನವಾದರೆ, ಸಂಪೂರ್ಣ ಪದ್ಯರೂಪದಲ್ಲಿದ್ದು ಸಂಗೀತಕ್ಕೆ ಬೇಕಾಗುವಂತಹ ಗೇಯಗುಣಗಳನ್ನುಳ್ಳ ರಾಗ-ತಾಳಗಳ ನಿರ್ದೇಶನವನ್ನು ಹೊಂದಿರುವ ರಚನೆ ಸ್ವರವಚನ. ವಚನಗಳಲ್ಲಿ ಸಾಹಿತ್ಯದ ಜೊತೆ ಗಾಯನದ ಸಾಧ್ಯತೆ ಇರುವುದಾದರೂ ವಚನಗಳಲ್ಲಿ ಸಂಗೀತವು ಸ್ವಲ್ಪ ಗೌಣವಾಗಿಯೇ ಭಾಸವಾಗುತ್ತದೆ. ಸ್ವರವಚನಗಳಲ್ಲಿ, ಸಂಗೀತ ಸಾಹಿತ್ಯಗಳು

ಪ್ರಮುಖವೆನಿಸಿದರೂ, ಸಂಗೀತವು ಹೆಚ್ಚು ಪ್ರಧಾನವಾಗಿಯೂ ಸಾಹಿತ್ಯ ಸ್ವಲ್ಪ ಗೌಣವಾಗಿಯೂ ಭಾಸವಾಗುತ್ತದೆ. ಅಂತೆಯೇ ವಚನಗಳಲ್ಲಿ ಸ್ವಚ್ಛಂದ ಪ್ರಾಸವನ್ನೂ ಸ್ವರವಚನಗಳಲ್ಲಿ ಚಂದವಾದ ಪ್ರಾಸವನ್ನೂ ಕಾಣುತ್ತೇವೆ. ಒಟ್ಟಿನಲ್ಲಿ ಹೇಳುವುದಾದರೆ ರಾಗಾಂಶಕ್ಕೆ ಹೆಚ್ಚು ಅಸ್ಪದ ದೊರಕಿಸಿಕೊಡಲು ಸಾಧ್ಯವಿರುವ ಕಾರಣದಿಂದಾಗಿ ಹಾಗೂ ಸಾಹಿತ್ಯಕ್ಕೆ ದೊರೆತ ಪ್ರಾಶಸ್ತ್ಯದೊಂದಿಗೆ ಸಂಗೀತಕ್ಕೂ ಪ್ರಾಶಸ್ತ್ಯವನ್ನು ನೀಡುವ ಕಾರಣದಿಂದಾಗಿ ಶಿವಶರಣರ ಸ್ವರವಚನಗಳಲ್ಲಿನ ಸಂಗೀತ ಸಾಹಿತ್ಯಗಳೆರಡೂ ಮುಖ್ಯ ಪಾತ್ರವಹಿಸುತ್ತವೆ.

## ಸ್ವರವಚನದ ಹಿನ್ನೆಲೆ

ಹಾಡುವುದಕ್ಕಾಗಿಯೇ ರಚಿಸಲ್ಪಟ್ಟ ರಚನೆಗಳು ಗೇಯ ರಚನೆಗಳೆಂದು ಕರೆಯಲ್ಪಡುತ್ತವೆ. ಸುಮಾರು ೭ ರಿಂದ ೧೧ನೇ ಶತಮಾನದ ಅವಧಿಯಲ್ಲಿ ತ್ರಿಪದಿ ಬಂಧಗಳು, ಬೆದಂಡೆ, ಚತ್ತಾಣ, ಒನಕೆವಾಡು, ತಾರೆಲೆ, ಧವಳದ ಹಾಡುಗಳಂತಹ ಗೇಯರಚನೆಗಳಿದ್ದುದು ನಮಗೆ ಉಲ್ಲೇಖಗಳಿಂದ ವೇದ್ಯವಾಗುವುದಾದರೂ ಅವುಗಳ ಲಕ್ಷ್ಯವು ನಮಗೆ ದೊರೆಯದೇ ಇರುವುದು ನಮ್ಮ ದೌರ್ಭಾಗ್ಯ. ಈ ದೃಷ್ಟಿಯಿಂದ ೧೨ ನೇ ಶತಮಾನದ ವಚನಕಾರರ ಸ್ವರವಚನಗಳು ಶಾಸ್ತ್ರೀಯ ರಾಗತಾಳಗಳ ನಿರ್ದೇಶನದೊಂದಿಗೆ ಪಲ್ಲವ-ಅನುಪಲ್ಲವಗಳೆಂಬ ವಿಭಾಗಗಳೊಂದಿಗೆ ಕನ್ನಡ ಭಾಷೆಯಲ್ಲಿ ದೊರೆಯುವ ಮೊಟ್ಟಮೊದಲ ಪ್ರಾಚೀನತಮ ಉಪಲಬ್ಧ ಗೇಯರಚನೆಗಳಾಗಿವೆ. ಇದು ಶಿಷ್ಟಸಮ್ಮತ ಶಾಸ್ತ್ರೀಯ ಸಂಗೀತದ ಬಳಿಗೆ ವಚನಕಾರರು ತಮ್ಮ ಸ್ವರವಚನಗಳ ಮೂಲಕ ತಲುಪುವ ಪ್ರಥಮ ಹಂತವಾಗಿದೆ. ಹೀಗಾಗಿ ಸಂಗೀತದ ದೃಷ್ಟಿಯಿಂದ ಶಿವಶರಣರ ಸ್ವರವಚನಗಳು ಪ್ರಮುಖ ಮೈಲಿಗಲ್ಲಾಗಿ ನಿಲ್ಲುತ್ತವೆ.

ಸಾಮಾನ್ಯವಾಗಿ ಸ್ವರವಚನಗಳ ಬಗೆಗೆ ಕುತೂಹಲ ಉಳ್ಳವರು, ಏತಕ್ಕಾಗಿ ಸ್ವರವಚನ ಎಂಬ ಹೆಸರಿಟ್ಟಿದ್ದಾರೆ? ಸ್ವರವಚನಗಳಿಗೆ ಸ್ವರಪ್ರಸ್ತಾರ (Notation) ದೊರೆಯುತ್ತದೆಯೇ? ಎಂದು ಪ್ರಶ್ನಿಸುವುದುಂಟು.

ತ್ಯಾಗರಾಜಾದಿಗಳ ಕೃತಿಗಳಿಗೆ ಸ್ವರಪ್ರಸ್ತಾರ ದೊರೆತಿರುವಂತೆ ಸ್ವರವಚನಗಳಿಗೆ ಸ್ವರಪ್ರಸ್ತಾರ ದೊರೆತಿಲ್ಲ. ಆದರೆ ದಾಸವರೇಣ್ಯರ ಕೀರ್ತನೆಗಳಿಗಿರುವಂತೆಯೇ ರಾಗ-ತಾಳಗಳ ನಿರ್ದೇಶನವಿದೆ. ಪಲ್ಲವ-ಅನುಪಲ್ಲವಗಳಿವೆ. ಹಲವಾರು ನುಡಿಗಳಿವೆ, ಕಡೆಯಲ್ಲಿ ಕಡ್ಡಾಯವಾಗಿ ಅಂಕಿತ ಅಥವಾ ಮುದ್ರಿಕೆ ಇದೆ.

## ಸ್ವರವಚನ ಪದದ ವಿವೇಚನೆ-ಔಚಿತ್ಯತೆ

ಶಿವಶರಣರ ಸ್ವರವಚನಗಳು ನಮಗೆ ದೊರೆಯುತ್ತವೆಯಾದರೂ 'ಸ್ವರವಚನ' ಎಂಬ ಪದದ ನಾಮನಿರ್ದೇಶನದ ಔಚಿತ್ಯವೇನು? ಎಂಬ ಬಗೆಗೆ ಶಿವಶರಣರು ಹೇಳಿರುವುದು ಕಂಡುಬಂದಿಲ್ಲ. ಸಂಗೀತಕ್ಕೆ ಸಪ್ತ ಸ್ವರಗಳೇ ಆಧಾರ. ಸ್ವರಗಳ ಆಧಾರದಿಂದಲೇ ಸಂಗೀತ ನೆಲೆಗೊಳ್ಳುವುದು. ಇಲ್ಲಿ 'ಸ್ವರ' ಎಂಬ ಪದವು ಗಾನಕ್ರಿಯೆಯನ್ನು ಸೂಚಿಸುತ್ತದೆ.

ಸಂಗೀತಕಲೆಗೆ ಆಧಾರಸ್ತಂಭವಾಗಿ ನಿಲ್ಲುವಂತಹ, ಅಂತೆಯೇ ಸಂಗೀತಕ್ಕೆ ಅತ್ಯಂತ ನಿಕಟ ಸಾಮೀಪ್ಯವನ್ನು ಹೊಂದಿ ಶಕ್ತಿಯುತವಾಗಿ ನಿಲ್ಲುವಂತಹ ಶಬ್ದವೆಂದರೆ ಸ್ವರ. ಗಾಯನಕ್ಕಾಗಿಯೇ ನಿರ್ಮಾಣಗೊಂಡ ಹಾಡಿದು ಅಥವಾ ವಚನವಿದು ಎಂಬುದನ್ನು ಸೂಚಿಸುವ ಸಲುವಾಗಿ 'ಸ್ವರವಚನ' ಎಂದು ಕರೆದಿರುವ ಸಾಧ್ಯತೆ ಇದೆ. ಎಂದರೆ ಸ್ವರವನ್ನು ಹಿಡಿದು, ಧ್ವನಿಯನ್ನು ಹಿಡಿದು ತನ್ನದೇ ಆದ ವಿಶಿಷ್ಟ ಧಾಟಿಯಲ್ಲಿ ಹಾಡುವಂತಹ ಹಾಡು ಈ ಸ್ವರವಚನ. ಅಲ್ಲಮಪ್ರಭು ತನ್ನ ಒಂದು ವಚನದಲ್ಲಿ 'ಮಾತೆಂಬುದು ಜ್ಯೋತಿರ್ಲಿಂಗ ಸ್ವರವೆಂಬುದು ಪರತತ್ವ" ಎಂದಿದ್ದಾನೆ. ಮಾತೆಂಬುದು ಜ್ಯೋತಿರ್ಲಿಂಗವಾದರೆ ಸ್ವರವು ಸಾಕ್ಷಾತ್ ಪರಮಾತ್ಮನ ಸ್ವರೂಪ ಎಂದು ಹೇಳಿ ಅಲ್ಲಮ ಸಂಗೀತವನ್ನು ದೈವತ್ವಕ್ಕೇರಿಸಿದ್ದಾನೆ. ಅಂತೆಯೇ ಇಲ್ಲಿ 'ಸ್ವರ' ಪದವು ಗಾನಕ್ರಿಯೆಯನ್ನು ಸೂಚಿಸುವ ಪದವಾಗಿ ಸ್ಥಾನಗಳಿಸಿದೆ.

ಸ್ವರವಚನವನ್ನು ಸ್ವರಪದ, ಬೆಡಗಿನ ಸ್ವರಪದ, ಗೀತೆ, ಪಾಡು, ಪದಂಗಳು, ಹಾಡುಗಬ್ಬ ಎಂದೆಲ್ಲಾ ಕರೆಯಲಾಗಿದೆ. ಈ ಹೆಸರುಗಳೆಲ್ಲವೂ ಹಾಡು ಎಂಬುದಕ್ಕೆ ಪರ್ಯಾಯವಾಚಿಗಳು. ಶಿವಶರಣರಿಂದ ರಚಿತವಾದ ಹಾಡುಗಳನ್ನು ತತ್ತ್ವಪದ, ಹಾಡುಗಬ್ಬ, ಭಕ್ತಿಯ ಪದ, ಕೈವಲ್ಯದ ಹಾಡು, ಅನುಭವದ ಹಾಡು, ಅನುಭಾವದ ಹಾಡು, ಜನಪ್ರಿಯ ಹಾಡು, ಭಜನೆಯ ಹಾಡು, ಪದಗಳು, ಹಾಡುಗಳು ಎಂದೆಲ್ಲಾ ಕರೆಯುವ ವಾಡಿಕೆ ಇದೆ. ಶರಣರಿಂದ ರಚಿತಗೊಂಡ ಹೆಚ್ಚಿನ ಹಾಡುಗಳು ಅಂತರಂಗದ ಅರಿವಿನ ಮೂಲಭೂತ ತತ್ತ್ವಗಳನ್ನು ಕುರಿತದ್ದಾದ್ದರಿಂದ ಈ ಹಾಡುಗಳನ್ನು ತತ್ತ್ವಪದ ಎಂದು ಕರೆಯುವ ವಾಡಿಕೆ ಹೆಚ್ಚು ಪ್ರಚಲಿತವಾಗಿದೆ.

## ಸ್ವರವಚನದ ವ್ಯಾಪ್ತಿ ಮತ್ತು ಸ್ವರವಚನಕಾರರು

ಸ್ವರವಚನ ಕ್ಷೇತ್ರ ವಿಶಾಲವ್ಯಾಪ್ತಿಯುಳ್ಳದ್ದು. ಸ್ವರವಚನಗಳು ೧೨ನೆಯ ಶತಮಾನದಿಂದ ೨೦ನೆಯ ಶತಮಾನದವರೆಗೆ ಅವಿರತವಾಗಿ ರಚಿತಗೊಂಡಿದ್ದು, ಈ ಅವಧಿಯಲ್ಲಿ ಸಾವಿರಾರು ಸ್ವರವಚನಗಳು ರಚಿತಗೊಂಡಿವೆ. ಕನ್ನಡ ನಾಡಿನಲ್ಲಿ ನೆಲೆಸಿ ಕನ್ನಡ ಭಾಷೆಯಲ್ಲಿ ಅಮೂಲ್ಯ ಸ್ವರವಚನಗಳನ್ನು ನೀಡಿ ಅಮರರಾಗಿರುವ ಸ್ವರವಚನಕಾರರೆಂದರೆ ಜೇಡರ ದಾಸಿಮಯ್ಯ, ಸಕಲೇಶಮಾದರಸ, ಬಸವೇಶ್ವರ, ಅಲ್ಲಮಪ್ರಭು, ಅಕ್ಕಮಹಾದೇವಿ, ಚನ್ನಬಸವಣ್ಣ, ಸಿದ್ಧರಾಮಣ್ಣ, ಬಹುರೂಪಿ ಚೌಡಯ್ಯ, ಮಡಿವಾಳ ಮಾಚಿದೇವ, ಆದಯ್ಯ, ಸೊಡ್ಡಳ ಬಾಚರಸ, ನೀಲಮ್ಮ, ೧ನೆಯ ನಿಜಗುಣ, ನಿಜಲಿಂಗ ಚಿಕ್ಕಯ್ಯ, ಅಮುಗಿ ದೇವಯ್ಯ, ಅಗ್ಘವಣಿ ಹಂಪಯ್ಯ, ಮೊಗ್ಗೆಯ ಮಾಯಿದೇವ, ಶಂಕರದೇವ, ಉಳಿಯುಮೇಶ್ವರ ಚಿಕ್ಕಯ್ಯ, ಗುರುಬಸವ, ಬತ್ತಲೇಶ್ವರ, ನಿರ್ವಾಣಿ ಬೋಳೇಶ, ಕರಸ್ಥಲದನಾಗಿದೇವ, ನಿಜಗುಣ ಶಿವಯೋಗಿ, ಸರ್ಪಭೂಷಣ ಶಿವಯೋಗಿ, ಮುಪ್ಪಿನ ಷಡಕ್ಷರಿ, ಬಾಲಲೀಲಾ ಮಹಾಂತ ಶಿವಯೋಗಿ, ಕೋರಾಣ್ಯದ ಶಿವಲಿಂಗ, ಸೋದೆ ಸದಾಶಿವರಾಜ, ಇಮ್ಮಡಿ ಗುರುಸಿದ್ಧಸ್ವಾಮಿ, ಸೋಮೆಕಟ್ಟೆ ಚನ್ನವೀರಸ್ವಾಮಿ, ಬೆರಟೂರ ಕರಿಬಸವ, ಐನೂಲಿ ಕರಿಬಸವಾರ್ಯ, ಕೂಡಲೂರು ಬಸವಲಿಂಗ, ರಾಂಪುರದ ಬಕ್ಕಪ್ಪಯ್ಯ,

ಐನೆಲೆ ಗುರುಲಿಂಗ(ಅಂಕಿತ), ಹೊನ್ನಾಳಿ ಸಿದ್ಧಲಿಂಗಪ್ಪ, ಕವಿಲಿಂಗ, ಮೈಲಾರ ಬಸವಲಿಂಗ ಶರಣರು, ಸೂಗೂರೇಶ(ಅಂಕಿತ), ಕೆಸ್ತೂರದೇವ, ಕವಿಲಿಂಗ, ವರತೆಯ ಸೋಮಣ್ಣ, ದೊಡ್ಡ ಷಡಕ್ಷರಿಸ್ವಾಮಿ, ಜಿಗುನಿ ಮರುಳದೇವ, ಶಂಕರದೇವ, ಚಿದಾನಂದ, ಮುದ್ವೀರಸ್ವಾಮಿ, ಮರಿಶಾಂತಬಸವ, ಸೋಮನಕಟ್ಟಿ ಕರಿಬಸವೇಶ್ವರ, ಗುರುಗುಂಡ ಬಸವ, ಕಡಕೋಳ ಮಡಿವಾಳಪ್ಪ ನೀರಲಕೇರಿ ಸ್ವಾಮಿಗಳು, ಘನಮಠದ ಶಿವಯೋಗಿ, ಇತ್ಯಾದಿ ಅನೇಕ ಮಹಾಪುರುಷರು.

## ಸ್ವರವಚನಗಳಲ್ಲಿ ನಿರ್ದೇಶಿತಗೊಂಡಿರುವ ರಾಗ-ತಾಳಗಳು

೧೨ನೆಯ ಶತಮಾನದ ವಚನಕಾರರು ಬರೆದಿರುವ ಸ್ವರವಚನಗಳಲ್ಲಿ ಈ ಕೆಳಕಂಡ ರಾಗಗಳು ನಿರ್ದೇಶಿತಗೊಂಡಿವೆ. ಅವುಗಳೆಂದರೆ, ಧನ್ಯಾಸಿ, ಶಾಂತಮಲಹರಿ, ಮಧುಮಾಧವಿ, ಮಲಹರಿ, ದೇಶಿ, ಭೈರವಿ, ಭೂಪಾಳಿ, ವರಾಳಿ, ಗುಜ್ಜರಿ, ನಾಟಿ, ಲಲಿತೆ, ದೇಶಾಕ್ಷಿ, ನಾದನಾಮಕ್ರೀ, ಧವಳಾರ, ಶೋಕವರಾಳಿ, ರೇವಗುಪ್ತಿ, ಆರಭಿ, ಶ್ರೀ, ಕನ್ನಡಗೌಳ, ಸೌರಾಷ್ಟ್ರ, ಸಿಂಧುರಾಮಕ್ರಿ, ಶಂಕರಾಭರಣ, ಆಹರಿಪತ್ತು, ಶುದ್ಧಕಾಂಬೋಜಿ, ಕಾಂಬೋಜಿ, ಒಡ್ಡಿಯ ಕಾಂಬೋಜಿ, ತೆಲುಗ ಕಾಂಬೋಜಿ, ಪತ್ತುವರಾಳಿ, ನಾರಾಯಣಗೌಳ, ಆಹರಿ, ಸಾರಂಗ, ಪಾಡಿ. ನಿರ್ದೇಶಿಸಲ್ಪಟ್ಟಿರುವ ತಾಳಗಳೆಂದರೆ ರೂಪಕ, ಝಂಪೆ, ಅಟತಾಳ ಹಾಗೂ ರಚ್ಚೆತಾಳ. ರೂಪಕ, ಝಂಪೆ, ಅಟ ತಾಳಗಳು ಕರ್ನಾಟಕ ಶಾಸ್ತ್ರೀಯ ಸಂಗೀತದಲ್ಲಿನ ಸಪ್ತತಾಳಗಳಲ್ಲಿದ್ದು ಈಗಲೂ ಬಳಕೆಯಲ್ಲಿವೆ. ರಚ್ಚೆತಾಳದ ಬಗೆಗೆ ಅಧ್ಯಯನ ನಡೆಸಿ, ಅದರ ಬಗೆಗೆ ತಿಳಿಯಬೇಕಾಗಿದೆ.

ಸುಮಾರು ೧೫ನೆಯ ಶತಮಾನದಲ್ಲಿ ನಿಜಗುಣ ಶಿವಯೋಗಿಗಳಿಂದ ರಚಿತಗೊಂಡಿರುವ ಕೃತಿಗಳಲ್ಲಿ ಕೈವಲ್ಯಪದ್ಧತಿ ಮತ್ತು ವಿವೇಕಚಿಂತಾಮಣಿಯು ಸಂಗೀತ ಲೋಕದಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ವಿವೇಕಚಿಂತಾಮಣಿಯು ಸಂಗೀತಶಾಸ್ತ್ರ ಗ್ರಂಥವಾಗಿದ್ದು, ಸಂಗೀತಶಾಸ್ತ್ರದ ಆಳವಾದ ವಿವೇಚನೆ-ವಿಚಾರಗಳು ಅದರಲ್ಲಿ ಹೇಳಲ್ಪಟ್ಟಿವೆ. ಅಂತೆಯೇ ವಿವೇಕ ಚಿಂತಾಮಣಿಯನ್ನು ಸಂಗೀತಶಾಸ್ತ್ರದ ವಿಶ್ವಕೋಶವೆಂದು ಪರಿಗಣಿಸಲಾಗಿದೆ. ಕೈವಲ್ಯ ಪದ್ಧತಿಯು ೫ ಸ್ಥಲಗಳನ್ನೊಳಗೊಂಡಿದ್ದು ಇದರಲ್ಲಿ ೧೭೪ ಹಾಡುಗಳಿವೆ. ಈ ಹಾಡುಗಳಿಗೆ ನಾದನಾಮಕ್ರಿಯ, ಶಂಕರಾಭರಣ, ಧನ್ಯಾಸಿ, ಮುಖಾರಿ, ಪುನ್ನಾಗತೋಡಿ, ಲಲಿತೆ, ದೇಸಿ, ಸಾಳಂಗ, ಬೇಗಡೆ, ಭೈರವಿ, ಕಾಂಬೋಜಿ, ಪಹಡಿ, ರೇಗುಪ್ತಿ, ತೋಡಿ, ತೆಲುಗಕಾಂಬೋಜಿ, ಬವುಳಿ, ಕುರಂಜಿ, ಮಧುಮಾಧವಿ, ಸೌರಾಷ್ಟ್ರ ಕನ್ನಡ ಕಾಂಬೋಧಿ, ವಸಂತ, ಆಹರಿ, ಕುಂತವರಾಳಿ, ಹಿಂದೋಳವಸಂತ, ಮಾಳವ ಶ್ರೀರಾಗ, ವಡ್ಡಿಧನ್ಯಾಸಿ, ಭೂಪಾಳಿ, ಕಲ್ಯಾಣಿ, ನಾಟಿ, ತೆಲುಗ ಕಾಂಬೋಜಿ, ಪರಜು ರಾಗಗಳನ್ನು ನಿರ್ದೇಶಿಸಲಾಗಿದೆ. ಮತ್ತೆ ಕೆಲವು ಹಾಡುಗಳಿಗೆ ಚೌಪದಿ, ಸುವ್ವಾಲೆ, ಪಾರ್ಸಿ, ಸಾವಂತಗಳೆಂಬ ಹೆಸರು ರಾಗಗಳಿಗೆ ಸೂಚಿತಗೊಂಡಿವೆ. ಇದರ ಬಗೆಗೆ ಸಂಶೋಧಕರು ಗಮನಹರಿಸಬೇಕಾಗಿದೆ. ಕೈವಲ್ಯ ಪದ್ಧತಿಯ ಶಿವಕಾರುಣ್ಯಸ್ಥಲದ ೧೪ ಮತ್ತು ೧೫ನೆಯ ಹಾಡುಗಳಿಗೆ ಝಂಪೆ ತಾಳವು ನಿರ್ದೇಶಿತಗೊಂಡಿದೆ. ಹಾಗೂ ಒಂದು ಹಾಡಿಗೆ ಚೌಪದಿ

ವರ್ಣವೆಂದೂ ಮತ್ತೊಂದು ಹಾಡಿಗೆ ವಾರ್ಧಕ ಷಟ್ಪದಿ ಎಂದೂ ಸೂಚಿಸಲಾಗಿದೆ. ಒಟ್ಟಿನಲ್ಲಿ ಹೇಳುವುದಾದರೆ ನಿಜಗುಣರ ಕೈವಲ್ಯ ಪದ್ಧತಿ ಒಂದು ಉತ್ತಮ ಗೇಯಕಾವ್ಯ.

ಸರ್ಪಭೂಷಣ ಶಿವಯೋಗಿಗಳು ತಮ್ಮ 'ಕೈವಲ್ಯಕಲ್ಪವಲ್ಲರಿ'ಯನ್ನು ನಿಜಗುಣಶಿವಯೋಗಿಗಳ ಕೈವಲ್ಯಪದ್ಧತಿಯ ಮಾದರಿಯನ್ನನುಸರಿಸಿ ರಚಿಸಿದ್ದಾರೆ. ಕೈವಲ್ಯಕಲ್ಪವಲ್ಲರಿಯು ಒಟ್ಟು ೧೭೭ ಹಾಡುಗಳನ್ನೊಳಗೊಂಡಿದೆ. ಹಾಡುಗಳಿಗೆಲ್ಲಾ ರಾಗಗಳನ್ನು ಸೂಚಿಸಲಾಗಿದ್ದು ಇಲ್ಲಿ ಸುಮಾರು ೪೦ಕ್ಕೂ ಹೆಚ್ಚು ರಾಗಗಳು ಸೂಚಿಸಲ್ಪಟ್ಟಿವೆ. ಒಂದೆರಡು ಹಾಡುಗಳಿಗೆ ಅನುಪಲ್ಲವಿಯನ್ನು ಸೂಚಿಸಲಾಗಿದೆ.

ನಿಜಗುಣ ಶಿವಯೋಗಿಗಳ ಪರಂಪರೆಯನ್ನು ಅನುಸರಿಸಿದವರಲ್ಲಿ ಮುಪ್ಪಿನ ಷಡಕ್ಷರಿಯವರೂ ಒಬ್ಬರು. ಹಾಡುಗಳ ಸಂಗ್ರಹದ ಇವರ ಕೃತಿಯ ಹೆಸರು 'ಸುಬೋಧಸಾರ'. ಭಕ್ತಿಯೇ ಮೈವೆತ್ತ ಇವರ ಬಹಳಷ್ಟು ರಚನೆಗಳು ಶರ ಇಲ್ಲವೆ ಭೋಗಷಟ್ಪದಿಯಲ್ಲಿ ರಚಿತಗೊಂಡಿವೆ. ಇವರ ರಚನೆಗಳೆಲ್ಲವೂ ರಾಗ ನಿರ್ದೇಶನದೊಂದಿಗೆ ಸರಳ ಸುಂದರವಾಗಿವೆ.

ಬಾಲಲೀಲಾಮಹಾಂತ ಶಿವಯೋಗಿಗಳ ಕೃತಿ 'ಕೈವಲ್ಯದರ್ಪಣ'. ಮೈಲಾರಬಸವಲಿಂಗ ಶರಣರ ಕೃತಿ 'ಶಿವಾನುಭವದರ್ಪಣ'. ಈ ಎರಡೂ ಕೃತಿಗಳೂ ರಾಗನಿರ್ದೇಶನದೊಂದಿಗೆ ದೊರೆಯುವ ಉತ್ತಮ ರಚನೆಗಳಾಗಿವೆ. ಬಸವಲಿಂಗ ಶರಣರ ಕೃತಿಯು ೭೦ ತತ್ವಪದಗಳನ್ನೊಳಗೊಂಡಿದ್ದು, ಇದರಲ್ಲಿ ಸ್ಥಲವಿಭಜನೆ ಮಾಡಿಲ್ಲ.

ಇದು ಸಾಂಕೇತಿಕವಾಗಿ ಹೇಳಲಾಗಿರುವ ಕೆಲವೇ ಕೆಲವು ಮಹಾಪುರುಷರ ಕೃತಿಗಳ ಸ್ಥೂಲ ರಾಗದರ್ಶನ. ಹೀಗೆ ನೂರಾರು ಮಹನೀಯರು ತಮ್ಮ ಕೃತಿದರ್ಶನದಿಂದ ಲೋಕಜ್ಞಾನವನ್ನೂ ಜೀವನದ ಮೌಲ್ಯವನ್ನೂ ಪರಮೋನ್ನತವಾದ ಶಿವತತ್ವವನ್ನೂ ಸಂಗೀತದ ಮೂಲಕ ಬೆಳಗಿದ್ದಾರೆ. ಈ ಮಹನೀಯರು ತಮ್ಮ ಸ್ವರವಚನಗಳಿಗೆ ಸೂಚಿಸಿರುವ ರಾಗ ತಾಳಗಳ ಔಚಿತ್ಯತೆಯ ಬಗೆಗೆ ಆಳವಾದ ಅಧ್ಯಯನದ ಅಗತ್ಯತೆ ಇದೆ.

ಸ್ವರವಚನಗಳಲ್ಲಿ ಬಳಸಿರುವ ಬಹುತೇಕ ರಾಗಗಳು ಕರ್ನಾಟಕ ಶಾಸ್ತ್ರೀಯ ಸಂಗೀತದಲ್ಲಿ ಬಳಸುವ ರಾಗಗಳೇ ಆಗಿವೆ. ಅಪರೂಪಕ್ಕೆ ಕೆಲವು ಹಿಂದೂಸ್ಥಾನೀ ಪದ್ಧತಿಯ ರಾಗಗಳು ಬಳಕೆಗೊಂಡಿವೆ.

ಯಾವ ಸಂಗೀತವೇ ಆಗಲಿ ಅದರ ಸಂಗೀತಸ್ವರೂಪವನ್ನು ಗಣಿಸಲು ಲಕ್ಷ್ಯ-ಲಕ್ಷಣಗಳು ಸಹಾಯಕವಾಗಿ ನಿಲ್ಲುತ್ತವೆ. ಸ್ವರವಚನದ ಹಿಂದಿನ ಸಂಗೀತ ಸ್ವರೂಪವನ್ನು ಲಕ್ಷ್ಯ ಭಾಗದಲ್ಲಿ ಗಣಿಸುವುದಾದರೆ, ಧ್ವನಿಮುದ್ರಿಕೆಯ ಸೌಲಭ್ಯ ನಮಗೆ ದೊರೆತಿರುವುದು ಕೇವಲ ೧೦೦ ವರ್ಷಗಳಿಂದೀಚೆಗೆ. ಹೀಗಾಗಿ ಅದಕ್ಕಿಂತ ಹಿಂದೆ ಇದ್ದ ಸಂಗೀತದ ಲಕ್ಷ್ಯ ವಿಧಾನವು ನಮಗೆ ತಿಳಿಯಲಾಗುವುದಿಲ್ಲ. ಆದರೆ ೨೦ನೆಯ ಶತಮಾನದ ವರೆಗೆ ಆ ಹಾಡುಗಳು ಕಂಠಪರಂಪರೆಯಲ್ಲಿ, ಕರ್ಣಪರಂಪರೆಯಲ್ಲಿ ಉಳಿದುಕೊಂಡು ಬಂದಿವೆ. ಮಠಮಾನ್ಯಗಳು, ಗುಡಿಗಳು, ಭಜನಾ ಮಂದಿರಗಳು ಈ ದಿಶೆಯಲ್ಲಿ ಸಹಕರಿಸಿವೆ.

ಇವುಗಳನ್ನಾಧರಿಸಿ ಹಾಗೂ ಹಾಡುಗಳಲ್ಲಿ ತಿಳಿಸಿರುವ ಗಾಯನ ವಾದನದ ವಿಚಾರಗಳನ್ನಾಧರಿಸಿ ಅಂದಿನ ಸಂಗೀತ ಸ್ಥಿತಿಯನ್ನು ತಿಳಿಯಲು ಸ್ವಲ್ಪಮಟ್ಟಿಗೆ ಸಾಧ್ಯವಾಗಬಹುದು. ಲಕ್ಷಣ ವಿಭಾಗದಲ್ಲಿಯಾದರೆ ದೊರೆಯುವ ಸ್ವರವಚನಗಳನ್ನು ಗೇಯ ರಚನೆಗಳೆಂಬ ದೃಷ್ಟಿಯಿಂದ ಅಧ್ಯಯನ ನಡೆಸಿ, ಆ ಸಾಹಿತ್ಯದಲ್ಲಿನ ಗೇಯಗುಣದ ಬಗೆಗೆ, ಸೂಚಿಸಿರುವ ರಾಗ-ತಾಳಗಳ ಬಗೆಗೆ ಅಧ್ಯಯನ ನಡೆಸಲು ಸಾಧ್ಯವಿದೆ.

'ಸೋದೆಯ ಸದಾಶಿವರಾಯನ ಕೃತಿಗಳು' ಸಂಗೀತ ದೃಷ್ಟಿಯಿಂದ ಬಹು ಪ್ರಮುಖವೆನಿಸುತ್ತದೆ. ೧೬೨ ಸ್ವರವಚನಗಳಿರುವ ಈ ಗ್ರಂಥದಲ್ಲಿ ರಾಗಮಾಲಿಕೆ, ಜಾವಡಿ, ನವರಸಜಕ್ಕಿಣಿ, ಕಂದ, ವೃತ್ತ ಇತ್ಯಾದಿ ವೈವಿಧ್ಯಪೂರ್ಣ ರಚನೆಗಳಿವೆ. ರಚನೆಗಳಿಗೆ ರಾಗದ ಸೂಚನೆಯೂ ಕೆಲವು ರಚನೆಗಳಿಗೆ ಮಧ್ಯೆ ಮಧ್ಯೆ ಸ್ವರ ಭಾಗವೂ ಹಾಗೂ ಜತಿಗಳೂ ಹೇಳಲ್ಪಟ್ಟಿವೆ.

ಉದಾ: ರಾಗ : ಭೈರವಿ ಝಂಪೆತಾಳ

ಹಾ ಮುರಿಗೆಯಯ್ಯಾ ಸ್ವಾಮಿ ನಿಮ್ಮ ಪಾದ
ವೀ ಮಹಿಯೊಳಿನ್ನು ಕಾಣೆ ಜೀಯಾ।
ಪದನಿದನಿ ಸಗರಿ ಸಸರಿ ನಿಸನಿದದಪಮ
ಪದನಿ ದಪಮಪ ದಪಮಗರಿಸ॥

## ಪ್ರಾಸವೈವಿಧ್ಯ

ಸ್ವರವಚನಗಳಲ್ಲಿ ಪ್ರಾಸವೈವಿಧ್ಯವು ಸಹಜವಾಗಿ ಮೂಡಿಬಂದಿದೆ. ಆದಿಪ್ರಾಸವು ನಿಯತವಾಗಿ ಮೂಡಿಬಂದಿದೆ. ಅನುಪ್ರಾಸ, ಅಂತ್ಯಪ್ರಾಸ ಹಾಗೂ ವಡಿಗಳನ್ನು ಅಲ್ಲಲ್ಲಿ ಬಳಸಿಕೊಳ್ಳಲಾಗಿದೆ.

ಉದಾಹರಣೆಗೆ ಅಕ್ಕಮಹಾದೇವಿಯ ಸ್ವರವಚನದಲ್ಲಿನ ಆದಿ, ಅನು, ಅಂತ್ಯ ಪ್ರಾಸಗಳನ್ನು ಗಮನಿಸಿ-

ನಿಬ್ಬಣಕ್ಕೆ ಹೋಗುತ್ತಿದೇನೆ, ನೋಡಕ್ಕಯ್ಯ!
ನಿಬ್ಬಣಕ್ಕೆ ಹೋದಡೆ, ಮರಳಿ ಬಾರೆನಕ್ಕಯ್ಯ! ॥ಪಲ್ಲವಿ॥

ಧನವು ಧಾನ್ಯ ಮನೆಯೊಳುಂಟು;
ಘನವು ಎನ್ನ ಮನೆಯೊಳಿಲ್ಲ;
ಮನೆಯ ಗಂಡ ಮುನಿಯಲೆನ್ನ ಮಂಡೆ ಬೋಳಾಗದು!

## ಪ್ರಭಾವ

ನಂಬಿದೆ ಗುರುವೇ ನಂಬಿದೆ, ನಂಬಿದೆ ಸ್ವಾಮಿ ನಂಬಿದೆ
ಅಂಬಿಕಾರಮಣ ನೀನಂಬಿಗ ॥ಪಲ್ಲವಿ॥

ಹೊಳೆಯ ಬರವ ನೋಡಂಬಿಗ
ಸೆಳಹು ಬಹಳ ಕಾಣಂಬಿಗ
ಸುಳುಹಿನೊಳಗೆ ಬಿದ್ದೆನಂಬಿಗ ಎನ್ನ
ಸೆಳೆದುಕೊಳ್ಳೋ ನೀನಂಬಿಗ||

೧೨ನೆಯ ಶತಮಾನದ ಅಕ್ಕಮಹಾದೇವಿಯ ಮೇಲಿನ ಈ ಸ್ವರವಚನವು ರಾಮಕ್ರಿ ರಾಗ ನಿರ್ದೇಶನದೊಂದಿಗೆ ನಮಗೆ ದೊರೆತಿದೆ. ಈ ಹಾಡಿನ ಸಾಹಿತ್ಯವನ್ನು ನೋಡಿದಾಗ ೧೫ರಿಂದ ೧೬ನೆಯ ಶತಮಾನದ ಪುರಂದರದಾಸರ ಇದೇ ಮಾದರಿಯ 'ಅಂಬಿಗ ನಾ ನಿಮ್ಮ ನಂಬಿದೆ ಜಗದಂಬಾರಮಣನ ನಂಬಿದೆ'|| ಎಂಬ ಹಾಡು ಯಾರಿಗೇ ಆಗಲಿ ನೆನಪಾಗದೆ ಇರುವುದಿಲ್ಲ. ಎಲ್ಲ ಮಹಾಪುರುಷರ ಸದ್ಗುಣ, ಸದಾಚಾರ, ಸತ್‌ಚಾರಿತ್ರ್ಯ, ಸತ್‌ಸಾಹಿತ್ಯಗಳು ಕಾಲದಿಂದ ಕಾಲಕ್ಕೆ ಪ್ರಭಾವಿಸದೆ ಇರವು.

## ಸ್ವರವಚನದ ಗೇಯಗುಣ

ಯಾವುದೇ ಗೇಯ ರಚನೆಯಲ್ಲಿ ಅಂದರೆ ಸ್ವರವಚನಗಳಲ್ಲಿ ಪದ ಎಂದರೆ ಸಾಹಿತ್ಯ, ರಾಗ, ತಾಳ ಮತ್ತು ಕಾಲ(ಹಾಡುವವರ ಅಭಿರುಚಿಗೆ ತಕ್ಕಂತಿರಬಹುದು)ಗಳು ಹೇಳಲ್ಪಟ್ಟಿವೆ. ಚಿಂತನೆಗೆ ಗ್ರಾಸ ಒದಗಿಸಿಕೊಡುವಂತಹ ಸಾಹಿತ್ಯವಿದೆ, ಯತಿ-ಪ್ರಾಸ-ನಿಯತವಾದ ಲಯವೂ ಇದೆ. ಜೊತೆಗೆ ಕಠಿಣ ಉಕ್ತಿಗಳಿಲ್ಲದ ಮೃದುಮಧುರವಾದ ಅನುಭವವನ್ನು ನೀಡುವ ಪದಪುಂಜಗಳಿವೆ.

ಸ್ವರವಚನಕಾರರ ಸ್ವರವಚನಗಳು ವಿವಿಧ ರೂಪಮಾದರಿಗಳನ್ನು ಹೊಂದಿವೆ. ಕೆಲವು ಸ್ವರವಚನಗಳು ಶಿಷ್ಟಪದ ಸ್ವರೂಪವನ್ನು ಮತ್ತೆ ಕೆಲವು ಶಿಷ್ಟ ಪದವೂ ಅಲ್ಲದ ಜನಪದವೂ ಅಲ್ಲದ ನಡುವಿನ ಒಂದು ಬಗೆಯ ಸ್ವರೂಪವನ್ನು ಪಡೆದಿವೆ; ಇನ್ನು ಕೆಲವು ಜನಪದ ಮಾದರಿಯಲ್ಲಿವೆ.

ಒಟ್ಟಿನಲ್ಲಿ ಹೇಳುವುದಾದರೆ ೧೨ನೆಯ ಶತಮಾನದ ವಚನಕಾರರು ದೇಶೀ ನೆಲೆಯಿಂದ ಬಂದು, ನವೀನವಾದ ದೇಶೀ ಪರಂಪರೆಯನ್ನು ಸ್ವರವಚನಗಳೆಂಬ ರಚನೆಗಳ ಮೂಲಕ ವಿಶ್ವದ ಜನತೆಗೆ ತೆರೆದಿಟ್ಟಿದ್ದಾರೆ. ಅನಂತರದ ಶರಣರು ಅದನ್ನೇ ರೂಢಿಸಿಕೊಂಡು ಬಂದು ಕನ್ನಡ ಸಾಹಿತ್ಯದಲ್ಲಿ ಹೊಸ ಛಾಪು ಮೂಡಿಸಿದ್ದಾರೆ. ಸಾಹಿತ್ಯ ಮೌಲ್ಯಕ್ಕಿಂತ ಸಂಗೀತ ಮೌಲ್ಯ ಅಧಿಕವಾಗಿರುವ ಈ ಸ್ವರವಚನಗಳ ಅಧ್ಯಯನ ಸಾಕಷ್ಟು ನಡೆಯಬೇಕಾಗಿದೆ. ಅಜ್ಞಾತವಾಗಿರುವ ಸ್ವರವಚನಗಳನ್ನು ಬೆಳಕಿಗೆ ತರುವ ಹಾಗೂ ಅದರಲ್ಲಿರುವ ಜ್ಞಾನ ಭಂಡಾರವನ್ನು ಗುರುತಿಸುವ ಕಾರ್ಯ, ಜವಾಬ್ದಾರಿ ಸಂಶೋಧಕರ ಹೆಗಲಮೇಲಿದೆ.



# ಸ್ವರವಚನ - ಛಂದೋಸ್ವರೂಪ

*ಬಿ.ವ್ಹಿ. ಮಲ್ಲಾಪುರ*

ಪದ್ಯ ಅಥವಾ ಹಾಡುಗಳನ್ನು ಹಾಡುಗಾರ, ಇಲ್ಲವೆ ಹಾಡಿನ ರಚಕ, ಅವು ಒಳಗೊಂಡಿರುವ ಭಾವಾನುಗುಣವಾಗಿ ವಿವಿಧ ಧಾಟಿಗಳಲ್ಲಿ ಹಾಡುತ್ತ ಹೋಗುತ್ತಾನೆ. ಸಹಜವಾಗಿಯೆ, ಹಾಡಿನಲ್ಲಿರುವ ಶಬ್ದಗಳ ಉಚ್ಚಾರಣೆಯ ಅವಧಿಯಲ್ಲಿ, ಲಯದಲ್ಲಿ, ಹಾಡಿನ ಗತಿಯಲ್ಲಿ ಅದರ ನಿಲುಗಡೆಯಲ್ಲಿ ಒಂದು ಬಗೆಯ ಕ್ರಮಬದ್ಧತೆ ಉಂಟಾಗುತ್ತದೆ. ಅದೆಲ್ಲವನ್ನು ಅಭ್ಯಸಿಸಿ ಇದು ಇಂಥ ಗಣ, ಇದು ಉಸಿರು ತೆಗೆದುಕೊಳ್ಳುವ ತಾಣ, ಇದರಲ್ಲಿ ಇಷ್ಟು ಸಾಲುಗಳಿವೆ, ಇಲ್ಲಿ ಪುನರಾವೃತ್ತಿಯಾಗುತ್ತದೆ, ಇಲ್ಲಿ ಧ್ವನಿ ಏರುತ್ತದೆ, ಇಲ್ಲಿ ಧ್ವನಿ ಇಳಿಯುತ್ತದೆ - ಇತ್ಯಾದಿಗಳನ್ನು ಗುರುತಿಸಿ ಅದಕ್ಕೊಂದು ಶಾಸ್ತ್ರದ ಚೌಕಟ್ಟನ್ನು ಮುಂದಿನ ವಿದ್ವಾಂಸರು ಒದಗಿಸುತ್ತಾರೆ. ಆದುದರಿಂದ ಹಾಡು ಮೊದಲು ಆಮೇಲೆ ಛಂದಃಶಾಸ್ತ್ರ.

ನಿಜವಾದ ಹಾಡುಗಾರ ಇಲ್ಲವೆ ರಚನಾಕಾರ ತನ್ನ ಮುಂದೆ ಛಂದಶ್ಶಾಸ್ತ್ರವನ್ನಿಟ್ಟುಕೊಂಡು ಹಾಡುವುದಿಲ್ಲ. ತನ್ನದೇ ಆದ ಒಂದು ಗುಂಗಿನಲ್ಲಿ, ತನ್ನ ಮನಸ್ಸಿಗೆ ಬಂದಂತೆ ಗುನುಗುನಿಸುತ್ತ ಆ ಹಾಡನ್ನು ಹಾಡುತ್ತಾನೆ; ಇಲ್ಲವೆ ಬರೆಯುತ್ತಾನೆ. ಇಲ್ಲಿ ಮಾತ್ರೆಯ ಲೆಕ್ಕ ತಪ್ಪಿದೆ, ಇಲ್ಲಿ ಗಣವಿನ್ಯಾಸ ಇರಬೇಕಾದ ರೀತಿಯಲ್ಲಿಲ್ಲ - ಮುಂತಾಗಿ, ಅವನು ಆಲೋಚಿಸಲಿಕ್ಕೆ ಹೋಗುವುದಿಲ್ಲ. ಬಸವಣ್ಣನವರ "ತಾಳಮಾನ ಸರಿಸವನರಿಯೆ, ಓಜೆ ಬಜಾವಣೆ ಲೆಕ್ಕವನರಿಯೆ, ಅಮೃತಗಣ ದೇವಗಣವನರಿಯೆ ... ಆನು ಒಲಿದಂತೆ ಹಾಡುವೆ" ಎಂಬ ವಚನವನ್ನು ಹಾಗೆಯೆ, ಕೆಸ್ತೂರದೇವ(೧೭ನೆಯ ಶ.)ನ

"ಗಣ ನೇಮ ಸಂಧಿಸಮಾಸ ಛಂದಶ್ಶಬ್ದ।
ಮಣಿದರ್ಪಣದೊಳೆಲ್ಲ ಹುಡುಕಿ ನೋಡಿ।
ಬಣ್ಣಿಸಿ ಹೇಳುವ ಕವಿಯ ಮಾತಲ್ಲ। ಶ
ರಣ ಸನ್ಮತ[ರು]ಸಿರ್ದ ವಚನಂಗಳೆಲ್ಲವ
ಪೋಣಿಸಿ...."

ಎಂಬ ಹೇಳಿಕೆಯನ್ನು ಇಲ್ಲಿ ನೆನಪಿಸಿಕೊಳ್ಳಬೇಕು. "ಛಂದಃ" ಎಂದರೆ ಬಯಕೆ, ಇಷ್ಟ, ಒಲವು ಎಂದರ್ಥವಿದೆ. 'ಛಂದಸ್ಸು' ಶಬ್ದ ಇದರಿಂದಲೆ ಉತ್ಪನ್ನವಾಗಿದೆಯೆಂದಿಟ್ಟು

ಕೊಳ್ಳುವುದು ಸರಿಯೆನಿಸುತ್ತದೆ. ಒಲಿದಂತೆ ಹಾಡುತ್ತ ಹೋದಾಗ ಕೂಡಿ ಬಂದುದೇ, ಸಂಗತಗೊಂಡುದೇ ಛಂದಸ್ಸು. ಇದರ ಅರ್ಥ ಶರಣರ ಸ್ವರವಚನಗಳಲ್ಲಿ ಗಣ ನಿಯಮಾದಿಗಳಿಲ್ಲವೆಂದಲ್ಲ. ಅವೆಲ್ಲ ಇವೆ. ಆದರೆ ಅವರಿಗೆ ಗಣನಿಯಮಾದಿಗಳ ಪಾಲನೆಗಿಂತ, ಒಲಿದಂತೆ ಹಾಡುವುದು ಮುಖ್ಯ.

"ಕೇಳಿದರೆ ಕೇಳು ಕೇಳದಿದ್ದರೆ ಮಾಣು. ಆನು ಹಾಡಿದಲ್ಲದೆ ಸೈರಿಸಲಾರೆನಯ್ಯಾ" ಎಂದು ಅಕ್ಕಮಹಾದೇವಿ ತಿಳಿಸಿರುವಂತೆ, ಶಿವಾನುಭವಿಗಳಾದ ಶರಣರಿಗೆ ಎದೆ ತುಂಬಿ ಬಂದಾಗ ಹಾಡಲಾರದೆ ಸಮಾಧಾನವಾಗುತ್ತಿರಲಿಲ್ಲ. ಆದುದರಿಂದ ಅವರು ಹಾಡಿದರು; ತಲ್ಲೀನರಾಗಿ ಹಾಡಿದರು, ದಂಡಿಗೆ ಹಿಡಿದು ಹಾಡಿದರು, ನಿಂದು ಹಾಡಿದರು, ಸಂಚರಿಸಿ ಹಾಡಿದರು. ಕೆಲವರು ಅವನ್ನು ಬರೆಯುವ ಗೋಜಿಗೆ ಹೋಗದೆ ಕೇವಲ ಹಾಡುತ್ತಲೇ ಹೋದರು. ಅವನ್ನು ಕೇಳಿದ ಕೆಲವರು ನೆನಪಿನಲ್ಲಿಟ್ಟುಕೊಂಡು ತಾವೂ ಹಾಡಿದರು. ಹೀಗೆ ವಾಚಿಕ ರೂಪದಲ್ಲಿ ಶರಣರ ಹಲವಾರು ಅನುಭಾವದ ಹಾಡುಗಳು ಮುಂದುವರಿದುಕೊಂಡು ಬಂದಿರುವುದನ್ನು ಕಾಣಬಹುದು. ಅವುಗಳ ಕರ್ತೃಗಳ ಹೆಸರು ತಿಳಿಯದು.

ಹೀಗೆ ವಾಚಕ ಮತ್ತು ಲಿಖಿತರೂಪದಲ್ಲಿ ಹರಿದುಬಂದಿರುವ ಸ್ವರವಚನಗಳು ಆಯಾ ಕಾಲಕ್ಕೆ ರೂಢಿಯಲ್ಲಿದ್ದ ಗೇಯಪ್ರಧಾನ ತ್ರಿಪದಿ ಚೌಪದಿ ಷಟ್ಪದಿ ಅಕ್ಕರ ಸಾಂಗತ್ಯದಂತಹ ಕನ್ನಡ ಛಂದೋಬಂಧದಲ್ಲಿವೆ. 'ಸಾಂಗತ್ಯ'ವನ್ನು 'ಸೂಳೆವಾಡು' ಎಂದೂ 'ತಿವಿದಿ'ಯನ್ನು "ಡೊಂಬಿಯ ತಂಬಟಿಗರು" ಹಾಡುವರೆಂದೂ ಉಲ್ಲೇಖಗಳಿವೆ. ಇದರಿಂದ ಈ ಛಂದೋಬಂಧಗಳಲ್ಲಿ ರಚನೆಗೊಂಡ ಶ್ರೀಸಾಮಾನ್ಯರ ಹಾಡುಗಳನ್ನು ಹಾಗೂ ಶ್ರೀಸಾಮಾನ್ಯರನ್ನು ಕೀಳಾಗಿ ಕಾಣುತ್ತಿದ್ದರೆಂಬುದು ವ್ಯಕ್ತವಾಗುತ್ತದೆ. ತಾವು ಕೈಗೆತ್ತಿಕೊಂಡ, ಆಂದೋಲನ ಶ್ರೀಸಾಮಾನ್ಯರ ಉದ್ಧಾರಕ್ಕಾಗಿ ಎಂಬುದು ಅವರಿಗೆ ಮನವರಿಕೆಯಾಗಬೇಕಾದರೆ, ಅವರಲ್ಲಿಯ ರೂಢಿಯಲ್ಲಿದ್ದ ಆಕರ್ಷಕ ಧಾಟಿಯ ವಿವಿಧ ಛಂದೋಬಂಧದ ಜನಪದ ಮಟ್ಟುಗಳಲ್ಲಿಯ ಹಾಡುಗಳನ್ನು ಬರೆಯಬೇಕಾದುದು ಅಂದಿನ ಅಗತ್ಯವಾಗಿತ್ತು. ಆದುದರಿಂದಲೆ ಅವರು ತ್ರಿಪದಿ, ಸಾಂಗತ್ಯ, ಷಟ್ಪದಿಯಂತಹ ಛಂದೋಬಂಧಗಳ ಜೊತೆಗೆ 'ಕಣಿಹಾಡು', 'ಚಂದಮಾಮ ಹಾಡು', 'ಕೊರವಂಜಿ ಹಾಡು', 'ಕೋಲುಪದ' ಇವೇ ಮೊದಲಾದ ತೀರ ಜಾನಪದ ಮಟ್ಟುಗಳಲ್ಲಿ, ಹಾಗೆಯೆ ವಿವಿಧ ಕಾಯಕ ಮತ್ತು ಸಂಸ್ಕಾರಗಳಿಗೆ ಸಂಬಂಧಿಸಿದ ಹಾಡುಗಳ ಮಟ್ಟದಲ್ಲಿ ಸ್ವರವಚನಗಳನ್ನು* ಬರೆದಿದ್ದಾರೆ.

ಶರಣರ ಸ್ವರವಚನಗಳಲ್ಲಿ ಬಳಕೆಗೊಂಡಿರುವ ಕೆಲವು ಛಂದೋಬಂಧಗಳ ಉಲ್ಲೇಖ, ಕವಿರಾಜಮಾರ್ಗದಲ್ಲಿ ಬಂದಿದೆ. 'ಚತ್ತಾಣ', 'ಬೆದಂಡೆ' ಹೆಸರಿನ ಕನ್ನಡ

* ಶ್ರೀಗಿರೀಂದ್ರನು (ಕ್ರಿ.ಶ. ೧೫ನೇ ಶತಮಾನ?) ತನ್ನ ನೂರೊಂದು ಸ್ಥಲಟೀಕೆಯಲ್ಲಿ 'ಸ್ವರವಚನ' ಎಂಬುದಕ್ಕೆ "ನಾಲ್ಕಡಿಗಳಿಂದ ಒಪ್ಪಲ್ಪಟ್ಟ ವಚನಗಳು" ಎಂದು ಹೇಳಿರುವುದು ವಿಚಾರಣೀಯವಾಗಿದೆ. ಸ್ವರವಚನಗಳ ಆರಂಭದಲ್ಲಿ 'ಪಲ್ಲ' ಇದ್ದು ಆಮೇಲೆ ೩,೫,೭,೯ ಹೀಗೆ ಬೆಸಸಂಖ್ಯೆಯ ನುಡಿಗಳಿರುತ್ತವೆ. ಕೊನೆಯ ನುಡಿಯಲ್ಲಿ 'ಅಂಕಿತ'ವಿದ್ದು ಪ್ರತಿಯೊಂದು ಸ್ವರವಚನಕ್ಕೆ ರಾಗನಿರ್ದೇಶನ ಮತ್ತು ಹೆಚ್ಚಾಗಿ ತಾಳ ನಿರ್ದೇಶನ ಇರುತ್ತದೆ.

ಕಾವ್ಯಪ್ರಕಾರಗಳ ವಿವರಣೆಯ ಸಂದರ್ಭದಲ್ಲಿ ಅಕ್ಕರ, ಚೌಪದಿ, ಗೀತಿಕೆ, ತಿವದಿ - ಇತ್ಯಾದಿಗಳನ್ನು ಅಲ್ಲಿ ಹೇಳಿದೆ. "ಮದನವತಿಯಕ್ಕರಂ...." ಎಂಬ ಕಂದ ಪದ್ಯದಲ್ಲಿ ನಾಗವರ್ಮ ಕನ್ನಡಛಂದೋಬಂಧಗಳ ಬಗ್ಗೆ ಕೆಲವು ವಿವರಗಳನ್ನು ನೀಡಿದ್ದಾನೆ. ಎರಡು ಪದ್ಯಗಳ ಒಂದು ಜೊತೆ ಪದ; ಇಂತಹ ಹನ್ನೆರಡು ಪದಗಳ ಒಂದು ಪುಂಜ 'ಮೆಲ್ಪಾಡು', ಹದಿನೈದರಿಂದ ೨೫ ಪದಗಳ ಸಮೂಹ 'ಪಾಡು'. ಇಂತಹ ಪಾಡುಗಳಿಂದ ರಚನೆಗೊಂಡದ್ದು 'ಪಾಡುಗಬ್ಬ' - ಎಂಬರ್ಥ ಬರುವ ಮಾತುಗಳು ಅಲ್ಲಿವೆ. 'ಸ್ವರವಚನ'ಗಳು ಹಾಡುಗಬ್ಬಗಳಲ್ಲಿ ಸಮಾವೇಶವಾಗುವುದರಿಂದಲೂ, ೩,೫,೭,೨೭ ನುಡಿಗಳು ಸ್ವರವಚನಗಳಲ್ಲಿ ಬರುವುದರಿಂದಲೂ, 'ನಾಗವರ್ಮ ಉಲ್ಲೇಖಿಸುವ 'ಪಾಡುಗಬ್ಬ'ಕ್ಕೂ ಸ್ವರವಚನಗಳಿಗೂ ಏನಾದರೂ ಸಂಬಂಧವಿದೆಯೇ? ವಿಚಾರಣೀಯ.

ನಾಗವರ್ಮ, ಜಯಕೀರ್ತಿಯರು ಕನ್ನಡ ಛಂದೋಬಂಧಗಳ ಲಕ್ಷಣಗಳನ್ನು ಅಂಶಗಣಾನ್ವಿತವಾಗಿ ಹೇಳಿದ್ದಾರೆ. ಕೆಲವು ಅಂಶಗಣಗಳ ಜೊತೆಗೆ ಮಾತ್ರೆಗಳ ಸಂಖ್ಯೆಯನ್ನೂ ಸೂಚಿಸಿದ್ದಾರೆ. ಇದು ಅವರ ಕಾಲಕ್ಕಾಗಲೆ ಮೂಲತಃ ಅಂಶಗಣ ಘಟಿತ ಕನ್ನಡ ಛಂದೋಬಂಧಗಳು ಮಾತ್ರಾಲಯಕ್ಕೆ ಮುಖ್ಯವಾಗಿ ೩, ೪, ೫ ಮಾತ್ರೆಗಳ ಲಯಕ್ಕೆ ತಿರುಗುತ್ತಿದ್ದುದರ ಸೂಚನೆಯಾಗಿದೆ. ಈ ಬಗೆಯ ಪರಿವರ್ತನೆಗೆ ಕಾರಣ, ಪ್ರಾಕೃತ ಛಂದಸ್ಸಿನ ಪ್ರಭಾವ. ಕನ್ನಡದಷ್ಟಲ್ಲದಿದ್ದರೂ, ಪ್ರಾಕೃತ ಮಾತ್ರಾ ಛಂದಸ್ಸಿನಲ್ಲಿಯೂ 'ಲಯ' ಇದೆ. ಆದರಿಂದಾಗಿ ಅಂಶಲಯ, ಮಾತ್ರಾಲಯಕ್ಕೆ ತಿರುಗುವ ಸಾಧ್ಯತೆ ಇದೆ. ಬಸವಾದಿಗಳ ಕಾಲಕ್ಕೆ ಅಂಶಲಯವು ಎಷ್ಟರ ಮಟ್ಟಿಗೆ ಮಾತ್ರಾಲಯಕ್ಕೆ ತಿರುಗಿರಬಹುದೆಂಬುದರ ಬಗ್ಗೆಯೂ ಆಲೋಚಿಸುವ ಅಗತ್ಯವಿದೆ. ಇದಕ್ಕೆ ಎರಡು, ಮೂರು, ನಾಲ್ಕು ಅಂಶಯುಕ್ತ ಶುದ್ಧ ಕನ್ನಡ ಗಣಗಳಲ್ಲಿ ಯಾವ ಗಣದ ಯಾವ ಅಂಶ ಏಕೆ ಮತ್ತು ಹೇಗೆ ಹಾಗೂ ಎಷ್ಟು ಮಾತ್ರೆಗಳಾಗಿ ಪರಿವರ್ತನೆಗೊಳ್ಳುತ್ತದೆಂಬುದರ ಬಗ್ಗೆಯೂ ತಿಳುವಳಿಕೆ ಇರಬೇಕಾಗುತ್ತದೆ.

ಅನುಭಾವದ ನಿಬ್ಬೆರಗಿನಲ್ಲಿ ಓತಪ್ರೋತವಾಗಿ ಹೊರಚಿಮ್ಮುವ ಭಾವವಿಶೇಷಗಳನ್ನು ಹಾಡಿನ ಮೂಲಕ ಅವತರಣಗೊಳಿಸುವ ಆ ಒಂದು ಸಂದರ್ಭದಲ್ಲಿ ಭಾವಪ್ರವಾಹಕ್ಕೆ ಛಂದಸ್ಸಿನ ಕಟ್ಟುಪಾಡುಗಳು ಒಂದು ವೇಳೆ ಅಡೆತಡೆಯೊಡ್ಡುತ್ತಿದ್ದರೆ ಛಂದಸ್ಸಿನ ಚೌಕಟ್ಟನ್ನು ಉಳಿಸಿಕೊಂಡು ಗಣ ಸಂಯೋಜನೆಯಲ್ಲಿ ಅಲ್ಪ-ಸ್ವಲ್ಪ ಬದಲಾವಣೆ ಮಾಡಿ ತಮ್ಮ ಲಯ ಹಾಗೂ ಧಾಟಿಗಳಿಗೆ ಅವುಗಳನ್ನು ಶರಣರು ಒಗ್ಗಿಸಿಕೊಂಡಿರುವ ಬಗ್ಗೆಯೂ, ಅವರ ಸ್ವರವಚನಗಳಲ್ಲಿ ಛಂದಸ್ಸನ್ನು ಹುಡುಕ ಹೊರಟವರು ತಿಳಿದಿರಬೇಕಾಗುತ್ತದೆ. ಗಣಗಳ ಕಲಬೆರಕೆಯ ಮೂಲಕ ಹಾಡಿನ ಲಯ-ಲಹರಿಯಲ್ಲಿ ವೈವಿಧ್ಯವನ್ನು ತರುವ ಪ್ರಯತ್ನ ಕೂಡ ಶರಣರಿಂದ ನಡೆದಿದೆ. ನಿತ್ಯಜೀವನದ ಸಮಯ-ಸಂದರ್ಭಗಳಿಗನುಗುಣವಾದ ಜಾನಪದ ಮಟ್ಟುಗಳನ್ನಾಧರಿಸಿ, ತಮ್ಮವೇ ಆದ ಹೊಸ ಛಂದೋರೂಪಗಳನ್ನು ಶರಣರು ನಿರ್ಮಿಸಿಕೊಂಡಿರುವುದೂ ಉಂಟು- ಇವುಗಳ ಬಗ್ಗೆಯೂ ತಿಳಿದಿರಬೇಕಾದುದು ಮುಖ್ಯ. ಒಂದೇ ಹಾಡಿನಲ್ಲಿ ಎಲ್ಲ ನುಡಿಗಳ ಛಂದಸ್ಸು ಒಂದೇ ಆಗಿರುತ್ತದೆಂದು ಹೇಳಲು ಬರುವುದಿಲ್ಲ. ಉದಾಹರಣೆಗಾಗಿ ಶಿವದಾಸ ಗೀತಾಂಜಲಿಯ ೫೩ನೆಯ ಸ್ವರವಚನ ನೋಡಬಹುದು. ಇಲ್ಲಿಯ ನುಡಿಗಳು ಯಾವುದೇ ಬಗೆಯ ಶಾಸ್ತ್ರೋಕ್ತ ಛಂದಸ್ಸಿಗೆ

ಹೊಂದಿಕೊಳ್ಳುವುದಿಲ್ಲ. ಎಂದರೆ ಪ್ರಸ್ತಾರ ಹಾಕಿ ಗಣಗಳ ಲೆಕ್ಕಾಚಾರ ಮಾಡಿ ಇದು ಇಂಥ ಛಂದಸ್ಸು ಎಂದು ಹೆಸರಿಸಲು ಬರುವುದಿಲ್ಲ. ಆದರೆ ಹಾಡುವಾಗ ಒಂದು ಗಣ ಇಲ್ಲವೆ ಗಣದೊಳಗಿನ ಒಂದು ಅಂಶ ಅಥವಾ ಮಾತ್ರೆ ಕಡಿಮೆ ಆಗಿದ್ದರೆ ಅದನ್ನು ಎಳೆದು ಇಲ್ಲವೆ ಆಲಾಪದ ಮೂಲಕ ತುಂಬಿಕೊಳ್ಳಲಾಗುತ್ತದೆ. ಹೆಚ್ಚಾಗಿದ್ದರೆ ಧ್ರುತಗತಿಯ ಮೂಲಕ ಕರಗಿಸಿಕೊಳ್ಳಲಾಗುತ್ತದೆ. ಅಂಶಲಯ ಛಂದಸ್ಸಿನಲ್ಲಿ ಈ ಬಗೆಯ ಅನುಕೂಲ ಇದ್ದೇ ಇದೆ. ಮಾತ್ರಾಲಯಕ್ಕೆ ಇದನ್ನು ವಿಸ್ತರಿಸಿಕೊಳ್ಳಲಾಗಿದೆ.

ಹೀಗೆ ಸ್ವರವಚನಗಳ ಛಂದಸ್ಸು ಶಾಸ್ತ್ರೋಕ್ತ ನಿಯಮಗಳಿಗೆ ಗೆರೆ ಕೊರೆದಂತೆ ಹೊಂದಿಕೊಳ್ಳದಿದ್ದರೂ ಅವುಗಳಿಗೆ ಒಂದು ಲಯ ಹಾಗೂ ಧಾಟಿ ಇದ್ದೇ ಇರುತ್ತದೆಂಬುದನ್ನು ಮರೆಯಲಾಗದು.

ಸ್ವರವಚನಗಳಲ್ಲಿ ಬರುವ ಛಂದಸ್ಸು ಕಿವಿಗೆ ವೇದ್ಯವಾಗುವ ಛಂದಸ್ಸು, ಕಣ್ಣಿಗೆ ಕಾಣುವ ಛಂದಸ್ಸಲ್ಲ. ಎಂದರೆ ಕಿವಿಗೆ ವಿಷಯವಾದ ಮೂಲನಾದವನ್ನು ಹಿಡಿದು ಹಾಡುತ್ತ ಹೋದಂತೆ, ಲಯವೂ ಕಿವಿಗೆ ವೇದ್ಯವಾಗುತ್ತದೆ, ತಾಳವೂ ಬೀಳುತ್ತ ಹೋಗುತ್ತದೆ. ಇಂತಹ ಎರಡು ತಾಳಗಳ ಮಧ್ಯದ ಅವಧಿಯೇ ಸ್ವರವಚನಗಳಲ್ಲಿ 'ಗಣ' ಎನಿಸುತ್ತದೆ. ಗುರು, ಲಘು ಪ್ರಸ್ತಾರ ಹಾಕಿ ಅಂಶಗಳನ್ನೇ ಮಾತ್ರೆಗಳನ್ನೇ ಗುರುತಿಸಿ ಇದು ಇಂಥ ಗಣ, ಇವು ಇಷ್ಟು ಬಂದಿವೆ, ಆದ್ದರಿಂದ ಇದು ಇಂಥ ಛಂದಸ್ಸು ಎಂದು ತೋರಿಸುವುದು ಕಣ್ಣಿಗೆ ಕಾಣುವ ಛಂದಸ್ಸು.

ಈ ಹಿನ್ನೆಲೆಯಲ್ಲಿ ನೋಡಿದಾಗ ಸ್ವರವಚನಗಳ ಛಂದಸ್ಸನ್ನು ಶಾಸ್ತ್ರೋಕ್ತ ರೀತಿಯಲ್ಲಿ ಗುರುತಿಸುವುದು ಕಷ್ಟದಾಯಕ. ಆದರೆ ಅನೇಕ ಹಾಡುಗಳು ಛಂದಶ್ಶಾಸ್ತ್ರದ ನಿಯಮಗಳಿಗೆ ಬಹುಮಟ್ಟಿಗೆ ಅಳವಟ್ಟಿವೆ. ಹಾಗೆಯೆ ಶಾಸ್ತ್ರದ ನಿಯಮಗಳಿಗೆ ಅಳವಡದ ನುಡಿಗಳಲ್ಲಿ ಲಾಸ್ಯವಾಡುತ್ತಿರುವ ಅಂಶಲಯ ಅಥವಾ ಮಾತ್ರಾಲಯಗಳಲ್ಲಿರುವ ಒಂದು ಬಗೆಯ ವ್ಯವಸ್ಥೆಯ ವಿನ್ಯಾಸವನ್ನು ಕುರಿತು ಒಂದಿಷ್ಟು ಪರಿಶೀಲಿಸಬಹುದು.

ಬಸವಾದಿಗಳಿಂದ ಮೊದಲ್ಗೊಂಡು ಇಂದಿನವರೆಗೆ ವೀರಶೈವ ಶರಣರು, ಅನುಭಾವಿಗಳು ರಚಿಸಿರುವ ಹಾಡುಗಳಲ್ಲಿ ಪ್ರತಿಯೊಂದೂ ಪಲ್ಲವ (ಕೆಲವೊಮ್ಮೆ ಅನುಪಲ್ಲವ) ಬಿಟ್ಟು, ಉಳಿದಂತೆ ಎರಡರಿಂದ ಮೊದಲುಗೊಂಡು ಹತ್ತು (ಕೆಲಸಲ ಅದಕ್ಕೂ ಹೆಚ್ಚು) ಸಾಲುಗಳುಳ್ಳ ಬೆಸ ಸಂಖ್ಯೆಯ (೧, ೩, ೫, ೭, . . . . ಇತ್ಯಾದಿ) ನುಡಿಗಳಿಂದ ಕೂಡಿರುವುದು ಸಾಮಾನ್ಯ. ಇಂಥವುಗಳಲ್ಲಿ ನಾಲ್ಕು ಸಾಲುಗಳಿಂದ ಸಮನ್ವಿತವಾಗಿರುವ ನುಡಿಗಳನ್ನು ಒಳಗೊಂಡಿರುವ ಹಾಡುಗಳ ಸಂಖ್ಯೆಯೇ ಅಧಿಕ.

ಬೇರೆ ಬೇರೆ ಶರಣರ ಹಾಡುಗಳ ಸಂಕಲನ ಗ್ರಂಥವಾಗಿರುವ 'ಶಿವದಾಸ ಗೀತಾಂಜಲಿ' (ಸಂ. ಡಾ. ಎಲ್. ಬಸವರಾಜು)ಯಲ್ಲಿ ಒಟ್ಟು ೨೪೦ ಹಾಡುಗಳಿದ್ದು ಅವುಗಳಲ್ಲಿ ಮುಕ್ಕಾಲು ಭಾಗಕ್ಕಿಂತ ಹೆಚ್ಚು ಎಂದರೆ ೧೮೭ ಹಾಡುಗಳಲ್ಲಿ ನಾಲ್ಕು ಸಾಲಿನ ನುಡಿಗಳಿವೆ. ಉಳಿದಂತೆ, ಎರಡೆರಡು, ಸಾಲಿನ ನುಡಿಗಳ ಅಂದಾಜು ೧೫(ಹಾಡಿನ ಸಂಖ್ಯೆ ೧೩, ೭೨, ೮೪, ೯೦ . . . . . ಇತ್ಯಾದಿ), ಮೂರು ಮೂರು ಸಾಲಿನ ಐದು (ಕ್ರ. ಸಂ. ೧೫, ೪೦,

೧೨. . . . ) ಆರು ಆರು ಸಾಲಿನ ೩೨(ಕ್ರ. ಸಂ. ೩, ೯, ೨೭, . . . . . .ಇತ್ಯಾದಿ), ಒಂಬತ್ತು ಒಂಬತ್ತು ಸಾಲಿನ ಒಂದು (ಕ್ರ. ಸಂ. ೨೧೪)- ಸ್ವರವಚನಗಳೂ ಇದರಲ್ಲಿವೆ.

ವಿವಿಧ ಶರಣರ ಒಟ್ಟು ೨೧೭ ಹಾಡುಗಳನ್ನು ಒಳಗೊಂಡ ಇನ್ನೊಂದು ಬೃಹತ್ ಸಂಪುಟ 'ಗಣವಚನರತ್ನಾವಳಿ' (ಸಂ. ಕಂಬಾಳ ಶಾಂತಮಲ್ಲೇಶ). ಅಲ್ಲಿಯ ಸ್ವರವಚನಗಳಲ್ಲಿ ಅರ್ಧಕ್ಕಿಂತ ಹೆಚ್ಚು ಎಂದರೆ ೧೫೭ ಸ್ವರವಚನಗಳು ನಾಲ್ಕು ನಾಲ್ಕು ಸಾಲಿನ ನುಡಿಗಳನ್ನು ಒಳಗೊಂಡುವಾಗಿವೆ. ಉಳಿದವುಗಳಲ್ಲಿ ಎರಡೆರಡು ಸಾಲಿನ ನುಡಿಗಳ ೧೪ ಮೂರು ಮೂರು ಸಾಲಿನ ನುಡಿಗಳ ಮೂರು, ಐದೈದು ಸಾಲಿನ ನುಡಿಗಳ ಒಂದು ಆರು ಸಾಲಿನ ನುಡಿಗಳ ಇಪ್ಪತ್ತಾರು, ಏಳೇಳು ಸಾಲಿನ ಒಂದು ಏಳು ಮತ್ತು ಎಂಟು ಸಾಲಿನ ನುಡಿಗಳು ಎಂಟೆಂಟು ಸಾಲಿನ ನಾಲ್ಕು ಹಾಡುಗಳು ಇದರಲ್ಲಿ ಸಮಾವೇಶಗೊಂಡಿವೆ. ಜೊತೆಗೆ ಒಂದೇ ಹಾಡಿನಲ್ಲಿ ಎರಡು ಹಾಗೂ ಮೂರು ಸಾಲಿನ ನುಡಿಗಳು (ಕ್ರ. ಸಂ.೧೪೫), ಏಳು ಮತ್ತು ಎಂಟು ಸಾಲಿನ ನುಡಿಗಳು (ಕ್ರ. ಸಂ. ೧೯೯) ಇರುವ ಹಾಡುಗಳನ್ನು ಇಲ್ಲಿ ಕಾಣಬಹುದು.

ಇದು ಸ್ವರವಚನ ಸಂಕಲನಗಳ ಮಾತಾದರೆ ಒಬ್ಬನೆ ರಚಿಸಿದ ಹಾಡುಗಳುಳ್ಳ ಕೃತಿಗಳಲ್ಲೂ ನಾಲ್ಕು ನಾಲ್ಕು ಸಾಲಿನ ನುಡಿಗಳನ್ನೊಳಗೊಂಡ ಹಾಡುಗಳ ಸಂಖ್ಯೆಯೇ ಅಧಿಕವಾಗಿರುವುದು ಗಮನೀಯ. ಗುರುಬಸವಾರ್ಯನು ರಚಿಸಿರುವ ಒಟ್ಟು ೨೬೦ ಹಾಡುಗಳಲ್ಲಿ (ಸಂ. ಮೊರಬದ ಮಲ್ಲಿಕಾರ್ಜುನ)೧೪೨ ಸ್ವರವಚನಗಳು ನಾಲ್ಕು ನಾಲ್ಕು ಸಾಲಿನ ನುಡಿಗಳಿಂದ ಕೂಡಿದವಾಗಿವೆ. ಇದೇ ರೀತಿ :ಕಸ್ತೂರದೇವನ ೧೧೩ ಸ್ವರವಚನಗಳಲ್ಲಿ (ಸಂ. ಎಂ. ಎಸ್. ಸುಂಕಾಪುರ) ಅನುಬಂಧದಲ್ಲಿಯ ಹದಿಮೂರು ಹಾಡನ್ನು ಸೇರಿಸಿ ೯೫, ಹಾಗಲವಾಡಿ ಮುದ್ವೀರ ಸ್ವಾಮಿಯ ೧೦೮ ಹಾಡುಗಳಲ್ಲಿ (ಸಂ. ಡಾ. ವೀರಣ್ಣ. ರಾಜೂರ) ೯೪, ಇಮ್ಮಡಿ ಮುರುಘಾ ಗುರುಸಿದ್ಧ ಸ್ವಾಮಿಗಳ ಕೈವಲ್ಯಸೋಪಾನ ನಾಮ್ಮೈಕೋತ್ತರ ಶತಸ್ಥಲ ಗ್ರಂಥದ (ಸಂ. ಜಿ. ಎ. ಶಿವಲಿಂಗಯ್ಯ) ೧೦೭ ಹಾಡುಗಳಲ್ಲಿ ೮೨, ಜಾನಪದ ಅನುಭಾವಿ ಕಡಕೋಳ ಮಡಿವಾಳಪ್ಪ ಅವರ ೩೧೦ ಹಾಡುಗಳಲ್ಲಿ (ಸಂ. ಮಲ್ಲಿಕಾರ್ಜುನ ಲಠ್ಠೆ) ೨೨೧, ಕೂಡಲೂರು ಬಸವಲಿಂಗ ಶರಣರ ೧೨೪ ಸ್ವರವಚನಗಳಲ್ಲಿ (ಸಂ. ಶಾಂತರಸ) ೯೦, ಸ್ವರವಚನಗಳು ನಾಲ್ಕು ನಾಲ್ಕು ಸಾಲಿನ ನುಡಿಗಳಿಂದ ಕೂಡಿಮವಾಗಿವೆ. ನಿಜಗುಣ ಶಿವಯೋಗಿಗಳು ಕೂಡ ಇದಕ್ಕೆ ಹೊರತಲ್ಲ. ಇದರಿಂದ, ಈ ಎಲ್ಲ ಅನುಭಾವಿ ಕವಿಗಳು, ೨, ೩, ೫ ಇತ್ಯಾದಿ ಬೇರೆ ಬೇರೆ ಸಂಖ್ಯೆಯ ಸಾಲುಗಳಿಂದ ಕೂಡಿದ ನುಡಿಗಳಲ್ಲಿ ತಮ್ಮ ಹಾಡುಗಳನ್ನು ರಚಿಸಿದರೂ, ನಾಲ್ಕು ಸಾಲುಗಳಿಂದ ಕೂಡಿದ ನುಡಿಗಳನ್ನೇ ಅವರು ಹೆಚ್ಚಾಗಿ ಬಳಸುತ್ತಿದ್ದಂತೆ ತಿಳಿಯುತ್ತದೆ. ಶ್ರೀಗಿರೀಂದ್ರನು ನಾಲ್ಕು ಪಾದಗಳ ಪದ್ಯಗಳನ್ನು 'ಸ್ವರವಚನ' ಎಂದು ಕರೆದಿರುವುದಕ್ಕೆ ಕಾರಣ ಪ್ರಾಯಃ ಇದೇ ಇರಬೇಕೆನಿಸುತ್ತದೆ.

ಆದರೆ ಮುಪ್ಪಿನ ಷಡಕ್ಷರಿ, ಛಂದಶ್ಯಾಸ್ತ್ರಬದ್ಧ ಮಾತ್ರಾಗಣ ಘಟಿತ ವಿವಿಧ ಷಟ್ಪದಿಗಳನ್ನು, ಸಾಲೋಟಗಿ ಶಿವಯೋಗಿಶ್ವರ ತಮ್ಮ ಡಂಗುರ ಪದಗಳಿಗೆ (ಸಂ. ಎಮ್. ಎನ್. ವಾಲಿ) ಎಂಟು ಸಾಲಿನ ನುಡಿ(ಅಷ್ಟಕ)ಗಳನ್ನು ಘನಮಠ ಶಿವಯೋಗಿಗಳು ಎರಡು ಸಾಲಿನ ನುಡಿಗಳನ್ನು (ಸಂ. ಭೂಸನೂರಮಠ. ಸಂ. ೬) ಹೆಚ್ಚು ಸಂಖ್ಯೆಯಲ್ಲಿ ಬಳಸಿರುವುದೂ ಉಂಟು.

ದ್ವಿಪದಿ, ತ್ರಿಪದಿ, ಚೌಪದಿ ಇತ್ಯಾದಿ ಛಂದಶ್ಶಾಸ್ತ್ರೋಕ್ತ ಹೆಸರುಗಳಿಗೆ ಬದಲಾಗಿ, ಎರಡು ಸಾಲಿನ ನುಡಿ, ಮೂರು ಸಾಲಿನ ನುಡಿ ಮುಂತಾಗಿ ನಾನು ಹೇಳಿರುವುದಕ್ಕೆ ಕಾರಣವಿದೆ. ಇಲ್ಲಿಯ ಮೂರು ಸಾಲಿನ ಎಲ್ಲ ನುಡಿಗಳು ಛಂದಶ್ಶಾಸ್ತ್ರೋಕ್ತ 'ತ್ರಿಪದಿ'ಯ ಲಕ್ಷಣಗಳನ್ನು, ಆರು ಸಾಲಿನ ನುಡಿಗಳು ಷಟ್ಪದಿಯ ಲಕ್ಷಣಗಳನ್ನು ಮೀರಿ ನಿಲ್ಲುತ್ತವೆ. ಉದಾಹರಣೆಗೆ ಶಿವದಾಸ ಗೀತಾಂಜಲಿಯ ೧೨೦ನೆಯ ಕ್ರಮಸಂಖ್ಯೆಯ ಸ್ವರವಚನ ಪ್ರಭುದೇವರದಾಗಿದ್ದು, ಅದರಲ್ಲಿ 'ಪಲ್ಲವ' ಬಿಟ್ಟು ಆರುಸಾಲಿನ ಮೂರು ನುಡಿಗಳಿವೆ. ಅವುಗಳಲ್ಲಿ ಮೂರನೆಯ ನುಡಿ ಹೀಗಿದೆ.

ಕಂಚಿನ ಕರಡಗೆಯೊಳಗೆ
ಕಂಬಿಯ ತೆರಣಿಗಟ್ಟಿ
ನಿಂತಳು ನಾಲ್ವರು ಮುಟ್ಟಿ ನಿರಾಕಾರ।
ಹೇಳುವಡಾರಳವಲ್ಲ
ಕೇಳುವ ಪುರುಷನೆ ಬಲ್ಲ
ಇದರ ಭೇದವ ನಮ್ಮ ಗೊಹೇಶ್ವರನೇ ಬಲ್ಲ ॥

ಆದಿ ಪ್ರಾಸರಹಿತ ಆರು ಸಾಲುಗಳ ಈ ನುಡಿ, ಅಂಶಗಣ ಇಲ್ಲವೆ ಮಾತ್ರಾಗಣ ಘಟಿತ ಯಾವುದೇ ಷಟ್ಪದಿಯ ಲಕ್ಷಣಗಳನ್ನು ಒಳಗೊಂಡಿಲ್ಲ. ಮಾತ್ರಾಲಯವಾಗಲಿ ಅಂಶಲಯವಾಗಲಿ ಉದ್ದಕ್ಕೂ ಹರಿದುಬಂದಿಲ್ಲ. ಆದುದರಿಂದ ಇದನ್ನು ಆರುಸಾಲಿನ ನುಡಿಯೆಂದು ಮಾತ್ರ ಹೇಳಬಹುದು.

ಗುರುಬಸವಾರ್ಯನ ಒಂದು ಸ್ವರವಚನ(ಸಂ. ೧೯೬) ಆರುಸಾಲಿನ ಒಂಬತ್ತು ನುಡಿಗಳನ್ನು ಒಳಗೊಂಡಿದ್ದು ಅವುಗಳಲ್ಲಿ ಆರನೆಯ ನುಡಿ ಹೀಗಿದೆ:

ಎಲ್ಲಿಯವನೆಂದು ಎನ್ನ ಹುಲ್ಲಿಗೆಣೆಯ ಮಾಡಬ್ಯಾಡ
ಬಲ್ಲಿದವರ ಗುಣವಿದಲ್ಲವೊ ಹೇ ಬಸವಲಿಂಗ
ನಿಲ್ಲದೆ ನೀನೆನ್ನ ಸಲಹೊ ಬೇಗದಿ
ಅಲ್ಲದಾಟಗಳನಾಡಿ ಬಲ್ಲದನೆನೆ ಬಡಿದು ಬಿಡಿಸಿ
ಕುಲ್ಲಮನವ ಬಿಡಿಸಾ ನಂಬಿದೆ ಹೇ ಬಸವಲಿಂಗ
ಕೊಲ್ಲದದಾನೇಕ ಪೇಳಲಿ

ಆರು ಸಾಲು, ಮತ್ತು ಆದಿಪ್ರಾಸ ಇರುವುದನ್ನು ಬಿಟ್ಟರೆ ಉಳಿದ ಯಾವುದೇ ಷಟ್ಪದಿಯ ಲಕ್ಷಣಗಳಿಗೆ ಇದು ಹೊಂದಿಕೊಳ್ಳುವುದಿಲ್ಲ. ಇದೇ ರೀತಿ, ಶಾಸ್ತ್ರಶುದ್ಧ ಛಂದೋಬಂಧಗಳಾದ ತ್ರಿಪದಿ, ಚೌಪದಿ, ಮದನವತಿ, ಛಂದೋವತಂಸ, ಸಾಂಗತ್ಯಾದಿಗಳಿಗೆ ಹೊಂದಿಕೆಯಾಗದ ಹಲವಾರು ಮೂರು ಹಾಗೂ ನಾಲ್ಕು ಸಾಲಿನ ಹಾಡುಗಳು ಬೇರೆ ಬೇರೆ ಸ್ವರವಚನಕಾರರ ಕೃತಿಗಳಲ್ಲಿವೆ. ಇದಕ್ಕೆ ಕಾರಣ: ಅಂಶ ಇಲ್ಲವೆ ಮಾತ್ರಾಲಯದ ಒಂದು ಘಟ ಅಥವಾ ಮಟ್ಟು ಹಿಡಿದು ಶಿವಾನುಭವಿಯೊಬ್ಬ ಗುನುಗುನಿಸುತ್ತ, ಸ್ವಚ್ಛಂದವಾಗಿ

ತನ್ಮಯನಾಗಿ ಹಾಡು ಹೇಳುತ್ತ ಹೋದಂತೆ, ತಾಳ ಬೀಳುತ್ತ, ಗಣಗಳು ತಂತಾನೆ ವಿನ್ಯಾಸಗೊಳ್ಳುತ್ತ ಹೋಗುವುದೇ ಆಗಿದೆ. ತಾನೆ ತಾನಾಗಿ ಹಾಡುವ ಶಿವಯೋಗಿ ಛಂದಸ್ಸಿನ ನಿಯಮಗಳ ಬಗ್ಗೆ ಆಲೋಚನೆ ಮಾಡಲು ಹೋಗುವುದಿಲ್ಲ. ಏಕೆಂದರೆ ಛಂದಸ್ಸೇ ಅವರನ್ನು ಅನುಸರಿಸಿ ಬರುತ್ತದೆ. ಅವರು ಹಾಡಿದ ಹಾಡು ತಂತಾನೆ ಚಂದವಾಗಿರುತ್ತದೆ. ಇಲ್ಲಿ ಗುರುಬಸವಾರ್ಯನ ಒಂದು ಹಾಡನ್ನು ಉದ್ಧರಿಸಬೇಕೆನಿಸುತ್ತದೆ.

ಛಂದಗಣನೇಮಗಳ ಮುಖ್ಯ ಪದ ಪದ್ಯಕ್ಕೆಂದು
ನುಡಿಯುತ್ತಿಹೆಯಾ ಮನುಜ
ಒಂದನರಿಯದೆ ಮನಬಂದಂತೆ ನುಡಿದು
ಬಲು ಸಂದೇಹಕಿಳಿಯದಿರು ಮನುಜ
. . . . . . . . . . . . . . . . .
ಛಂದ ಗಣನೇಮಗಳೆ ದೈವವಾದಡೆಯೂ
ಬಂಧನಕೆ ಸಿಕ್ಕುವರೆ ಮನುಜಾ
. . . . . . . . . . . . . . . .
ಇಂದುಧರ ಶರಣರೆಂತೆಂದು ಹಾಡಿದರೆ
ಚಂದವೆಲ್ಲವು ಕೇಳು ಮನುಜ
ಛಂದ ಗಣನೇಮಗಳು ಎಂಬ
ನಾಯ್ಗಳ ನಚ್ಚಿ ಬಂಡಾಗಿ ಹೋಗದಿರು ಮನುಜ
ಚಂದದೊಳು ಬಸವ ಬಸವಾ ಎಂದು
ಭವಮಾಲೆ ದಂದುಗವನೀಡಾಡು ಮನುಜ

(ಹಾಡು ೨೪, ಪದ್ಯ ೧೨, ಪಾದ ವಿನ್ಯಾಸದಲ್ಲಿ ಒಂದಿಷ್ಟು ಬದಲಾವಣೆ ಮಾಡಿಕೊಳ್ಳಲಾಗಿದೆ.)

ಛಂದಗಣನಿಯಮಗಳ ಬಂಧನಕ್ಕೆ ಸಿಲುಕದ ಶರಣರ ಸ್ವತಂತ್ರ ಮನೋವೃತ್ತಿ ಶಿವನನ್ನು ಶಿವಶರಣರನ್ನು ನೆನೆಯುತ್ತ ತಲ್ಲೀನತೆಯಲ್ಲಿ ಹಾಡುತ್ತ ಹೋದರೆ ಅದು ಚಂದವೇ ಆಗಿರುತ್ತದೆಂಬ ಅವರ ದೃಢನಂಬಿಕೆ ಇಲ್ಲಿ ಪ್ರಕಟವಾಗಿವೆ.

ಶಾಸ್ತ್ರಶುದ್ಧ ಛಂದೋಬಂಧಗಳಿಗೆ ಹೊಂದದೆ ಸ್ವಚ್ಛಂದ ಛಂದದಲ್ಲಿರುವ ಶಿವಶರಣರ ಹಲವಾರು ಸ್ವರವಚನಗಳ ಜೊತೆಗೆ ಛಂದಸ್ಸಿನ ನಿಯಮಗಳನ್ನು ಬಹುತೇಕ ಪಾಲಿಸಿಕೊಂಡು ಬಂದಿರುವ ಅವರ ಅನೇಕ ರಚನೆಗಳೂ ಇವೆ.

ದೇಹಾಭಿ।ಮಾನಕುಲ।ಛಲವಳಿದು।ಭಕ್ತಿದಾ
ಸೋಹವಳ।ವಟ್ಟುಜಂ।ಗಮ ಪ್ರಸಾದ ಪ್ರಾಣ
ಗ್ರಾಹಕತೆ।ನೆಲೆಗೊಂಡು।ಸರ್ವಾಂಗ।ದೊಳಗೆಸ।ರ್ವಾಚಾರ।ಲೀಯವಾಗಿ
ಸೋಹದಾ।ಸೋಹವೆಂ।ಬೆರಡರತು।ಸಹಜ ೧

ರ್ದೇಹಿಯಾ|ಗಿಪ್ಪಭ|ಕ್ತರಭಕ್ತ|ನಾಗಿ ಶಿವ
ಭಾವಭರಿ|ತಾನಂದ|ಸುಖವನೀ|ಯೆನಗೆಕರು|ಣಾಬ್ಧಿ ಸೊ|ಡ್ಡಳಲಿಂಗವೆ|
(ಶಿವದಾಸ ಗೀತಾಂಜಲಿ ಹಾಡು ೯, ಕೊನೆಯ ನುಡಿ)

ಸೊಡ್ಡಳಲಿಂಗ ಅಂಕಿತದ ಈ ಸ್ವರವಚನ ಶಾಸ್ತ್ರಶುದ್ಧ ವಾರ್ಧಕ ಷಟ್ಪದಿಯಲ್ಲಿದೆ. ಎರಡನೆಯ ಪಾದದಲ್ಲಿ ಬರುವ 'ಪ್ರ' ಅಕ್ಷರ ಶಿಥಿಲವೆಂದು ಪರಿಗಣಿಸಬೇಕು. ಕೊನೆಯ ಪಾದದಲ್ಲಿ ದ್ವಿತೀಯಾಕ್ಷರ ಪ್ರಾಸವನ್ನು ಮೀರುವ ಶರಣರ ಸ್ವಾತಂತ್ರ್ಯ ಇಲ್ಲಿ ಅಭಿವ್ಯಕ್ತ. ಶಿವದಾಸಗೀತಾಂಜಲಿಯಲ್ಲಿ ಇನ್ನು ಕೆಲವು ಹಾಡುಗಳು (ಕ್ರ. ಸಂ. ೩, ೩೯ ಇತ್ಯಾದಿ) ವಾರ್ಧಕದಲ್ಲಿವೆ. ಹಾಗೆಯೆ (ಕ್ರ. ಸಂ. ೧೮, ೧೮೨, ೧೮೩ ಇತ್ಯಾದಿ) ಭೋಗ (ಕ್ರ. ಸಂ. ೭೭, ೧೨೦), ಭಾಮಿನಿ (ಕ್ರ. ಸಂ. ೨೩, ೧೫೪) ಪರಿವರ್ಧಿನಿ (ಕ್ರ. ಸಂ. ೧೪, ೩೩, ೩೭ ಇತ್ಯಾದಿ) ಈ ಷಟ್ಪದಿಗಳಲ್ಲಿಯೂ ಇರುವುದನ್ನು ಕಾಣಬಹುದು.

ಒಬ್ಬ ಶರಣನೇ ಬರೆದ ಹಲವಾರು ಹಾಡುಗಳಲ್ಲಿ ಕೂಡ ಶಾಸ್ತ್ರಶುದ್ಧ ಷಟ್ಪದಿಗಳಿವೆ. ಗುರುಬಸವಾರ್ಯನ ೭೯ ಮತ್ತು ೨೦೨ ನೇ ಕ್ರಮಸಂಖ್ಯೆಯ ಹಾಡುಗಳು ವಾರ್ಧಕದಲ್ಲಿಯೂ, ಭೋಗಷಟ್ಪದಿಯಲ್ಲಿದ್ದರೆ, ೭೪, ೧೫೩, ಕ್ರ. ಸಂ. ಹಾಡುಗಳು ಪರಿವರ್ಧಿನಿಯಲ್ಲಿಯೂ ಇವೆ. ಮುಪ್ಪಿನ ಷಡಕ್ಷರಿಯ ೨೫೩ನೆಯ ಕ್ರ. ಸಂ. ಹಾಡು ಕುಸುಮ ಷಟ್ಪದಿಯಲ್ಲಿ. 'ಸುಬೋಧಸಾರ' , ಕೃತಿಯಲ್ಲಿ ೧ ರಿಂದ ೧೮ ರವರೆಗಿನ ಹಾಡುಗಳು ಭಾಮಿನಿ ೧೯ ರಿಂದ ೪೯ ರವರೆಗಿನವು ಭೋಗಷಟ್ಪದಿಯಲ್ಲಿ, ೫೦ ರಿಂದ ೫೭ರವರೆಗಿನವು ಭಾಮಿನಿ ಷಟ್ಪದಿಯಲ್ಲಿ, ೫೮ರಿಂದ ೭೨ರ ವರೆಗಿನವು ಪರಿವರ್ಧಿನಿ ಷಟ್ಪದಿಯಲ್ಲಿ, ೭೩ನೆಯ ಹಾಡು ವಾರ್ಧಕದಲ್ಲಿರುವುದು ಗಮನಿಸಬೇಕಾದ ಅಂಶ. ಹೀಗೇ ಇನ್ನೂ ಹಲವಾರು ಶಿವಾನುಭವಿಗಳು ಶಾಸ್ತ್ರಶುದ್ಧ ಷಟ್ಪದಿ ಛಂದದಲ್ಲಿಯೂ ಕೆಲವು ಹಾಡುಗಳನ್ನು ಬರೆದಿದ್ದಾರೆ.

ಈ ಮೊದಲೆ ಹೇಳಿದಂತೆ ನಾಲ್ಕು ಸಾಲಿನ ನುಡಿಗಳನ್ನೊಳಗೊಂಡ ಹಾಡುಗಳನ್ನೇ ಶರಣರು ಹೆಚ್ಚು ಶುದ್ಧ ಕನ್ನಡ ಛಂದೋಬಂಧಗಳಾದ, ಮದನವತಿ, ಅಕ್ಕರ, ಅದರ ವಿವಿಧ ಪ್ರಕಾರಗಳು, ಚೌಪದಿ, ಗೀತಿಕೆ, ಉತ್ಸಾಹ, ಅಕ್ಕರಿಕೆ, ಛಂದೋವತಂಸ, ಸಾಂಗತ್ಯ ಕೆಲವು ಸಂಪ್ರದಾಯದ ಹಾಡುಗಳಲ್ಲಿ ಬರೆದಿದ್ದಾರೆ. ಇವುಗಳಲ್ಲಿ ಕೆಲವು ಛಂದಸ್ಸುಗಳ ಲಕ್ಷಣಗಳನ್ನು ನಾಗವರ್ಮ, ಜಯಕೀರ್ತಿಯರು ಹೇಳಿದ್ದಾರೆ. ಇವೆಲ್ಲ ಜನಪದದ ಹಾಡುಗಳಲ್ಲಿ ಪ್ರಯೋಗಗೊಳ್ಳುತ್ತಿರಬಹುದಾದರೂ, ಶಿಷ್ಟರಲ್ಲಿ ಅಕ್ಕರ ಅಕ್ಕರಿಕೆಯಂತಹ ಒಂದೆರಡನ್ನು ಮಾತ್ರ ಶಿಷ್ಟಕವಿಗಳು ಪ್ರಯೋಗ ಮಾಡಿದ್ದಾರೆ. ಮದನವತಿ, ಛಂದೋವತಂಸದಂತಹ ಛಂದೋಬಂಧಗಳ ಬಳಕೆ ಅವರ ಕಾವ್ಯಗಳಲ್ಲಿ ಆಗಿಲ್ಲ. ಅಲ್ಲದೆ ಉತ್ಸಾಹದಂತಹ ಒಂದೆರಡು ಛಂದೋಬಂಧಗಳ ಲಕ್ಷಣಗಳನ್ನು ನಾಗವರ್ಮಾದಿಗಳು ಅಂಶ ಮತ್ತು ಮಾತ್ರಾಗಣವಾಗಿಯೂ ಹೇಳಿದ್ದಾರೆ. ಇದರಿಂದ ಅವರ ಕಾಲಕ್ಕಾಗಲೆ ಅಂಶಗಣಗಳು ಮಾತ್ರಾಗಣಗಳಾಗಿ ಮಾರ್ಪಡುವ ಪ್ರಕ್ರಿಯೆ ಅವರಿಗಿಂತ ಹಿಂದಿನಿಂದಲೂ ಆರಂಭವಾಗಿತ್ತೆನ್ನಬಹುದು. ಬಸವಾದಿಗಳ ಕಾಲಕ್ಕೆ ಅದು ಇನ್ನೂ ಅಧಿಕ ಪ್ರಮಾಣದಲ್ಲಿ ಮುಂದುವರೆದಿರುವುದರಲ್ಲಿ ಸಂಶಯವಿಲ್ಲ. ಇಂತಹ ಒಂದು ಪರಿಸ್ಥಿತಿಯಲ್ಲಿ, ಸ್ವರವಚನಗಳಲ್ಲಿ ಬಳಕೆಗೊಂಡಿರುವ ನಾಲ್ಕು ಸಾಲಿನ ಪದ್ಯಗಳ ಛಂದಸ್ಸನ್ನು ಗುರುತಿಸಿ,

ಇದು ಇಂಥ ಛಂದಸ್ಸೆಂದು ಗೆರೆಕೊರೆದಂತೆ ಹೇಳುವುದು ತುಂಬಾ ಕಷ್ಟದ ಕೆಲಸ. ಅನೇಕ ವೇಳೆ ಇದರಲ್ಲಿ ಅಂಶಲಯವಿದೆ, ಇಲ್ಲಿ ಮಾತ್ರಾಲಯವಿದೆ, ಈ ಸಾಲಿನಲ್ಲಿ ಇಷ್ಟು ಮಾತ್ರೆಯ ಅಥವಾ ಇಷ್ಟು ಅಂಶದ ಇಷ್ಟು ಗಣಗಳಿವೆ ಎಂಬಿಷ್ಟನ್ನು ಹೇಳಿ ತೃಪ್ತಿಪಟ್ಟುಕೊಳ್ಳಬೇಕಾಗುತ್ತದೆ.

ನಾಗವರ್ಮಾದಿಗಳಿಗಿಂತ ಮೊದಲಿನಿಂದಲೆ, ಅಂಶಲಯ ಮಾತ್ರಾಲಯಕ್ಕೆ ಹೊಂದಿಕೊಳ್ಳುವ ಪ್ರಕ್ರಿಯೆ ಮೇಲೆ ಹೇಳಿದಂತೆ ಆಗಲೆ ಆರಂಭಗೊಂಡುದು, ಬಸವಾದಿಗಳ ಕಾಲಕ್ಕೆ ಅದು ಇನ್ನೂ ಹೆಚ್ಚು ವ್ಯಾಪಕವಾಗಿರಬಹುದಾದುದು ಸಹಜ. ಆದುದರಿಂದ ಬಸವಾದಿಗಳಿಂದ ಮತ್ತು ಅನಂತರದ ಶರಣರಿಂದ ರಚನೆಗೊಂಡ ಹಾಡುಗಳ ಲಕ್ಷಣವನ್ನು ಮಾತ್ರಾಲಯ ಅಥವಾ ಮಾತ್ರಾಗಣಾನ್ವಿತವಾಗಿ ಕಂಡುಹಿಡಿಯಲು ಪ್ರಯತ್ನಿಸುವುದು ಹೆಚ್ಚು ಫಲಕಾರಿ ಎಂದು ನನ್ನ ಅನಿಸಿಕೆ. ಆದರೂ ಅಂಶಗಣಾನ್ವಿತವಾಗಿ ಶರಣರ ಹಾಡುಗಳ ಛಂದಸ್ಸನ್ನು ಗುರುತಿಸುವ ಕಾರ್ಯ ನಡೆಯುವುದರಲ್ಲಿ ತಪ್ಪೇನಿಲ್ಲ. 'ಶಿವದಾಸ ಗೀತಾಂಜಲಿ'ಯ ಸಂಪಾದಕರಾದ ಡಾ. ಎಲ್. ಬಸವರಾಜು ಅವರು ಆ ಕೃತಿಯಲ್ಲಿ ಸಂಕಲನಗೊಂಡ ಶಿವಶರಣರ ಹಾಡುಗಳ ಕೆಲವು ನುಡಿಗಳಲ್ಲಿ ಉತ್ಸಾಹ (ನುಡಿ ೩೫), ಛಂದೋವತಂಸ (ನುಡಿ ೧೨), ಏಳೆ (ನುಡಿ ೯೧೮), ಕಿರಿಯಕ್ಕರ (ನುಡಿ ೭೫೧, ೯೭೦) ಇತ್ಯಾದಿ ಅಂಶ ಛಂದಸ್ಸನ್ನು ಗುರುತಿಸಲು ಪ್ರಯತ್ನಿಸಿದ್ದಾರೆ (ಶಿವದಾಸ ಗೀತಾಂಜಲಿ, ಪೀಠಿಕೆ, ಪುಟ ೧೨೨-೨೩). ವಿಷ್ಣುವಿಗೆ ಬದಲಾಗಿ ಬ್ರಹ್ಮ, ಬ್ರಹ್ಮಕ್ಕೆ ಬದಲಾಗಿ ವಿಷ್ಣು ಹಾಗೂ ವಿಷ್ಣುವಿಗೆ ಬದಲಾಗಿ ರುದ್ರ ತರುವ ಸೌಲಭ್ಯ ಶುದ್ಧ ಕನ್ನಡ ಛಂದೋಬಂಧಗಳಲ್ಲಿ ಇರುವುದರಿಂದ, ಆ ಕಾರಣವಾಗಿ ಲಕ್ಷಣವನ್ನು ಹೊಂದಿಸಿಕೊಳ್ಳುವುದು ಸಾಧ್ಯವಾಗುತ್ತದೆ.

ಕನ್ನಡ ಛಂದೋಬಂಧಗಳಲ್ಲಿ ಕೆಲವುಗಳ ಮಧ್ಯೆ ಕಿಂಚಿತ್ ಗಣ ವ್ಯತ್ಯಾಸವಿದ್ದು ಉಳಿದಂತೆ ಸಾಮ್ಯವೇ ಎರಡರಲ್ಲೂ ಅಧಿಕವಾಗಿರುತ್ತದೆ. ಉದಾಹರಣೆಗಾಗಿ, ಸಾಂಗತ್ಯ (ವೀರ ?), ಚೌಪದಿ(ಕಿರು ಸೀಸ?)ಗಳ ಲಕ್ಷಣವನ್ನು ಪರಿಶೀಲಿಸಬಹುದು. ಸಾಂಗತ್ಯದ ಲಕ್ಷಣ ಎರಡು ಬಗೆಯಾಗಿದೆ.

೧. ವಿ. ವಿ. ವಿ . ವಿ.
ವಿ. ವಿ. ಬ್ರ
ವಿ. ವಿ. ವಿ. ವಿ.
ವಿ. ವಿ. ಬ್ರ

೨. ವಿ. ವಿ. ವಿ. ವಿ.
ವಿ. ವಿ. ವಿ
ವಿ. ವಿ. ವಿ. ವಿ
ವಿ. ವಿ. ವಿ

ವೀರಚೌಪದಿ ಅಥವಾ ಚಿಕ್ಕಸೀಸದ ಲಕ್ಷಣ(ಶಿ. ದಾ. ಗೀತಾಂಜಲಿಯ ಪೀಠಿಕೆ ಪುಟ ೧೨೧ರಲ್ಲಿ ಕೊಟ್ಟಂತೆ) ಹೀಗಿದೆ :

ವಿ. ವಿ. ವಿ. ವಿ
ವಿ. ವಿ. ರು
ವಿ. ವಿ. ವಿ. ವಿ
ವಿ. ವಿ. ರು

ಈ ಲಕ್ಷಣಗಳನ್ನು ಪರಿಶೀಲಿಸಿದಾಗ, ಎರಡೂ ಛಂದೋಬಂಧಗಳ ಒಂದು ಹಾಗೂ ಮೂರನೆಯ ಪಾದಗಳ ಲಕ್ಷಣ ಒಂದೇ ಆಗಿರುವುದು ಕಂಡುಬರುತ್ತದೆ. ಇನ್ನು ಎರಡು ಹಾಗೂ ನಾಲ್ಕನೆಯ ಪಾದಗಳ ಕೊನೆಯ ಗಣ ಸಾಂಗತ್ಯದಲ್ಲಿ ಬ್ರಹ್ಮ ಇಲ್ಲವೆ ವಿಷ್ಣು ಆಗಿದ್ದು, ವೀರಚೌಪದಿಯಲ್ಲಿ ಅದು ರುದ್ರವಾಗಿದೆ. ಇಷ್ಟೇ ವ್ಯತ್ಯಾಸ. ಪ್ರಸ್ತಾರ ಹಾಕಿದಾಗ ಮಾತ್ರ ಈ ವ್ಯತ್ಯಾಸ ಕಣ್ಣಿಗೆ ಕಾಣುತ್ತದೆ. ಆದರೆ ಹಾಡುವಾಗ ಈ ವ್ಯತ್ಯಾಸ ಕಿವಿಗೆ ಪ್ರತೀತವಾಗದೆ ಹೋಗದಿರುವ ಸಾಧ್ಯತೆಯಿದೆ. ಜೊತೆಗೆ ಗಣಗಳ ಬದಲಾವಣೆಗೆ ಅಂಶಛಂದಸ್ಸಿನಲ್ಲಿ(ಅದರ ಗೇಯತೆಯ ಕಾರಣವಾಗಿ) ಆಸ್ಪದ ಇರುವುದರಿಂದ, ಎರಡರಲ್ಲಿಯ ವ್ಯತ್ಯಾಸ ಕಾಣದೆ ಹೋಗಿ ಇದು ಸಾಂಗತ್ಯ, ಇದು ಚೌಪದಿ ಎಂದು ಪ್ರಸ್ತಾರದ ಮೂಲಕ ಹೇಳುವುದು ಬಹಳ ಕಷ್ಟವಾಗುತ್ತದೆ. ಆದರೆ ಹಾಡುವಾಗ ಲಯವನ್ನು ಅಥವಾ ಮಟ್ಟುವನ್ನು ಆಧರಿಸಿ ಎರಡನ್ನು ವಿಂಗಡಿಸಿ ಹೇಳಬಹುದೆನಿಸುತ್ತದೆ.

ಶಿ. ದಾ. ಗೀತಾಂಜಲಿಯ ೧೭ನೆಯ ಹಾಡಿನ ಕೊನೆಯ ಪದ್ಯ (ನುಡಿ ೧೭) ಹೀಗಿದೆ:

ಲಿಂಗ ಭಾವವೆ ಭಾವ। ಲಿಂಗ ಪ್ರಾ।ಣವೆ ಪ್ರಾಣ।
ಲಿಂಗದಂ।ಗದೊಳಂಗ। ಬೇಱಿಲ್ಲದೆ।
ಲಿಂಗಸಂ।ಗವೆ ಸಂಗ। ಸ್ವಯವಾಗಿ।ಕೂಡಲ
ಸಂಗ ನಿ।ಮ್ಮೊಳು ಕೂಡಿ।ಸುಖಿಯಾದೆನು।

ಪ್ರಸ್ತಾರ ಹಾಕಿದಾಗ ಇದು ಚೌಪದಿಯ ಲಕ್ಷಣಕ್ಕೆ ಸಂಪೂರ್ಣ ಹೊಂದಿಕೊಳ್ಳುತ್ತದೆ. ಮೊದಲನೆಯ ಪಾದದ ಕೊನೆಯ ಗಣದ 'ಪ್ರಾ' ಅಕ್ಷರ ಶಿಥಿಲವೆಂದು ಗ್ರಹಿಸಬೇಕು. ಇಲ್ಲಿ ಗಮನಿಸಬೇಕಾದ ಬಹುಮುಖ್ಯ ಅಂಶವೆಂದರೆ, ಐದೈದು ಮಾತ್ರೆಯ ಗಣಗಳೂ ಇಲ್ಲಿರುವುದು, ಅಲ್ಲದೆ ಇದನ್ನು -

ಲಿಂಗ ಭಾವವೆ ಭಾವ।
ಲಿಂಗ ಪ್ರಾ।ಣವೆ ಪ್ರಾಣ।
ಲಿಂಗದಂ।ಗದೊಳಂಗ। ಬೇಲಿಲ್ಲ।ದೆ
ಲಿಂಗಸಂ।ಗವೆ ಸಂಗ।
ಸ್ವಯವಾಗಿ।ಕೂಡ।ಲ।
ಸಂಗ ನಿ।ಮ್ಮೊಳು ಕೂಡಿ।ಸುಖಿಯಾದೆ।ನು

ಹೀಗೆ ಒಡೆದು ಅದಕ್ಕೆ ಒಂದು ಕುಸುಮ ಷಟ್ಪದಿಯ ರೂಪ ಕೊಡಬಹುದು. ಐದನೆಯ ಪಾದದಲ್ಲಿ ಆದಿಪ್ರಾಸ ತಪ್ಪಿದೆ. ಐದನೆಯ ಪಾದದ ಕೊನೆಯ ಗಣ ನಾಲ್ಕು ಮಾತ್ರೆಯದಾಗಿದೆ. ಇಷ್ಟನ್ನು ಬಿಟ್ಟರೆ, ಉಳಿದುದೆಲ್ಲ ಕುಸುಮ ಷಟ್ಪದಿಯ ಲಕ್ಷಣಕ್ಕೆ ಹೊಂದಿಕೊಳ್ಳುತ್ತದೆ. ಅಂಶಗಣಗಳು ಮಾತ್ರಾಗಣಗಳಾಗಿ ಪರಿವರ್ತನೆಗೊಂಡುದಕ್ಕೆ ಇದೊಂದು ಒಳ್ಳೆಯ ಉದಾಹರಣೆ. ಶಿವದಾಸ ಗೀತಾಂಜಲಿಯ ೨೦ಳನೆಯ ಹಾಡು, ಅಂಶಗಣಾನ್ವಿತವಾಗಿ ಪ್ರಸ್ತಾರಿಸಿದಾಗ ವೀರಚೌಪದಿ ಸರಿಯಾಗಿ ಹೊಂದಿಕೊಳ್ಳುತ್ತದೆ. ಆದರೆ ಮಾತ್ರಾಗಣಾನ್ವಿತವಾಗಿ ಪ್ರಸ್ತಾರಿಸಿದರೆ ನಾಲ್ಕು ನಾಲ್ಕು ಮಾತ್ರೆಯ ಗಣಗಳು ಹೊರಡುತ್ತವೆ.

ನಿಜಗುಣ ಶಿವಯೋಗಿಯ ಸುಪ್ರಸಿದ್ಧ "ಜ್ಯೋತಿ ಬೆಳಗುತಿದೆ' ಹಾಡಿನ ಮೊದಲ ನುಡಿಗೆ ಪ್ರಸ್ತಾರ ಹಾಕಿದಾಗ ಅದರ ಸ್ವರೂಪ ಹೀಗಾಗುತ್ತದೆ:

ಶಿವಧರ್ಮ।ನಾಳಮ।ತೆಂಬಕಂ।ಬದ ಮೇಲೆ।
ಸುವಿವೇಕ।ಹೃದಯಾಬ್ಜ। ಪಣತೆಯೊಳು।
ಸವೆಯದ।ಸದ್ಭಕ್ತಿ।ರಸತೈಲ।ತುಂಬಿದ।
ಪ್ರವಿಮಳ।ಕಳೆಯೆಂಬ। ಬತ್ತಿ।ಇಡಿ।ದು।ದಿವ್ಯ।

ಇಲ್ಲಿ ನಾಲ್ಕನೆಯ ಚರಣದ ರುದ್ರಗಣದಲ್ಲಿ ಒಂದು ಅಂಶ ಅಧಿಕವಾಗಿದೆ. ಆದರೆ ಹಾಡುವಾಗ ಅದು ಕರಗಿ ಹೋಗುತ್ತದೆ. ಕೊನೆಗೆ ಬಂದಿರುವ 'ದಿವ್ಯ' ಪದ ಹಾಡಿನ ಆರಂಭದ 'ಪಲ್ಲವಿ'ಯನ್ನು ಎತ್ತಿಕೊಳ್ಳುವುದಕ್ಕೆ ಪುಟಗಿ ಕೊಡುತ್ತದೆ. ಆದರಿಂದ ಹಾಡಿನ ಲಯಕ್ಕೊಂದು ಬಗೆಯ ಪಲುಕು ದೊರೆತು ಕೇಳಲು ಹಿತಕರವಾಗುತ್ತದೆ. ಅದು ಹಾಡಿದಾಗ ಮಾತ್ರ ಪ್ರತೀತವಾಗುತ್ತದೆ. ಕೊನೆಯ ಚರಣದಲ್ಲಿಯ ಈ ಬಗೆಯ ಒಂದೆರಡು ಹೊಸ ಅಂಶಗಳನ್ನು ಬಿಟ್ಟರೆ ಉಳಿದೆಲ್ಲವು ವೀರಚೌಪದಿ ಅಥವಾ ಕಿರುಸೀಸಕ್ಕೆ ಇದು ಹೊಂದಿಕೊಳ್ಳುವುದನ್ನು ಕಾಣಬಹುದು.

ಶಿವದಾಸಗೀತಾಂಜಲಿಯ ೩೮ನೆಯ ಹಾಡಿನ ೫೫ನೆಯ ನುಡಿಯಲ್ಲಿ ಸಾಂಗತ್ಯದ ಲಯವನ್ನು, ಕೆಲಮಟ್ಟಿಗೆ ಆದರ ಶಾಸ್ತ್ರೋಕ್ತ ಲಕ್ಷಣವನ್ನು ಕಾಣುತ್ತೇವೆ.

ಪರುಷ ಮುಟ್ಟಲು ಲೋಹ।ಹೊನ್ನಾಗಿ।ಫಲವೇನು।
ಪರುಷತಾ।ನಾಗದ।ನ್ನಕ್ಕರ।
ಗುರುಕರು।ಣವ ಪಡೆ।ದುಗ್ರು।ರುವಿ।ನಂತಾಗ।ದಿರೆ।
ಮರಳಿಯು। ಪರಿಭವ।ತಪ್ಪದು। ನೋಡಾ।

ಸಾಂಗತ್ಯದ ಸಾಮಾನ್ಯ ಲಕ್ಷಣದ ಪ್ರಕಾರ ಎರಡನೆಯ ಚರಣದ ಕೊನೆಯ ಗಣ ಬ್ರಹ್ಮವಾಗಿರಬೇಕು. ಆದರೆ ಅದನ್ನು ವಿಷ್ಣುವಾಗಿಸಿದ ಸಾಂಗತ್ಯದ ಮತ್ತೊಂದು ಪ್ರಕಾರವನ್ನು ಕನ್ನಡ ಕವಿಗಳು ಬಳಸಿದ್ದಾರೆ.

ಇಲ್ಲಿ ಆ ರೀತಿಯಾಗದೆ, ಜೊತೆಗೆ, ಮೂರು ಹಾಗೂ ನಾಲ್ಕನೆಯ ಚರಣಗಳಲ್ಲಿ ಲಕ್ಷಣಕ್ಕೆ ಅಗತ್ಯವಾದ ಗಣಗಳು ಬಂದಾದ ಮೇಲೆ ಕೊನೆಗೆ ಹೆಚ್ಚಿನ ಅಂಶಗಳು ಬಂದಿರುವುದನ್ನು ಕಾಣಬಹುದು. ಈ ರೀತಿ ಸಾಂಗತ್ಯದ ಯಾವುದೇ ಪಾದದಲ್ಲಿ ಕೊನೆಗೆ ಕೆಲವು ಅಂಶಗಳು ಇಲ್ಲವೆ ಅಖಂಡ ಗಣವೂ ಹೆಚ್ಚಾಗಿ ಬರುವುದು ಯಕ್ಷಗಾನ ಹಾಡುಗಳಲ್ಲಿ ಕಂಡುಬರುವುದನ್ನು ಇಲ್ಲಿ ನೆನಪಿಸಿಕೊಳ್ಳಬೇಕು.

ಶಿ. ದಾ. ಗೀತಾಂಜಲಿಯ ಮೊದಲ ಹಾಡಿನ, ನಾಲ್ಕನೆಯ ನುಡಿಯನ್ನು -

ಕ್ಷೀರದೊಳು। ಘೃತವಡಗಿ।ನೀರುಮು।ತ್ತಿನೊಳಡಗಿ
ಆಳ್ವೆದು।ನೋಡ ಬೀ।ಜದೊಳು ವೃಕ್ಷ
ಸಾರಿರ್ದ।ಮೊಳೆದೋರ।ದಂತಿಪ್ಪ।ಮಹಘನವ।
ನಾರು ಭೇ।ದಿಸಿ ಕಾಣ।ಲರಿದು ನೋ।ಡಾ।

ಹೀಗೆ, ಪ್ರಸ್ತಾರಿಸಿದಾಗ, ಯಾವುದೇ ಅಂಶಲಯಛಂದಸ್ಸಿಗೆ ಇದು ಹೊಂದಿಕೊಳ್ಳದುದು ಸ್ಪಷ್ಟವಾಗುತ್ತದೆ. ಆದರೆ ಇದನ್ನು ಮಾತ್ರಾಗಣಾನ್ವಿತವಾಗಿ ಪ್ರಸ್ತಾರಿಸಿದಾಗ -

೫|೫|೫|೫|
೫|೫|೫|ಲಘು
೫|೫|೫|೫|
೫|೫|೫|ಗುರು

ಇದರಲ್ಲಿ ಐದು ಮಾತ್ರೆಗಳ ಗಣದ ಒಂದು ವ್ಯವಸ್ಥೆ ಇರುವುದು ಕಂಡು ಬರುತ್ತದೆ. ಇದರ ಒಂದನೆಯ ಹಾಗೂ ಮೂರನೆಯ ಪಾದಗಳನ್ನು ಎರಡೆರಡಾಗಿ ಒಡೆದಾಗ-

೫|೫|
೫|೫|
೫|೫|೫|ಲ
೫|೫|
೫|೫|
೫|೫|೫|ಗು

ಹೀಗೆ ಪ್ರಾಸರಹಿತ ಕುಸುಮ ಷಟ್ಪದಿಯಾಗುವುದನ್ನು ಗಮನಿಸಬಹುದು. ಇಂತಹ ಉದಾಹರಣೆಗಳು ಶರಣರ ಹಾಡುಗಳಲ್ಲಿ ಸಾಕಷ್ಟು ದೊರೆಯುತ್ತವೆ. ಈ ಅಂಶವನ್ನು ಗಣನೆಗೆ ತೆಗೆದುಕೊಂಡಾಗ ಶರಣರು ಅಂಶಛಂದಸ್ಸಿನಲ್ಲಿ ಹಾಡುಗಳನ್ನು ಬರೆದಿರಬಹುದಾದರೂ ಅವುಗಳಿಗಿಂತ, ಮಾತ್ರಾಲಯದಲ್ಲಿ ಮುಖ್ಯವಾಗಿ, ಉತ್ಸಾಹ, ಲಲಿತ, ಹಾಗೂ ಮಂದಾನಿಲ ಲಯಗಳಲ್ಲಿ ೩, ೪, ೫ ಮಾತ್ರೆಯ ಗಣಗಳನ್ನು ಬಳಸಿ ಬರೆದ ಮಾತ್ರಾಛಂದಸ್ಸಿನ ಹಾಡುಗಳ ಸಂಖ್ಯೆ ತುಂಬಾ ಅಧಿಕವೆನ್ನಬಹುದು.

ಉತ್ಸಾಹಲಯದಲ್ಲಿ ಕೆಲವರು ಶರಣರು ಹಾಡುಗಳನ್ನು ರಚಿಸಿದ್ದಾರೆ.

ಎಸೆವ| ಹಲವು| ಮುಖದ|ಭೇದ|ವಾದು|ಧಂಸೆ|ಬ್ರಹ್ಮ|ಹತ್ಯ
ಪಶು ವಿ|ಘಾತ|ಭ್ರೂಣ|ಹತ್ಯ|ಪಾಪ|ನಾಶನ .
ಒಸೆದು|ಚಿತ್ತ|ಶುದ್ಧಿ|ಯಿಂದ|ಜಪಿಸಿ|ದಾತ|ರುದ್ರ|ನೆಂದು|
ವಸುಧೆ|ಯೊಳು|ಸಾರು|ತಿಹುದು| ವೇದ|ವಾಕ್ಯ|ವು
(ಶಿ. ದಾ. ಗೀ. ಹಾಡು ೭, ಪದ್ಯ ೪೫)

ಉತ್ಸಾಹ ಛಂದಸ್ಸಿನ ಪ್ರತಿಸಾಲಿನಲ್ಲಿ ಏಳು ಬ್ರಹ್ಮ ಗಣಗಳು ಬಂದು ಕೊನೆಗೆ ಒಂದು ಗುರು ಬರಬೇಕು. ಆದರೆ ಇಲ್ಲಿ ಒಂದು ಮತ್ತು ಮೂರನೆಯ ಸಾಲಿನಲ್ಲಿ ಎಂಟು ಬ್ರಹ್ಮಗಣಗಳು ಬಂದಿವೆ. ಹಾಗೂ ಎರಡು, ಮೂರನೆಯ ಸಾಲುಗಳಲ್ಲಿ ಆರು ಬ್ರಹ್ಮಗಣ ಕೊನೆಗೊಂದು ಲಘುವಿದೆ. ಆದರೆ ಲಯವು ಮಾತ್ರ ಉತ್ಸಾಹ ಲಯವೇ. ಇಂತಹ ಇನ್ನೂ ಕೆಲವು

ಉದಾಹರಣೆಗಳಿವೆ(ಹಿರಿಯ ಮಂತ್ರಗೋಪ್ಯದ "ಮುಟ್ಟಿದಲ್ಲಿ ಮುಟ್ಟಿದಲ್ಲಿ" ಎಂದು ಆರಂಭವಾಗುವ ನುಡಿ).

ಮೇಲಿನ ಉದಾಹರಣೆಯಲ್ಲಿಯ ಇನ್ನೊಂದು ವಿಶೇಷತೆಯೆಂದರೆ, ಅದನ್ನು ಮುರಿದು -

ಎಸೆವ ಹಲವು ಮುಖದ ಭೇದ
ವಂದು ಧರಿಸೆ ಬ್ರಹ್ಮಹತ್ಯ
ಪಶುವಿಘಾತ ಭ್ರೂಣ ಹತ್ಯ ಪಾಪನಾಶನ
ಒಸೆದು ಚಿತ್ತಶುದ್ಧಿಯಿಂದ
ಜಪಿಸಿದಾತ ರುದ್ರನೆಂದು
ವಸುಧೆಯೊಳು ಸಾರುತಿಹುದು ವೇದವಾಕ್ಯ ।ವು

ಹೀಗೆ ಸುಲಭವಾಗಿ ಆದಿಪ್ರಾಸರಹಿತ ಭೋಗಷಟ್ಪದಿಗೆ ತಿರುಗಿಸಬಹುದು.

ಇದೇ ರೀತಿ ಗುರುಬಸವಾರ್ಯನ ೫೧ನೆಯ ಹಾಡಿನ ನಾಲ್ಕನೆಯ ನುಡಿಯೊಂದನ್ನು ಬಿಟ್ಟು ಬಹುತೇಕ ಉಳಿದೆಲ್ಲ ನಾಲ್ಕೂ ಚರಣದ ನುಡಿಗಳನ್ನು ಭಾಮಿನಿಗೆ ಸುಲಭವಾಗಿ ಪರಿವರ್ತಿಸಬಹುದು - ಹಾಡು ೫೨ರಲ್ಲಿಯೂ ಅಂತಹ ನುಡಿಗಳಿವೆ. ಹಾಡು ೭೮ರ ಕೊನೆಯ ನುಡಿಯನ್ನು ಬಿಟ್ಟು ಉಳಿದ ನಾಲ್ಕು ನಾಲ್ಕು ಸಾಲಿನ ನುಡಿಗಳನ್ನು ಕುಸುಮ ಷಟ್ಪದಿಗೆ ತಿರುಗಿಸಬಹುದು. ಇಂತಹ ಹಲವಾರು ಉದಾಹರಣೆಗಳು ಶರಣರ ಹಾಡುಗಳಲ್ಲಿವೆ.

ಇಲ್ಲಿ ಗಮನಿಸಬೇಕಾದ ಇನ್ನೊಂದು ಮುಖ್ಯ ಅಂಶವೆಂದರೆ, ಶರಣರ ಸ್ವರವಚನಗಳಲ್ಲಿ ಕೆಲವಾರು ಒಂದೇ ಬಗೆಯ ಛಂದಸ್ಸಿನ ನುಡಿಗಳನ್ನು ಒಳಗೊಳ್ಳದೆ ಇರುವುದು. ಪ್ರಾಯಶಃ ಹಾಡುವಾಗ ವೈವಿಧ್ಯವನ್ನು ತರುವ ಉದ್ದೇಶದಿಂದ ಹಾಗೆ ಮಾಡಿರಬೇಕು.

ಶಿವದಾಸ ಗೀತಾಂಜಲಿ(ಹಾಡು ೧೫, ೪೦, ೧೧೨, ೧೧೯, ೧೨೬) ಗಣವಚನ ರತ್ನಾವಳಿ(ಹಾಡು ೮೮, ೧೭೯, ೧೮೯)ಗಳಂತಹ ಸ್ವರವಚನ ಸಂಕಲನಗಳಲ್ಲಿ, ಹಾಗೆಯ ಕಡಕೋಳ ಮಡಿವಾಳಪ್ಪ(ಭಾಗ೧ ಹಾಡು ೧೨, ೧೮, ೬೪ , ಭಾಗ೨ ಹಾಡು ೨೫, ೪೧, ೫೧, ೬೩, ೬೬ ಭಾಗ೩ ಹಾಡು ೧೦, ೩೬, ೪೩, ೬೯ ಮತ್ತು ಭಾಗ೪ ಹಾಡು ೩, ೪, ೧೦, ೧೫, ೧೯) ಕೂಡಲೂರು ಬಸವಲಿಂಗಶರಣ(ಹಾಡು ೨೧, ೫೫, ೬೦, ೬೮, ೭೭, ೧೦೪, ೧೦೮) ಗುರುಬಸವಾರ್ಯ(ಹಾಡು ೧೭, ೩೪, ೮೦, ೧೧೩, ೧೭೨, ೧೭೫, ೧೯೭, ೨೦೯, ೨೨೭, ೨೪೭, ೨೫೭) ಮತ್ತು ಕಸ್ತೂರದೇವ(ಹಾಡು೮೨) ಮೊದಲಾದವರ ರಚನೆಗಳಲ್ಲಿ ಮೂರುಸಾಲಿನ ಹಾಡುಗಳು ದೊರೆಯುತ್ತವೆ. ಆದರೆ ನಾಗವರ್ಮಾದಿಗಳು ಹೇಳುವ ಅಂಶಛಂದಸ್ಸಿನ ತ್ರಿಪದಿಗೆ ಬಹುತೇಕ ಎಲ್ಲವೂ ಸರಿಹೊಂದುವುದಿಲ್ಲ. ಅಂಶಗಣಗಳಂತೂ ದೂರವೇ ಉಳಿಯಿತು. ಮಾತ್ರಾಗಣಗಳ ತ್ರಿಪದಿಗೂ ಅವು ಹೊಂದಿಕೆಯಾಗುವುದಿಲ್ಲ. ಅಕ್ಕಮಹಾದೇವಿ, ಕರಸ್ಥಲದ ನಾಗಿದೇವ ಮೊದಲಾದವರ

ತ್ರಿಪದಿಗಳು ಎಲ್ಲಂದದಿಂದಲ್ಲದಿದ್ದರೂ ಮಾತ್ರಾಗಣದ ತ್ರಿಪದಿಯ ಚೌಕಟ್ಟಿನಲ್ಲಿ ಅಳವಡುತ್ತವೆ. ಶಿವದಾಸ ಗೀತಾಂಜಲಿಯ ಹಾಡು ೧೧೨, ಗುರುಬಸವಾರ್ಯನ ಹಾಡು ೧೧೩ ಇಂತಹ ಅಲ್ಲೊಂದು ಇಲ್ಲೊಂದು ಉದಾಹರಣೆ ಬಿಟ್ಟರೆ, ಉಳಿದ ಅನೇಕ ತ್ರಿಪದಿಗಳಿಗೆ ಆದರದೇ ಆದ ಛಂದಸ್ಸಿದೆ.

ಮಾಟದ।ಕೂಟದ। ಭೇದವ।ನರಿಯೆನು।
ಕೂಟದ।ಮಾಟದ।ಸಂಚವನರಿಯೆನು
ನಾಟಿಸಿ।ದಾಚಾ।ರದ ಸುವಿ।ವೇಕವ।ಮುನ್ನವೆ।ನಾನರಿಯೆ

(ಶಿ. ದಾ. ಗೀ. ಹಾಡು ೧೫, ನುಡಿ ೧೧೦)

ಈ ಮೂರು ಸಾಲಿನ ಹಾಡಿನಲ್ಲಿ, ಅಂಶಗಣಘಟಿತ ತ್ರಿಪದಿಯಂತೆ ಮೊದಲ ಚರಣದಲ್ಲಿ ನಾಲ್ಕು ವಿಷ್ಣು ಗಣಗಳೇನೋ ಇವೆ. ಆದರೆ ಎರಡನೆಯ ಚರಣದಲ್ಲಿಯ ಎರಡನೆಯ ಗಣ, ಬ್ರಹ್ಮಗಣವಾಗಿಲ್ಲ. ತ್ರಿಪದಿಯ ಸ್ಥಾನದಲ್ಲಿ ಬ್ರಹ್ಮಗಣ ನಿತ್ಯ. ಅದು ಇಲ್ಲಿಲ್ಲ. ಮೂರನೆಯ ಚರಣವಂತೂ ಶಾಸ್ತ್ರಶುದ್ಧ ತ್ರಿಪದಿಯ ಮೂರನೆಯ ಚರಣಕ್ಕೆ ಹೊಂದಿಕೊಳ್ಳುವುದೇ ಇಲ್ಲ. ಆದ್ದರಿಂದ ಇದು ಅಂಶಗಣಘಟಿತ ತ್ರಿಪದಿಯಲ್ಲ. ಆದರೆ ಮಾತ್ರಾಗಣಾನ್ವಿತವಾಗಿಇದನ್ನುಪ್ರಸ್ತಾರಿಸಿದರೆ. -

೪।೪।೪।೪।
೪।೪।೪।೪।
೪।೪।೪।೪।೪।೪।೮

ಹೀಗೆ ನಾಲ್ಕು ಮಾತ್ರೆಯ ಗಣಗಳ ಒಂದು ವ್ಯವಸ್ಥೆ ಇಲ್ಲಿರುವುದನ್ನು ಗುರುತಿಸಬಹುದಾಗಿದೆ. ಇದು ಪರಿವರ್ಧಿನಿ ಷಟ್ಪದಿ ಅರ್ಧವಾಗಿರುವುದನ್ನೂ ಗಮನಿಸಬೇಕು. ಇದೇ ಕೃತಿಯ ೧೧೨ನೆಯ ಹಾಡಿನಲ್ಲಿರುವ ತ್ರಿಪದಿ ಮೂರು ಮಾತ್ರೆಯ ಲಯದಿಂದ ಕೂಡಿದ್ದು ಅರೆ ಭೋಗಷಟ್ಪದಿಯಾಗಿದೆ.

ಶರಣರ ಸ್ವರವಚನಗಳಲ್ಲಿ ಎರಡು ಸಾಲಿನ ನುಡಿಗಳಿಂದ ಕೂಡಿದ ಹಾಡುಗಳೂ ಇವೆ. ಶಿವದಾಸಗೀತಾಂಜಲಿ (ಹಾಡು ೧೩, ೬೨, ೮೬, ೯೦, ೧೧೪, ೧೧೭, ೧೩೨, ೧೪೩, ೧೪೮, ೧೫೩, ೧೬೧, ೧೭೩, ೧೭೯, ೧೯೧, ೨೧೬, ೨೨೬, ೨೩೧, ೨೩೪, ೨೩೮) ಮತ್ತು ಗಣ ವಚನರತ್ನಾವಳಿ(ಹಾಡು ೫, ೨೪, ೨೭, ೫೫, ೭೫, ೧೫೨, ೧೨೧, ೧೪೯, ೧೫೯, ೧೬೦, ೧೭೧, ೧೯೫, ೨೧೪)ಸಂಕಲನಗಳಲ್ಲಿ ಎರಡು ಚರಣಗಳ ಹಾಡುಗಳಿವು. ಕಸ್ತೂರದೇವನ ೪, ೯, ೧೦ ಅನುಕ್ರಮ ಸಂಖ್ಯೆಯ ಹಾಡುಗಳು ಎರಡು ಸಾಲಿನ ಹಾಡುಗಳಾಗಿವೆ. ಹಾಗಲವಾಡಿ ಮುದ್ವೀರಸ್ವಾಮಿಯ ೪೧, ೫೨, ೫೪, ಕಡಕೋಳ ಮಡಿವಾಳಪ್ಪ ಅವರ ಭಾಗ ಒಂದರಲ್ಲಿಯ ೧, ೨, ೩, ೪, ೫, ೪೭, ೪೮, ೪೯, ೫೦, ೬೫, ಭಾಗ ಎರಡರಲ್ಲಿಯ ೧, ೨, ೬, ೧೧, ೬೯, ೭೨, ೭೭, ೮೫,, ಭಾಗ ಮೂರರಲ್ಲಿಯ ೨, ೪, ೨೫, ೩೦, ೪೪, ೫೫, ೭೨, ೮೭, ೯೦, ೯೪, ೯೫, ೯೮, ೧೦೪, ೧೦೬, ೧೧೦, ೧೧೫, ಭಾಗ ನಾಲ್ಕರಲ್ಲಿಯ ೨, ೫, ೬, ೮, ೨೦, ಕೂಡಲೂರು ಶರಣರ ೪, ೧೫, ೪೪,

೫೧, ೬೪, ೧೧೪ , ಗುರುಬಸವಾರ್ಯನ ೧೧೮, ೧೫೦, ೧೫೫, ೧೫೭, ೧೫೯, ೧೬೦, ೧೬೧, ೧೬೫, ೧೭೧, ೧೭೭, ೧೭೮, ೧೮೦, ೧೮೧, ೨೨೮, ೨೩೪, ೨೫೨, ೨೫೪, ಸಾಲೋಟಗಿ ಶಿವಯೋಗಿಶ್ವರ ಸ್ವಾಮಿಗಳ ೧೬, ೪೦, ೪೭ ಈ ಅನುಕ್ರಮ ಸಂಖ್ಯೆಯ ಹಾಡುಗಳು ಎರಡೆರಡು ಸಾಲಿನ ನುಡಿಗಳನ್ನು ಒಳಗೊಂಡಿವೆ.

ಹಕ್ಕಿಗೆ|ರೆಕ್ಕೆಲ್ಲ|ಹಾರಿತು|ಗಗನಕ್ಕೆ|
ಹಕ್ಕಿಯ |ಹೆಸರ| ಹರಬಲ್ಲ| || ರನ್ನದ ಕೋಲು||

ಗುರುಬಸವಾರ್ಯನ, ೧೮೧ನೆಯ ಸ್ವರವಚನದ ಈ ಆರನೆಯ ನುಡಿಯನ್ನು ಅಂಶಗಣಾನ್ವಿತವಾಗಿ ಪ್ರಸ್ತಾರಿಸಿದಾಗ ಅದು ಶಾಸ್ತ್ರಶುದ್ಧ 'ಏಳೆ'ಯಾಗಿರುವುದು ಸ್ಪಷ್ಟವಾಗುತ್ತದೆ. ಇದೇ ಹಾಡಿನ ನಾಲ್ಕು ಐದನೆಯ ನುಡಿಗಳು ಕೂಡ ಅಂಶ ಛಂದಸ್ಸಿನ 'ಏಳೆ'ಗಳಾಗಿವೆ. ಆದರೆ ಶರಣರ ಎರಡು ಸಾಲುಗಳ ಅನೇಕ ಹಾಡುಗಳು ಅಂಶಗಣ ಘಟಿತವಾಗಿಲ್ಲ. ಮಾತ್ರಾಗಣ ಘಟಿತ ಎರಡು ಚರಣಗಳ ಹಾಡುಗಳೂ ಅವರಲ್ಲಿ ದೊರೆಯುತ್ತವೆ. ಶಿ. ದಾ. ಗೀತಾಂಜಲಿಯ ೧೬೧ನೆಯ ಹಾಡಿನ ೯೬೭ನೆಯ ನುಡಿ, ೨೩೦ನೆಯ ಹಾಡಿನ ೫ನೆಯ ನುಡಿ, ಗುರುಬಸವಾರ್ಯನ ೧೫೭ನೆಯ ಹಾಡಿನ ಎರಡು ಮತ್ತು ಮೂರನೆಯ ನುಡಿ, ೧೯ನೆಯ ಹಾಡಿನ ಮೂರು ಹಾಗೂ ನಾಲ್ಕನೆಯ ನುಡಿ ಇವೆಲ್ಲ ಮೂರು ಮೂರು ಮಾತ್ರೆಯ ಗಣಗಳಿಂದ ಕೂಡಿವೆ. ಶಿವದಾಸ ಗೀತಾಂಜಲಿಯ ೨೨೬ನೆಯ ಹಾಡಿನ, ಒಂದು ಮತ್ತು ಎರಡನೆಯ ನುಡಿಗಳು ಐದೈದು ಮಾತ್ರಾಗಣಗಳಿಂದ ಯುಕ್ತವಾಗಿವೆ. ಹುಡುಕುತ್ತ ಹೋದರೆ ಮಾತ್ರಾಗಣಯುಕ್ತ ಇಂಥ ನುಡಿಗಳು ಶರಣರ ಹಾಡುಗಳಲ್ಲಿ. ಇನ್ನೂ ಕೆಲವು ದೊರೆಯಬಹುದಾದರೂ ಯಾವುದೇ ಬಗೆಯ ಗಣನಿಯಮಕ್ಕೊಳಗಾಗದೆ, ಆದರೆ ಮಾತ್ರಾಲಯಕ್ಕೆ ಬದ್ಧವಾದ ದ್ವಿಪದಗಳ ಸಂಖ್ಯೆಯೆ ಶರಣರ ಹಾಡುಗಳಲ್ಲಿ ಅಧಿಕವಾಗಿರುವುದು ಗಮನೀಯ. ಶರಣರು ಸ್ವಚ್ಛಂದ ಛಂದ ಹರಿಕಾರರೆಂಬುದರತ್ತ ಇವು ಬೆರಳು ತೋರಿಸುತ್ತವೆ.

ಈಗಾಗಲೇ ತಿಳಿಸಿರುವಂತೆ, ಶರಣರ ಹಾಡುಗಳಲ್ಲಿ ೨, ೩, ೪, ೬ ಸಾಲುಗಳಿಂದ ಕೂಡಿದ ನುಡಿಗಳುಳ್ಳ ಹಾಡುಗಳಲ್ಲದೆ, ೫, ೭, ೮, ೯, ಮತ್ತು ಅದಕ್ಕೂ ಹೆಚ್ಚು ಚರಣಗಳ ನುಡಿಗಳಿಂದ ಕೂಡಿದ ಹಾಡುಗಳೂ ಇವೆ.

ಶಿವದಾಸ ಗೀತಾಂಜಲಿಯ ೨೧೪ನೆಯ ಹಾಡು, ಕೈವಲ್ಯ ಸೋಪಾನ ನಾಮ್ಮೆಕೋತ್ತರ ಶತಸ್ಥಲ ಕೃತಿಯ, ಪೂರ್ವಾಶ್ರಮ ನಿರಸನಸ್ಥಲ, ಪರಸ್ಥಲದ ಹಾಡುಗಳು ಒಂಬತ್ತು ಸಾಲಿನ ಹಾಡುಗಳಾಗಿವೆ. ನಿಜಗುಣಶಿವಯೋಗಿ (ಭಕ್ತಿಗೀತೆಗಳು ಹಾಡು ೧೦, ೧೯) ಗುರುಬಸವಾರ್ಯರ ಹಾಡು ೨೪, ೩೦, ೫೫, ೨೩೦ ಕಡಕೋಳ ಮಡಿವಾಳಪ್ಪನವರ ಭಾಗ ಒಂದರಲ್ಲಿಯ ಹಾಡು ೬೨, ಭಾಗ ಮೂರರಲ್ಲಿಯ ಹಾಡು ೮೭, ೧೦೯, ಭಾಗ ನಾಲ್ಕರಲ್ಲಿಯ ಹಾಡು ೧೭, ಕೂಡಲೂರು ಬಸವಲಿಂಗ ಶರಣರ ಹಾಡು ೯೪, ಕಸ್ತೂರ ದೇವನ ಹಾಡು ೮(ಅನುಬಂಧದಲ್ಲಿಯದು) ಗಣವಚನರತ್ನಾವಳಿಯಲ್ಲಿಯ ಹಾಡು ೧೦, ೭೨, ೧೨೯, ೧೬೬, ಇಮ್ಮಡಿ ಮುರಘಾ ಗುರುಸಿದ್ಧರ ಕೃತಿಯ ವಿಭೂತಿ ಸ್ಥಲ, ರುದ್ರಾಕ್ಷಿ

ಸ್ಥಲ, ಶಿವಯೋಗಿ ಸಮಾಧಿ ಸ್ಥಲ, ದೀಕ್ಷಾಪಾದೋದಕ ಸ್ಥಲ, ಜ್ಞಾನ ಪಾದೋದಕ ಸ್ಥಲದ ಹಾಡುಗಳು ಎಂಟು ಚರಣದ ನುಡಿಗಳಿಂಗ ಕೂಡಿವೆ. ಸಾಲೋಟಗಿ ಶಿವಯೋಗಿಶ್ವರರ ಡಂಗುರ ಪದಗಳು ಕೃತಿಯಲ್ಲಿ ಅರ್ಧಕ್ಕಿಂತ ಹೆಚ್ಚು ಹಾಡುಗಳು ಎಂಟು ಸಾಲಿನವಾಗಿವೆ.

ಕಡಕೋಳ ಮಡಿವಾಳಪ್ಪನವರ ಭಾಗ ೨ರಲ್ಲಿಯ ಹಾಡು ೬೧, ೬೮, ಭಾಗ೩ ಹಾಡು ೪೫, ೫೪, ೫೬, ೧೦೮, ಭಾಗ ೪ರ ಹಾಡು ೧೧, ಕೂಡಲೂರು ಬಸವಲಿಂಗ ಶರಣರ ಹಾಡು ೨, ೧೧, ೩೮, ೭೧, ೧೧೬, ೧೧೭, ಹಾಗಲವಾಡಿ ಮುದ್ವೀರ ಸ್ವಾಮಿಯ ಹಾಡು ೬೪, ೧೦೭, ಸಾಲೋಟಗಿ ಶಿವಯೋಗಿಶ್ವರರ ಹಾಡು ೪, ಇಮ್ಮಡಿ ಮುರುಘಾಗುರುಸಿದ್ಧರ ಕೈ.ಸೋ.ನಾ. ಶತಸ್ಥಲ ಕೃತಿಯ ಸೋಪಾಧಿಮಾಟಸ್ಥಲ ಮತ್ತು ಗುರುಕರುಣಸ್ಥಲದ ಹಾಡುಗಳು, ಗುರುಬಸವಾರ್ಯನ ಹಾಡು ೧೯, ೧೬, ೧೩೬, ೧೪೬, ೧೮೭, ೨೨೩, ೨೨೫, ೨೨೬, ೨೪೭ ಇವೆಲ್ಲ ಐದು ಸಾಲಿನವು. ಕಸ್ತೂರದೇವನ ಒಂಬತ್ತನೆಯ ಹಾಡು, ಹತ್ತು ಚರಣದ ನುಡಿಗಳನ್ನೊಳಗೊಂಡಿದ್ದು ಆದಿಪ್ರಾಸವಿಲ್ಲ. ಒಂದೇ ಹಾಡಿನಲ್ಲಿ ಬೇರೆ ಬೇರೆ ಸಂಖ್ಯೆಯ ಚರಣಗಳುಳ್ಳ ನುಡಿಗಳಿರುವುದನ್ನೂ ಶರಣರ ಸ್ವರವಚನಗಳಲ್ಲಿ ಕಾಣಬಹುದು.

ಕಡಕೋಳ ಮಡಿವಾಳಪ್ಪನವರ ಭಾಗ ಮೂರರ ೧೧೬ನೇ ಹಾಡಿನ (ಈಗ ಮುದ್ರಣಗೊಂಡಂತೆ) ನುಡಿ ಒಂದರಲ್ಲಿ ೭, ಎರಡರಲ್ಲಿ ೧೦, ಮೂರರಲ್ಲಿ ೧೩, ನಾಲ್ಕರಲ್ಲಿ ೧೬ ಸಾಲುಗಳಿವೆ. ಇಲ್ಲಿ ಆದಿಪ್ರಾಸವಿಲ್ಲ. ಆದ್ದರಿಂದ ಇದು ವಚನಗದ್ಯವಾಗಿರಬಹುದು. ಕೈವಲ್ಯ ಸೋಪಾನ ನಾಮ್ಮೆಕೋತ್ತರ ಶತಸ್ಥಲ ಕೃತಿಯಲ್ಲಿ ಜ್ಞಾನನಿಷ್ಪತ್ತಿ ಸ್ಥಲದ ಹಾಡಿನ ಒಂದನೆಯ ನುಡಿಯಲ್ಲಿ ಆರು, ಎರಡನೆಯದರಲ್ಲಿ ೪, ಮೂರನೆಯದರಲ್ಲಿ ೫ ಚರಣಗಳಿರುವುದನ್ನು ಕಾಣಬಹುದು. ಸಾಲೋಟಗಿ ಶಿವಯೋಗಿಶ್ವರರ ಡಂಗುರ ಪದಗಳು ಗ್ರಂಥದ ೬೩ನೆಯ ಹಾಡಿನ ಮೊದಲನೇ ನುಡಿಯಲ್ಲಿ ೬, ಎರಡನೆ ನುಡಿಯಲ್ಲಿ ೭ ಮೂರು ಹಾಗೂ ನಾಲ್ಕನೆಯ ನುಡಿಗಳಲ್ಲಿ ಎಂಟು ಸಾಲುಗಳಿವೆ. ಈ ಕೃತಿಯ ೬೬, ೩೬ ನೆಯ ಹಾಡುಗಳು ಕೂಡ ವಿವಿಧ ಸಂಖ್ಯೆಯ ಸಾಲಿನಿಂದ ಕೂಡಿದ ನುಡಿಗಳನ್ನು ಒಳಗೊಂಡಿವೆ. ಗಣವಚನರತ್ನಾವಳಿಯ ಹಾಡು ೧೯೯, ಗುರುಬಸವಾರ್ಯನ ಹಾಡು ೧೫, ೩, ೪, ಇತ್ಯಾದಿಗಳನ್ನು ನೋಡಬಹುದು. ವಿವಿಧ ಸಂಖ್ಯೆಯ ಚರಣಗಳನ್ನೊಳಗೊಂಡ ಈ ನುಡಿಗಳಲ್ಲಿ ಕೆಲವೇ ಕೆಲವು ಮಾತ್ರ ಗಣಗಳ ಗಣನೆಗೆ ಒಡಂಬಡುತ್ತವೆ. ಉಳಿದೆಲ್ಲವು ಛಂದದ ಬಂಧನಕ್ಕೆ ಸಿಲುಕದೆ ಸ್ವಚ್ಛಂದ ರೀತಿಯಲ್ಲಿದ್ದು, ಛಂದಸ್ಸನ್ನು ಹುಡುಕ ಹೊರಟವರಿಗೆ ಆಹ್ವಾನವೀಯುತ್ತಲಿವೆ. ಲಯವನ್ನು ಅನುಸರಿಸಿಕೊಂಡು ಹೋಗುವ ಧಾಟಿಗಳನ್ನು ಹಿಡಿದು, ತನ್ಮಯತೆಯಿಂದ ಹಾಡುತ್ತ ಹೋದ ಶರಣರ ಈ ಹಾಡುಗಳಲ್ಲಿ ಶಬ್ದ, ಅಕ್ಷರ, ಅಂಶ, ಮಾತ್ರೆಗಳ ಅಳತೆ ಪಟ್ಟಿ ಹಿಡಿದು ಛಂದಸ್ಸನ್ನು ಹುಡುಕ ಹೊರಡುವುದು ಒಂದು ದೊಡ್ಡ ಸಾಹಸ. ಆದರೆ ಅದು ಆಗಬೇಕಾದ ಕೆಲಸ.

ಸಾಮಾಜಿಕ, ಧಾರ್ಮಿಕ, ಸೈದ್ಧಾಂತಿಕ ವಿಷಯಗಳಲ್ಲಿ ಹೊಸ ಹೊಸ ಆಯಾಮಗಳನ್ನು ತೆರೆದು ಹೊಸ ಹೊಸ ವಿಚಾರಗಳನ್ನು ಮಂಡಿಸಿ ಅವುಗಳನ್ನು ಕಾರ್ಯರೂಪಕ್ಕೆ ತರುವ ಸನ್ನಾಹದ ಒಂದು ಸುಸಂಘಟಿತ ಆಂದೋಲನವನ್ನೆ ಆರಂಭಿಸಿ ಒಂದು ಮಹಾನ್ ಕ್ರಾಂತಿ ಮಾಡಿದಂತೆ, ಸಾಹಿತ್ಯ ಹಾಗೂ ಅದಕ್ಕೆ ಸಂಬಂಧಿಸಿದ ಛಂದಸ್ಸಿನ

ವಿಷಯದಲ್ಲೂ ಶರಣರು ಕ್ರಾಂತಿ ಎಸಗಿದ್ದಾರೆ, ಹೊಸ ಹಾದಿ ಹಿಡಿದಿದ್ದಾರೆ, ಪ್ರಯೋಗ ನಡೆಸಿದ್ದಾರೆ. ಮೇಲೆ ಹೇಳಿದಂತೆ ಅವರ ಸರ್ವಗ್ರಾಹಿ ಕ್ರಾಂತಿಯ ಮೂಲ ಉದ್ದೇಶ ಜನಸಾಮಾನ್ಯರಿಗೆ ತಿಳಿದು ಅವರೂ ಅದರಲ್ಲಿ ಭಾಗವಹಿಸುವಂತಾಗಬೇಕಾದರೆ, ಅವರ ಭಾಷೆಯಲ್ಲಿ ಹೇಳುವುದು, ಅವರ ಹಾಡಿನ ಧಾಟಿಯಲ್ಲಿ ಪದ ಕಟ್ಟುವುದು, ಅವರನ್ನು ಆಕರ್ಷಿಸುವ ಹೊಸ ಹೊಸ ಮಟ್ಟುಗಳನ್ನು ರೂಪಿಸುವುದು, ಸಂಶೋಧಿಸುವುದು ಅಂದಿನ ಅಗತ್ಯವಾಗಿತ್ತು. ಆ ಅಗತ್ಯದ ಪೂರೈಕೆಯ ನೆಲೆಯಲ್ಲಿ ಹೊಸ ಹೊಸ ಛಂದೋಬಂಧಗಳು ಅಂದು ನಿರ್ಮಾಣಗೊಂಡವು. ಹಳೆಯ ಛಂದೋಬಂಧಗಳು ಪರಿಷ್ಕರಣಗೊಂಡವು. ಶಿಷ್ಟರ ಅಸಡ್ಡೆಗೆ ಪಾತ್ರವಾಗಿದ್ದ ಎಷ್ಟೋ ಛಂದೋಬಂಧಗಳು ಪುನರುತ್ಥಾನಗೊಂಡು ಹೊಸ ಹುಟ್ಟು ಪಡೆದುವು. ಈ ಹಿನ್ನೆಲೆಯಲ್ಲಿ ನಾವು ಶರಣರ ಹಾಡುಗಳ ಛಂದಸ್ಸನ್ನು ಕುರಿತು ಮರು ಆಲೋಚನೆ ಮಾಡುವ ಅಗತ್ಯವಿದೆ. ಶಿಷ್ಟಸ್ತರದಿಂದ ಬಂದ ಅನುಭಾವಿಗಳು ತಮ್ಮ ಹಾಡುಗಳಿಗೆ ಬಳಸಿದ ಛಂದಸ್ಸಿನಲ್ಲಿ ವೈವಿಧ್ಯವಿದ್ದರೂ, ಭಾಷೆ ಶಿಷ್ಟ ಭಾಷೆಯಾಗಿದೆ. ಆದರೆ, ಕಡಕೋಳ ಮಡಿವಾಳಪ್ಪ, ಕೂಡಲೂರ ಬಸವಲಿಂಗ ಶರಣರಂತಹ ಜಾನಪದಸ್ತರದಿಂದ ಬಂದ ಶಿವಾನುಭವಿಗಳ ಹಾಡುಗಳ ಛಂದಸ್ಸು ಹಾಗೂ ಭಾಷೆ ತೀರ ಜನಪದೀಯವಾಗಿರುವದರಿಂದ ಅವರ ಹಾಡುಗಳಲ್ಲಿಯ ಛಂದಸ್ಸನ್ನು ತಿಳಿಯಲು ಹೊಸ ಮಾನದಂಡದ ಅವಶ್ಯಕತೆ ಇದೆ.

ಪ್ರಸ್ತುತ ಪ್ರಬಂಧವನ್ನು ಸಿದ್ಧಪಡಿಸಲು ಸಹಾಯ ಪಡೆದ ಗ್ರಂಥಗಳಲ್ಲಿ ಶಿವದಾಸ ಗೀತಾಂಜಲಿ (ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥ ಮಾಲೆ ಮೈಸೂರು, ಪ್ರಕಟನೆ ೧೯೬೦) 'ಕೈವಲ್ಯ ಪದ್ಧತಿ', 'ಭಕ್ತಿಗೀತೆಗಳು' ಮುಪ್ಪಿನ ಷಡಕ್ಷರಿಯ 'ಸುಬೋಧಸಾರ' ಘನಮಠಶಿವಯೋಗಿಯ 'ಭಕ್ತಿಸುಧಾಸಾರ', ಬಾಲಲೀಲಾ ಮಹಾಂತ ಶಿವಯೋಗಿಗಳ 'ಕೈವಲ್ಯ ದರ್ಪಣ' (ಧಾರವಾಡದ ಮುರುಘಾಮಠದ ಪ್ರಕಟನೆಗಳು) 'ಕೈವಲ್ಯ ಸೋಪಾನ ನಾಮ್ನೆಕೋತ್ತರ ಶತಸ್ಥಲ' (ಶ್ರೀ. ಜ. ಮುರುಘರಾಜೇಂದ್ರ ಮಠ ಆನಂದಪುರ, ಶಿವಮೊಗ್ಗ ಅವರ ವೀರಶೈವ ಅಧ್ಯಯನ ಸಂಸ್ಥೆಯ ಪ್ರಕಟನೆ)- ಇವನ್ನು ಬಿಟ್ಟು ಉಳಿದೆಲ್ಲ ಎಂಟು ಸ್ವರವಚನ ಗ್ರಂಥಗಳು ವೀರಶೈವ ಅಧ್ಯಯನ ಸಂಸ್ಥೆ, ಶ್ರೀ. ಜ. ತೋಂಟದಾರ್ಯ ಸಂಸ್ಥಾನಮಠ ಗದಗ ಅವರ ಪ್ರಕಟನೆಗಳಾಗಿವೆ.



# ಬಸವಯುಗದ ಸ್ವರವಚನಸಾಹಿತ್ಯ

*ಎಂ.ಬಿ. ನೇಗಿನಹಾಳ*

ಕನ್ನಡದಲ್ಲಿ ಹಾಡು, ಪದ, ದೇವರನಾಮ ಮುಂತಾಗಿ ಪರ್ಯಾಯ ನಾಮಗಳಿಂದ ಹೆಸರಿಸಲ್ಪಡುವ ಲಘುಕೃತಿಗಳು ಬಹು ಹಿಂದಿನಿಂದ ರಚನೆಗೊಳ್ಳುತ್ತ ಬಂದಿವೆ. ಇವು ಅನೇಕ ವೇಳೆ ರಾಗ-ತಾಳಯುಕ್ತವಾಗಿ ರಚನೆಗೊಂಡಿವೆ. ತರುವಾಯದ ದಾಸರಪದ ಅಥವಾ ದೇವರ ನಾಮಗಳಿಗಂತೂ ತುಂಬ ಪ್ರಸಿದ್ಧಿ ಮತ್ತು ಜನಪ್ರಿಯತೆ ಪ್ರಾಪ್ತವಾಯಿತು. ಇಂಥ ಹಾಡಿನ ಬಗೆಯ ಸಾಹಿತ್ಯ ನಮ್ಮಲ್ಲಿ ಪರಂಪರೆಯಾಗಿ ನಡೆದುಬಂದಿತ್ತೆಂಬ ಅಂಶವನ್ನು ಡಾ. ಎಲ್. ಬಸವರಾಜು ಅವರು 'ಶಿವದಾಸ ಗೀತಾಂಜಲಿ'ಯ ಪ್ರಸ್ತಾವನೆಯಲ್ಲಿ ಚರ್ಚಿಸಿದ್ದಾರೆ. ಅವರ ಪ್ರಕಾರ ಕವಿರಾಜಮಾರ್ಗಕಾರ ಹೇಳುವ ಚತ್ತಾಣ, ಬೆದಂಡೆ ಮುಂತಾದ (ಜನಸಾಧಾರಣ), ಕಾವ್ಯ ಪ್ರಕಾರಗಳಲ್ಲಿ 'ಜಾತಿ' ಮುಂತಾದ ಹಾಡುಗಳಿದ್ದವು. ಪದ, ಪಾಡು, ಮೆಲ್ಪಾಡು, ಪಾಡುಗಬ್ಬ, ಮೊದಲಾದ ರಚನೆಗಳು ೯ನೆಯ ಶತಮಾನದಷ್ಟು ಹಿಂದಿನವು. ಇಮ್ಮಡಿ ನಾಗವರ್ಮ, ನೇಮಿಚಂದ್ರ ಮೊದಲಾದ ದೊಡ್ಡ ಕವಿಗಳ ಮಾತುಗಳಿಂದಲೂ ಈ ವಿಷಯಕ್ಕೆ ಪುಷ್ಟಿ ದೊರೆಯುತ್ತದೆ.

ಆದ್ದರಿಂದ ಬಸವಾದಿ ಶರಣರು ವಚನಗಳನ್ನು ರಚಿಸುವುದರ ಜೊತೆಗೆ ರಾಗ-ತಾಳ ಯುಕ್ತವಾದ ಹಾಡಿನ ಸಾಹಿತ್ಯವೇನ್ನೂ ರಚಿಸಿದರು ಎಂದು ಹೇಳುವಲ್ಲಿ ಅವಾಸ್ತವತೆ ಏನೂ ಇಲ್ಲ. ಈ ಬಗೆಯ ರಚನೆಗಳು ವಚನ ಸಾಹಿತ್ಯ ದೊರಕುವ ಹಸ್ತಪ್ರತಿ ಕಟ್ಟುಗಳಲ್ಲಿ ಅಲ್ಲಲ್ಲಿ ದೊರೆಯುತ್ತಿದ್ದವು. ಆದರೆ ವಚನ ಸಾಹಿತ್ಯದ ಬಗ್ಗೆ ಆರಂಭ ಕಾಲದಲ್ಲಿ ಮೂಡಿನಂತ ಕೌತುಕ-ಕುತೂಹಲಗಳು ಈ ಸ್ವರವಚನ ಸಾಹಿತ್ಯ ಕುರಿತಾಗಿ (ಆಧುನಿಕರಲ್ಲಿ) ಮೂಡಿಬರಲಿಲ್ಲ. ಆದ್ದರಿಂದ ಈ ಸಾಹಿತ್ಯದ ಹೆಚ್ಚಿನ ಪರಾಮರ್ಶೆ ನಡೆಯಲಿಲ್ಲ. ಆಧುನಿಕ ಕಾಲದಂತೆ ಪ್ರಾಚೀನ ಕಾಲದಲ್ಲಿ ಕೂಡ ಇವುಗಳ ಮಹತಿಯನ್ನು ಎತ್ತಿ ತೋರಬಲ್ಲ ಸಂಕಲನಗಳು ವಿಶೇಷವಾಗಿ ಶೂನ್ಯಸಂಪಾದನೆಗಳಂಥ ಪ್ರಭಾವಶಾಲೀ ಸಂಕಲನಗಳು ಸ್ವರವಚನಗಳಿಗೆ ಹೆಚ್ಚಿನ ಇಂಬು ಕೊಡಲಿಲ್ಲ. ವಚನ ಸಂಕಲನಕಾರರ ಸಂಖ್ಯೆಗೆ ಹೋಲಿಸಿದರೆ ಸ್ವರವಚನ ಸಂಕಲನಕಾರರು ಕಡಿಮೆ ಪ್ರಮಾಣದಲ್ಲಿರುವುದು ಎದ್ದು ಕಾಣುವ ಅಂಶ. ಮಹಲಿಂಗದೇವ, ಜಕ್ಕಣಾರ್ಯ ಸಿದ್ಧಲಿಂಗರಂಥ ಮೂವರು ನಾಲ್ಕರು ಇತ್ತ ಗಮನ ಹರಿಸಿದರು.

ಈಗಾಗಲೇ ಹೇಳಿರುವಂತೆ ಆಧುನಿಕ ಕಾಲದಲ್ಲಿ ವೀರಶೈವ ಸ್ವರವಚನ ಸಾಹಿತ್ಯ ಕುರಿತಂತೆ, ಸಂಶೋಧನೆ, ವಿಚಾರ-ವಿಮರ್ಶೆ, ಪರಾಮರ್ಶೆ ನಡೆಸಿರುವುದು ತುಂಬ ಕಡಿಮೆ. ಡಾ.ಹಳಕಟ್ಟಿಯವರು, ಡಾ. ಎಲ್. ಬಸವರಾಜು ಮಾತ್ರ ೧೯೬೭ರಲ್ಲಿಯೇ 'ಶಿವದಾಸ ಗೀತಾಂಜಲಿ' ಸಂಪುಟವನ್ನು ಹೊರತಂದು ವೀರಶೈವ ಸಾಹಿತ್ಯದ ಈ ಹೊಸಕ್ಷಿತಿಜವನ್ನು ಅನಾವರಣಗೊಳಿಸಿದರು.

ಡಾ. ಚಿದಾನಂದಮೂರ್ತಿ, ಡಾ. ವಿ. ಶಿವಾನಂದ ಮುಂತಾದ ಕೆಲವು ಜನ ವಿದ್ವಾಂಸರು 'ಬಸವಾದಿ ಶರಣರ ಹೆಸರಿನಲ್ಲಿ ಲಭ್ಯವಿರುವ ಸ್ವರವಚನಗಳು ನಿಜವಾಗಿ ಅವರಿಂದ ರಚಿತವಾದುವಲ್ಲ; ೧೫ನೆಯ ಶತಮಾನದಲ್ಲಿದ್ದ ಮಹಲಿಂಗದೇವ ಮೊದಲಾದ ಈಚಿನ ಸಂಕಲನಕಾರರು ಪ್ರಾಚೀನ ಶರಣರ ವಚನಗಳನ್ನಾಧರಿಸಿ ಬರೆದು ಅವನ್ನು ತಮಗೆ ಇಷ್ಟಬಂದ ಕಡೆಗೆ ಪ್ರಕ್ಷಿಪ್ತಗೊಳಿಸಿದರು' ಎಂಬರ್ಥದ ಹೇಳಿಕೆಗಳನ್ನಿತ್ತಿದ್ದಾರೆ. ಈ ಅಂಶ ವಿಚಾರಣೀಯವಾದುದಾದರೂ ಇನ್ನೂ ವಿಸ್ತೃತ ಚರ್ಚೆ ನಡೆಸಲು ಈ ದಿಶೆಯಲ್ಲಿ ಅವಕಾಶವುಂಟೆಂದು ಹೇಳಬೇಕು.

ಡಾ. ಎಲ್. ಬಸವರಾಜು ಅವರು ಶಿವದಾಸ ಗೀತಾಂಜಲಿಯ ದ್ವಿತೀಯ ಆವೃತ್ತಿಯನ್ನು ೧೯೯೦ ರಲ್ಲಿ ಹೊರತಂದಿರುವರಾದರೂ ಅದರಲ್ಲಿ ತಮ್ಮ ಮೊದಲಿನ ನಿಲವನ್ನೇ ಮುಂದುವರಿಸಿದ್ದಾರೆ. ಅವರು ಹೇಳಿರುವ ಹಲವು ವಿಚಾರಗಳು ಮೌಲಿಕವಾಗಿವೆ. ಜಕ್ಕಣಾರ್ಯನ ಸ್ವರವಿಕೋತ್ತರ ಶತಸ್ಥಲ ಗ್ರಂಥಕ್ಕೆ ರಚಿತವಾಗಿರುವ ವ್ಯಾಖ್ಯಾನಗಳಲ್ಲಿ ಅನಾಮಧೇಯ ವ್ಯಾಖ್ಯಾನಕಾರರು ವ್ಯಕ್ತಮಾಡಿರುವ ಅಭಿಪ್ರಾಯಗಳು ಈ ದಿಶೆಯಲ್ಲಿ ಕೆಲವು ಮುಖ್ಯ ನೋಟಗಳನ್ನು ನೀಡುತ್ತವೆ. ಬೇರೆ ಬೇರೆ ಶರಣರ ಪ್ರಸಿದ್ಧ ಅಂಕಿತಗಳಿಂದ ದೊರೆಯುವ ಸ್ವರವಚನಗಳು ಆಯಾ ವಚನಕಾರರೇ ನಿಜವಾಗಿ ರಚಿಸಿದವುಗಳೆಂಬ ವಿಚಾರ ಅವುಗಳಿಂದ ಸ್ಫುಟವಾಗುತ್ತದೆ.

"ಅನು= ಶರಣೆಯಾದಂಥ ನೀಲಲೋಚನೆ ನಾನು", "ಶರಣ= ಜಗದಾಧಾರನಾದಂಥ ಚೆನ್ನಬಸವೇಶ್ವರನೆಂಬ ಷಟ್ಸ್ಥಲಾಚಾರ್ಯರು" ಎಂದು ಮುಂತಾಗಿ ವ್ಯಾಖ್ಯಾನಕಾರರು ಹೇಳುವ ಮಾತುಗಳಿಂದ ಇವು ಮಹಲಿಂಗದೇವ ಅಥವಾ ಅವನ ಶಿಷ್ಯ ಜಕ್ಕಣಾರ್ಯರಂಥವರು ರಚಿಸಿದುವುಗಳಲ್ಲ ಎಂಬಂಶ ಸ್ಪಷ್ಟವಾಗುತ್ತದೆ. ಇವರಲ್ಲದೆ ಸಿಂಗಿರಾಜನ ಸಿಂಗಿರಾಜ ಪುರಾಣ ಶೂನ್ಯಸಂಪಾದನೆಗಳು, ಪರಮಮೂಲಜ್ಞಾನ ಷಟ್ಸ್ಥಲ, ಇತ್ಯಾದಿ ಕಾವ್ಯ ಮತ್ತು ಸಂಕಲನಗಳಲ್ಲೂ 'ಸ್ವರವಚನಗಳು' ಸಂಕಲಿತವಾಗಿವೆ. ಹಾಗೂ ಅವುಗಳಿಗೆ ಬಸವಾದಿ ಪ್ರಮಥರ ಅಂಕಿತಗಳಿವೆ. ಈ ಎಲ್ಲ ಆಧಾರಗಳಿಂದ ಈ ಸ್ವರವಚನಗಳನ್ನು ಬಸವಾದಿ ಪ್ರಮಥರು ರಚಿಸಿರುವರೆಂಬ ಪ್ರಮೇಯಕ್ಕೆ ಹೆಚ್ಚು ಬಲಬರುತ್ತದೆ.

ಹೀಗೆ ಬಸವಾದಿ ಪ್ರಮಥರಲ್ಲಿ ಸುಮಾರು ೧೪ರಿಂದ ೨೦ ರಷ್ಟು ವಚನಕಾರರು ಸ್ವರವಚನಗನ್ನು ರಚಿಸಿರುವುದಾಗಿ ತಿಳಿದು ಬಂದಿರುವುದಲ್ಲದೆ, ಇವರ ಕಾಲದ ಸ್ವರವಚನಗಳ

ಸಂಖ್ಯೆ ಸುಮಾರು ೩೫೦ ಎಂದು ಡಾ. ವೀರಣ್ಣ ರಾಜೂರ ಅವರು ಮಾಡಿರುವ ಒಂದು ಅಂದಾಜು. ಈಗ ಇವೆಲ್ಲ ಸ್ವರವಚನಗಳು ಒಂದೆಡೆ ಲಭ್ಯವಾಗಿಲ್ಲ. ಡಾ. ಎಲ್. ಬಸವರಾಜು ಅವರು, ಈ ಪೈಕಿ ಅಲ್ಲಮಪ್ರಭುವಿನವು ೨೮, ಬಹುರೂಪಿ ಚೌಡಯ್ಯನವು-೪. ನಿಜಗುಣರವು-೭, ಅಕ್ಕಮಹಾದೇವಿಯವು-೧೭, ಸಿದ್ಧರಾಮಯ್ಯನವು-೨, ನೀಲಲೋಚನೆಯವು-೭, ಬಸವಣ್ಣನ ವರವು-೨೧, ಚನ್ನಬಸವಣ್ಣನವರವು-೬೦, ಸೊಡ್ಡಳ ಬಾಚರಸರವು-೩, ಅಮುಗಿದೇವಯ್ಯ, ಅಗ್ಗಣಿಹೊನ್ನಯ್ಯ, ಪುಷ್ಪದ ಸೋಮಯ್ಯ ಇವರವು ಎರಡೆರಡು, ಚಿಕ್ಕಯ್ಯ, ಹಾವಿನಹಾಳ ಕಲ್ಲಯ್ಯ, ಅಗ್ಗಣಿಯ ಹಂಪಯ್ಯ, ಸಕಲೇಶ ಮಾದರಸ, ಮತ್ತು ಆದಯ್ಯ ಇವರವು ಒಂದೊಂದು ಸ್ವರವಚನಗಳನ್ನು ಸಂಕಲಿಸಿದ್ದಾರೆ. ಡಾ. ರಾಜೂರ ತಾವು ಸಂಪಾದಿಸಿದ 'ಶಿವಯೋಗ ಪ್ರದೀಪಿಕೆ ಪ್ರಸ್ತಾವನೆ'ಯಲ್ಲಿ ೬೦ ಹೊಸ ಸ್ವರವಚನಗಳನ್ನು ಸಂಕಲಿಸಿರುವುದು ಕಂಡುಬರುತ್ತದೆ. ಇದಲ್ಲದೆ ಡಾ. ಎಂ.ಎಂ. ಕಲಬುರ್ಗಿಯವರು 'ಆದಯ್ಯನ ಲಘುಕೃತಿ'ಗಳಲ್ಲಿ 'ಆದಯ್ಯಗಳ ಕಂದ' 'ಉಯ್ಯಾಲ ಪದ' 'ಮುಕ್ತಿಕ್ಷೇತ್ರ' ಎಂಬ ಪದ್ಯ ಕೃತಿಗಳಲ್ಲದೆ ಆತನ ೨೦ ಸ್ವರವಚನಗಳನ್ನು ಸಂಗ್ರಹಿಸಿದ್ದಾರೆ. ಈ ಸ್ವರವಚನಗಳ ಪಟ್ಟಿ ಈಗಾಗಲೇ ಹೇಳಿರುವಂತೆ ೩೫೦ನ್ನು ಮಿಕ್ಕುವುದಂತೂ ನಿಶ್ಚಿತ. ಅವೆಲ್ಲವೂ ಪ್ರಕಟವಾದಾಗ ಈ ಸ್ವರವಚನಗಳ ಒಂದು ಸಮಗ್ರ ಚಿತ್ರಣ ದೊರಕಬಹುದಾಗಿದೆ.

ಈ ಎಲ್ಲ ಅಂಶಗಳನ್ನು ಗಮನಿಸಿದಾಗ ಕೆಲವು ಹೊಸ ಅಂಶಗಳು ನಮ್ಮ ಗಮನಕ್ಕೆ ಬರುತ್ತವೆ. ೧೨ನೆಯ ಶತಮಾನದ ಆಸುಪಾಸಿನ ಶರಣರಿಂದ ರಚಿತಗೊಂಡ ಸಾಹಿತ್ಯದಲ್ಲಿ ಒಂದು ಸ್ಥೂಲ ವರ್ಗೀಕರಣ ಮಾಡಬಹುದಾಗಿದೆ. ಅದು ಈ ರೀತಿಯಾಗಬಹುದು.

೧. ಕಂದ-ವೃತ್ತಗಳ ಪದ್ಯಸಾಹಿತ್ಯ. ಈ ರೀತಿ ಸಾಹಿತ್ಯ ರಚನೆಗೆ 'ಕೊಂಡಗುಳಿ ಕೇಶಿರಾಜ' ಉದಾಹರಣೆಯೆನಿಸಿದ್ದಾನೆ. ಆತ ರಚಿಸಿರುವ 'ಮಂತ್ರಮಹತ್ವದ ಕಂದ' ಎರಡು 'ಲಿಂಗಮಹತ್ವದ ಕಂದ'ಗಳು, 'ಅಳಲಾಷ್ಟಕ' 'ನವರತ್ನಮಾಲಿಕೆ' ಮೊದಲಾದವು ಈ ವರ್ಗದ ಉದಾಹರಣೆಗಳು.

೨. ಪ್ರಭುದೇವರ ಮಂತ್ರಗೋಪ್ಯ, ಚನ್ನಬಸವಣ್ಣನವರ ಮಂತ್ರಗೋಪ್ಯ ಮುಂತಾದವು ಇನ್ನೊಂದು ವರ್ಗದ ಪದ್ಯಪ್ರಕಾರಗಳು.

೩. ಮೂರನೆಯ ವರ್ಗದಲ್ಲಿ ಮಹಾದೇವಿಯಕ್ಕನ 'ಯೋಗಾಂಗ ತ್ರಿವಿಧಿ', ಸಿದ್ಧರಾಮನ ಬಸವಸ್ತೋತ್ರ ತ್ರಿವಿಧಿ, ಮಿಶ್ರಸ್ತೋತ್ರ ತ್ರಿವಿಧಿ, ಅಷ್ಟಾವರಣ ಸ್ತೋತ್ರ ತ್ರಿವಿಧಿ ಇವು ತ್ರಿಪದಿ ರೂಪದಲ್ಲಿದ್ದು, ಈ ಪದ್ಯ ಸಾಹಿತ್ಯ ಪ್ರಕಾರದಲ್ಲಿ ಗಮನಾರ್ಹವಾದ ಸ್ಥಾನ ಪಡೆದುಕೊಂಡಿವೆ. ಈ ತ್ರಿವಿಧಿಗಳನ್ನು ಡಾ. ಎಲ್. ಬಸವರಾಜು ಅವರು 'ತ್ರಿಪದಿಯ ಶತಕ ಸಾಹಿತ್ಯ'ವೆಂದು ಗುರುತಿಸುತ್ತಾರೆ.

೪ ಇನ್ನು ನಾಲ್ಕನೆಯದಾಗಿ ಆದಯ್ಯ ರಚಿಸಿರುವ 'ಉಯ್ಯಾಲಪದ', 'ಮುಕ್ತಿ ಕ್ಷೇತ್ರ'ಗಳೆಂಬ ರಚನೆಗಳು ವಿಶೇಷ ರೀತಿಯ ಇನ್ನೊಂದು ಪದ್ಯಪ್ರಕಾರವಾಗಿರುವಂತೆ ತೋರುತ್ತದೆ.

೫. ಐದನೆಯ ಪ್ರಕಾರದಲ್ಲಿ 'ಸ್ವರವಚನ ಸಾಹಿತ್ಯ' ಎಂಬ ಪ್ರತ್ಯೇಕ ಪ್ರಕಾರವನ್ನು ಸ್ಪಷ್ಟವಾಗಿ ವಿಂಗಡಿಸಬಹುದಾಗಿದೆ. ಈ ಪ್ರಕಾರ ತ್ರಿಪದಿ, ವೃತ್ತ-ಕಂದ, ಷಟ್ಪದಿಗಳಂತೆ ತಕ್ಕಷ್ಟು ಜನಪ್ರಿಯವಾಗಿಯೇ ಕಾಲಾಂತರದಲ್ಲಿ ಸ್ವರವಚನ ಮುಂದುವರೆದುಬಂದಿದೆ. ಈ 'ಸ್ವರವಚನ'ಗಳನ್ನು ಇತರ ಪ್ರಕಾರಗಳಿಂದ ಪ್ರತ್ಯೇಕಿಸಲು ಹಲವಾರು ಅಂಶಗಳು ಸಹಾಯಕವಾಗಿವೆ. ಇವುಗಳಿಗೆ ಬಹಳಷ್ಟು ಹಸ್ತಪ್ರತಿಗಳಲ್ಲಿ ರಾಗ ತಾಳಗಳನ್ನು ಸೂಚಿಸಿರುವುದು ಬಹುಮುಖ್ಯವಾದ ಒಂದು ಅಂಶ. ರಾಗಸೂಚನೆಯಿಲ್ಲದ ಅಥವಾ ರಾಗಸೂಚನೆ ಮಾತ್ರವಿದ್ದು, ತಾಳ ಸೂಚನೆಯಿಲ್ಲದ ಹಲವು ಉದಾಹರಣೆಗಳು ಹಸ್ತಪ್ರತಿಗಳಲ್ಲಿವೆ. ಆದರೆ ಬಹುತೇಕ ಸಂದರ್ಭಗಳಲ್ಲಿ ರಾಗಗಳನ್ನು ಗುರುತು ಹಾಕಿರುವ ಅಸಾಧಾರಣ ಸಂಗತಿ ಕಂಡು ಬರುತ್ತದೆ.

ಮುಂದಿನ ಉದಾಹರಣೆಗಳನ್ನು ಗಮನಿಸಬಹುದು:

| | ಸಂಕಲನ | ಪದ್ಯ ಸಂಖ್ಯೆ | ರಾಗ- | ತಾಳ |
|---|---|---|---|---|
| ೧. | ಶಿವದಾಸ ಗೀತಾಂಜಲಿ | ೧. ಓಂ ಪ್ರಥಮ | ಮಧುಮಾಧವಿ- | ರೂಪಕ |
| ೨. | " | ೨. ಓಂ ಪ್ರಥಮ ಜ್ಞಾನ | ಶಾಂತಮಲಹರಿ | ಝಂಪೆ |
| ೩. | " | ೪. ಗುರುಕರುಣ | ಮಲಹರಿ | ಅಟತಾಳ |
| ೪. | " | ೫. ಲಿಂಗಧಾರಣ | ದೇಶಿ | ಅಟತಾಳ |

ಪಲ್ಲವಿಯ ಪ್ರಯೋಗ ಸ್ವರವಚನಗಳಲ್ಲಿ ಸಾಮಾನ್ಯವಾಗಿದೆ. ಹೆಚ್ಚಿನ ಕಡೆ ಎರಡು ಸಾಲುಗಳಲ್ಲಿ ಕಂಡುಬಂದರೆ ಕೆಲವೆಡೆ ಮೂರು, ನಾಲ್ಕು ಪಾದಗಳನ್ನೊಳಗೊಂಡಿರುವುದೂ ಉಂಟು. ಅನುಪಲ್ಲವಿ ಕೂಡ ಅಲ್ಲಲ್ಲಿ ಗೋಚರಿಸುತ್ತದೆ. ವೀರಶೈವ ಕವಿಗಳಿಂದ ರಚಿತವಾದ ಕಾವ್ಯಗಳಲ್ಲಿ ಸಂಧಿ ಅಥವಾ ಸ್ಥಲಗಳ ಆದಿಯಲ್ಲಿ ಅನೇಕ ವೇಳೆ ಒಂದೆರಡು ಸೂಚನಾ ಪದ್ಯಗಳಿರುವುದು ಸಾಮಾನ್ಯ. ಆದರೆ ಇಂಥ ಸೂಚನಾಪದ್ಯಗಳಿಗೂ ಪಲ್ಲವಿಗಳಿಗೂ ಅಂತರವಿದೆ. ಪಲ್ಲವಿ ಪ್ರತಿಯೊಂದು ನುಡಿಯ ಜತೆಗೆ ಆವರ್ತನೆಗೊಳ್ಳುವಂತೆ ಈ ಸೂಚನಾ ಪದ್ಯಗಳು ಆವರ್ತನಗೊಳ್ಳುವುದು ಶಕ್ಯವಿಲ್ಲ. ಇತರ ಕವಿ ಕಾವ್ಯಗಳನ್ನು ಹಾಡುತ್ತಿದ್ದರಾದರೂ ಅವುಗಳ ಹಾಡುಗಾರಿಕೆ ಮತ್ತು ಸ್ವರವಚನ-ದಾಸರ ಪದಗಳ ಹಾಡುಗಾರಿಕೆ ತೀರ ಭಿನ್ನಶೈಲಿಯದಾಗಿತ್ತೆಂಬುದು ಈ ರಾಚನಿಕ ಅಂಶದಿಂದ ಸ್ಪಷ್ಟವಾಗುತ್ತದೆ. ಎಂದರೆ ಕಾವ್ಯಗಳ ಸೂಚನಾ ಪದ್ಯಗಳನ್ನು ಪಲ್ಲವಿಯಂತೆ ಪ್ರತಿ ಪದ್ಯಕ್ಕೂ ಆವರ್ತನಗೊಳಿಸುವ ಪರಿಪಾಠ ಇರಲಿಲ್ಲವೆಂದು ಹೇಳಬಹುದು.

ಬಸವಾದಿ ಶರಣರ ಹಾಡುಗಳನ್ನು ಛಂದಸ್ಸಿನ ದೃಷ್ಟಿಯಿಂದ ಗಮನಿಸಿದಾಗ ಅಂಶಗಣ-ಮಾತ್ರಾಗಣಗಳ ಮಿಶ್ರಣವಿರುವಂತೆ ಕಂಡುಬರುತ್ತದೆ. ಅನೇಕ ವೇಳೆ ಅಂಶಗಣಗಳ ನಡಿಗೆ ಕಂಡುಬಂದರೆ ಕೆಲವು ಸಂದರ್ಭಗಳಲ್ಲಿ ೩, ೪, ೫ ಮಾತ್ರೆಯ ಗಣಗಳು, ಇನ್ನು ಕೆಲವೊಮ್ಮೆ ೩|೪|೩|೪ ಮುಂತಾದ ವೈವಿಧ್ಯವುಳ್ಳ ಬಂಧಗಳು ಕಂಡು ಬರುತ್ತವೆ. ಉದಾ:

ಮಲವ: ತೊಳೆಯ: ಲಜಿಯ: ದಮಲ
ಜಲದಿ: ತೊಳೆವೆ : ನೆಂಬೆ: ಯೋ?
ಒಳಗೆ: ಹೊರಗೆ: ಲಿಂಗ: ವಿರಲು
ತೊಳಲಿ: ಬಳಲಿ: ಲೇತ: ಕೋ

(ಶಿ. ಗೀ. ೪೯೩)

ಲಿಂಗಂ: ಶ್ರೋತ್ರದಿ: ಕೇಳಲು: ಯೋಗ್ಯವು: ಲಿಂಗಕೆ: ಕೇಳಲಿತ್ತು
ಪ್ರಸಾದ ಶ್ರೋತ್ರದಿ ಕೇಲಲು ಯೋಗ್ಯವು ಪ್ರಸಾದಿ ಕೇಳುವನು

(ಅದೇ: ೫೧೦)

ಅಂಗದ:, ಜ್ಞಾನ :ಗುಣ: ಸಂಗದೊಳ:ಗಿರ್ದ: ಶಿವ
ಲಿಂಗದೊಳು: ಸಹಭೋಜ:ನವ ಮಾಡುವ

( ಅದೇ. ೨೯೩)

ಅನೇಕ ವೇಳೆ U- ಇಂಥ ಗಣಯೋಜನೆ ಕಂಡುಬರುತ್ತದೆ. ಇದು ಅಚ್ಚಗನ್ನಡಕ್ಕೆ ಹೊರಗು. ಬಹುಶಃ ಪ್ರಾಕೃತ ಭಾಷೆಯ ಪ್ರಭಾವದಿಂದಾಗಿ ಇಂಥ ರಚನೆಗಳುಂಟಾದಂತೆ ಕಾಣುತ್ತದೆ.

ಇದಟಿ: ಭೇದವ: ನಮ್ಮ: ಗುಹೇಶ್ವರ:ನೆ ಬಲ್ಲ
ಜಡಜೀವಿ: .ಗಳಿಗಿದು: ತಿಳಿಯದು: ನೋಡಾ

(ಶಿವಯೋಗ ಪ್ರದೀಪಿಕೆ ಪು. ೫೪)

ಕೆಲವೊಮ್ಮೆ ಗಣವಿಂಗಡಣೆ ಸಾಧ್ಯವಾಗುವುದಿಲ್ಲ. ನಿಜವಾಗಿ ಸಂಗೀತ ಪ್ರಧಾನವಾದ ರಚನೆಗಳಲ್ಲಿ ಇದೆಲ್ಲ ಸಾಧ್ಯ. ಇಂಥ ವಿಚಾರಗಳನ್ನು ಹೆಚ್ಚು ಬೆಳಸುವುದು ಪ್ರಯೋಜನಕಾರಿಯಲ್ಲವೇನೋ?

ಅಚ್ಚುಕಟ್ಟಾದ ಒಂದು ಸ್ವರವಚನ ಅಥವಾ ಹಾಡಿನಲ್ಲಿ ಪಲ್ಲವಿ ಪರಿಚಯಿಸುವ ಒಂದು ಭಾವ ಅಥವಾ ವಿಚಾರ ಮುಂಬರುವ ಪ್ರತಿಯೊಂದು ನುಡಿಯಲ್ಲಿ ರೂಪಕ ಅಥವಾ ಪ್ರತಿಮೆಯಾಗಿ ಬೆಳೆದುನಿಲ್ಲುತ್ತದೆ. ಇಂಥ ರಚನೆಗಳು ಕೇಳುಗರ ಬುದ್ಧಿ-ಭಾವಗಳನ್ನು ಸೂರೆಗೊಳ್ಳಬಲ್ಲವು.

ಹೂವಿಲ್ಲದ ಕಂಪು ಹೊನ್ನಿಲ್ಲದ ಬಣ್ಣ
ಕಳೆಯಿಲ್ಲದ ಚಂದ್ರನ ಪರಿಯಂತೆ ಶಿವಯೋಗ ||ಪಲ್ಲವ||

ಕಾಲಿಲ್ಲದ ನಡೆ ಕಣ್ಣಿಲ್ಲದ ನೋಟ
ಹಾಲಿಲ್ಲದ ತುಪ್ಪದ ಪರಿನೋಡ
ನಾಲಗೆಯಿಲ್ಲದ ರುಚಿ ಕಿವಿಯಲ್ಲಿ
ಕೇಳದೆ ಹೇಳುವ ಪರಿ ಶಿವಯೋಗ ||೧||

ಹರಳಿಲ್ಲದ ಗೆಜ್ಜೆ ಹುರುಳಿಲ್ಲದ ಹಯನು
ಕರ್ಬುನ ಉಂಡ ನೀರಿನ ಪರಿ ನೋಡ
ಹುರಿದು ಬಿತ್ತಿದ ಬೀಜ ನಾಟಿಯ
ಪರಿಯಂತೆ ಪರಶಿವಯೋಗ ||೨||

ತನುಗುಣಂಗಳನರಿಯದ ಸಮಾಧಿ
ಮನವೊಲಿದು ನೆರೆವ ಸುಖ ನಿಮ್ಮ
ನೆರೆಯಲರಿದು ನಿಜಗುಣ ಯೋಗ
ಅನುಪಮಸುಖಿ ಸಿದ್ಧರಾಮೇಶ ತಂದೆ ||೩||

ಸ್ವರವಚನಗಳ ವಿಶ್ಲೇಷಣೆಯಿಂದ ಇನ್ನೂ ಹಲವು ಅಂಶಗಳು ನಮ್ಮ ಗಮನ ಸೆಳೆಯುತ್ತವೆ. ಮೊದಲನೆಯದಾಗಿ ಪ್ರಾಚೀನ ಕಾಲದ ಸ್ವರವಚನಗಳ ಸಂಖ್ಯೆ ಇವು ಒಟ್ಟು ಸುಮಾರು ೩೫೦ ರಷ್ಟಾಗಬಹುದೆಂಬುದನ್ನು ಈಗಾಗಲೇ ನೋಡಿದ್ದೇವೆ. ಇದೇ ಅವಧಿಯಲ್ಲಿ ಹುಟ್ಟಿರುವ ವಚನಗಳ ಸಂಖ್ಯೆ ದಿಗ್ಭ್ರಮೆಗೊಳಿಸುವಂಥದು. ಸುಮಾರು ೧೪ ಸಾವಿರ ವಚನಗಳು ಈ ಅವಧಿಯಲ್ಲಿ ಸಿಕ್ಕು ಪ್ರಕಟವಾಗಿವೆ. ಇತ್ತೀಚೆಗೆ ಸಿದ್ಧರಾಮನ ಇನ್ನೂ ಸು. ೫೦೦ರಷ್ಟು ವಚನಗಳಿರುವುದಾಗಿ ಮಾಹಿತಿಯಿದೆ. ಎಂದರೆ ಸಂಖ್ಯೆಯ ದೃಷ್ಟಿಯಿಂದ ಸ್ವರವಚನಗಳು ಸಿಕ್ಕಿರುವುದು ವಚನಗಳ ೪೦ ನೆಯ ಒಂದು ಭಾಗ ಮಾತ್ರ. ಇದಲ್ಲದೆ ಪ್ರಾಸ, ಗಣ ಇತ್ಯಾದಿ ರಚನಾಂಶಗಳು ಮತ ಸಂಬಂಧಿ ತಾತ್ವಿಕ ವಿವರಗಳು ಸಂಗೀತದ ಸಂಬಂಧ ಇತ್ಯಾದಿ ಸಂಗತಿಗಳು ಸ್ವರವಚನಗಳಲ್ಲಿರುವಂತೆ ವಚನಗಳಲ್ಲಿ ಇಲ್ಲ. ಆದರೆ ವಚನಕಾರರು ತೋಡಿಕೊಳ್ಳುವ ಆತ್ಮೀಯ ನಿವೇದನಾಭಾವ ಅವರದೇ ಆದ ಸ್ವರವಚನಗಳಲ್ಲಿ ಅಷ್ಟಾಗಿ ಪ್ರಕಟವಾಗುದಿಲ್ಲ. ಬೆಡಗಿನ ಪ್ರಕಾರ ಉಭಯ ಮಾಧ್ಯಮಗಳಲ್ಲಿಯೂ ಇದೆ.

ಎತ್ತಣ ಮಾಮರ ಎತ್ತಣ ಕೋಗಿಲೆ . . . . . .
ಅಕ್ಕ ಕೇಳವ್ವ ನಾನೊಂದು ಕನಸ ಕಂಡೆ . . . . .

ಚಿಲಿಮಿಲಿ ಎಂದೋದುವ ಗಿಳಿಗಳಿರ ನೀವು ಕಾಣರೆ . . . . . . .
ಹಸಿವಾದೊಡೆ ಭಿಕ್ಷಾನ್ನಗಳುಂಟು, ತೃಷೆಯಾದೊಡೆ
ಕೆರೆಹಳ್ಳ ಬಾವಿಗಳುಂಟು . . . . .

ಎನ್ನ ಕಾಯವ ದಂಡಿಗೆಯ ಮಾಡಯ್ಯ . . . . .
ಆಚಾರವೇ ಸ್ವರ್ಗ ಅನಾಚಾರವೇ ನರಕ . . . .
ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ . . . .

ಮೊದಲಾದ ವಚನಗಳಲ್ಲಿ ಕಂಡುಬರುವ ಅಪೂರ್ವ ಭಾವಸಂಪತ್ತಿ, ಸ್ವವಿಮರ್ಶೆ, ಲೋಕ ಸಂಗ್ರಹದೃಷ್ಟಿ ಇತ್ಯಾದಿ ಅನನ್ಯ ಸಾಧಾರಣ ಅಂಶಗಳು ವಚನ ಸಾಹಿತ್ಯವನ್ನು ವಿಶ್ವಸಾಹಿತ್ಯದ ಸಾಲಿಗೆ ಸೇರಿಸುತ್ತವೆ.

ತಾತ್ವಿಕತೆಯು ಹಿನ್ನಲೆಯಾಗಿ ಮುನ್ನೆಲೆಯಲ್ಲಿ ಅಲೌಕಿಕವಾದ ಅನುಭಾವ ಸಂಪತ್ತಿಯಿಂದ ಓತಪ್ರೋತವಾಗಿರುವುದು ವಚನಗಳಲ್ಲಿ ಕಂಡುಬಂದರೆ, ಸ್ವರವಚನಗಳಲ್ಲಿ ಇವು ಅಷ್ಟು ಮುಖ್ಯ ಸಂಗತಿಗಳಾಗದೆ ಇರುವುದು ಎದ್ದುಕಾಣುವ ಸಂಗತಿ. ವೀರಶೈವ ಪರಿಭಾಷೆ ಸ್ವರವಚನಗಳ ಪ್ರಮುಖ ಲಕ್ಷಣಗಳಲ್ಲೊಂದು ಎಂದು ೧೨ ನೆಯ ಶತಮಾನದ ಸ್ವರವಚನಗಳನ್ನು ಕುರಿತು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ನರಜನ್ಮದ ಪೂರ್ವಾಶ್ರಯ ದೋಷವ
ಪರಿಹರಿಸಿದುದೆನ್ನ ಗುರುಕರುಣ

ಲಿಂಗಸಹಿತ ನಡೆ ಲಿಂಗಸಹಿತ ನುಡಿ
ಲಿಂಗಸಹಿತ ಸಕಲೇಂದ್ರಿಯ ಮುಖವು

ಶ್ರೀ ವಿಭೂತಿಯನೊಲಿದು ಧರಿಸಿದಡಾವ
ಕರ್ಮವು ಹೊದ್ದಲಮ್ಮವು

ಚಿಂತಾಮಣಿ ರುದ್ರಾಕ್ಷಿಗಳವಚಿಂತುವಚಿದು
ಧರಿಸ ಬಲ್ಲಡೆ ಆತ ರುದ್ರನು

ಹೀಗೆ ಈ ಸ್ವರವಚನಗಳಲ್ಲಿ ಅಷ್ಟಾವರಣ, ಷಟ್‌ಸ್ಥಲ, ಶೀಲಗಳು ಮುಂತಾದ ತಾತ್ವಿಕ ವಿಚಾರಗಳಿಗೆ ಹೆಚ್ಚು ಒತ್ತು ಬಿದ್ದಿದೆ. ಮಹಲಿಂಗದೇವನಂಥವರು ತಾವು ಪ್ರತಿಪಾದಿಸಿರುವ ನೂರಾ ಒಂದು ಸ್ಥಲಗಳಿಗೆ ಒಂದೊಂದರಂತೆ ಸ್ವರವಚನಗಳನ್ನು ಹೊಂದಿಸಿದರು. ಮುಂದುವರಿದು 'ಕಂಬಾಳ ಶಾಂತಮಲ್ಲೇಶ'ನು ಸ್ವರವಚನಗಳನ್ನು ಇನ್ನಷ್ಟು ಸಂಗ್ರಹಿಸಿ ೨೧೬ಕ್ಕೆ ಮುಟ್ಟಿಸಿದ. ಎಂದರೆ ವೀರಶೈವ ಪರಿಭಾಷೆ ಸ್ವರವಚನಗಳಲ್ಲಿ ತುಂಬ ಸ್ಫುಟವಾಗಿ ಪ್ರಕಟಗೊಳ್ಳುವುದೇ ಅದರ, ಮುಖ್ಯ ಲಕ್ಷಣ. ಸರ್ವಜನ-ಸರ್ವಕಾಲಗಳಲ್ಲಿ ಮನೋಹರವಾಗಿ ಗೋಚರಿಸುವ ವಚನಗಳಂತೆ ಸ್ವರವಚನಗಳು ಗೋಚರಕ್ಕೆ ಬರದಿರಲು ಅವುಗಳ ಈ ವೈಲಕ್ಷಣವೇ ಕಾರಣವೆಂದು ಹೇಳಬೇಕು. ಮುಂದಿನ ಕಾಲದ ನಿಜಗುಣಶಿವಯೋಗಿ, ಸರ್ಪಭೂಷಣ ಶಿವಯೋಗಿ, ಷಡಕ್ಷರ ಸ್ವಾಮಿಗಳು ಈ ಕೆಲವು ಮುಖ್ಯ ಸ್ವರವಚನಕಾರರ ರಚನೆಗಳು ಜನಪ್ರಿಯತೆ ಪಡೆಯಲು ಅವುಗಳ ಪಾರಿಭಾಷಿಕತೆ ಕಾರಣವಾಗಿರದೆ ಅನುಭಾವಾದಿ ಅಲೌಕಿಕತೆ ಕಾರಣವೆಂಬುದನ್ನು ಎಲ್ಲರೂ ಬಲ್ಲರು.

ಇಲ್ಲಿ ಇನ್ನೊಂದು ಮಾತನ್ನು ಕೂಡ ಪರಿಶೀಲನೆಗೆ ಇಟ್ಟುಕೊಳ್ಳಬಹುದೆಂದು ಕಾಣುತ್ತದೆ. ನಮಗೆ ಖಚಿತವಾಗಿ ತಿಳಿದುಬಂದಿರುವಂತೆ ವೀರಶೈವದಲ್ಲಿ ಪದ್ಯರೂಪಿ ಸಾಹಿತ್ಯವೇ ಮೊದಲು ಆವಿರ್ಭವಿಸಿದೆ. ಕೊಂಡಗುಳಿಯ ಕೇಶಿರಾಜನ ಕೃತಿಗಳು ಈ ಮಾತಿಗೆ

ಬಲವಾದ ಆಧಾರ ನೀಡುತ್ತವೆ. ಮುಂದಿನ ಹಲವು ಜನ ಶಿವಶರಣರು ಪದ್ಯರೂಪದ ಕೃತಿಗಳನ್ನು ರಚಿಸಿದ್ದಾರೆ. ಅಕ್ಕಮಹಾದೇವಿ ಮತ್ತು ಸಿದ್ಧರಾಮರು ಈ ನಿಟ್ಟಿನಲ್ಲಿ ಪ್ರಮುಖರು. ಆದಯ್ಯನ ಲಘುಕೃತಿಗಳನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು. ಸಕಲೇಶ ಮಾದರಸ, ಜೇಡರದಾಸಿಮಯ್ಯ, ಆದಯ್ಯ ಮತ್ತು ಸಿದ್ಧರಾಮರ ಅನೇಕ ವಚನಗಳು ವಚನಗಳೇ ಅಥವಾ ಪದ್ಯಗಳೇ ಎಂಬ ಸಂಶಯಕ್ಕೆಡೆಮಾಡಿಕೊಡುತ್ತವೆ. ಈ ಎಲ್ಲ ಕಾರಣದಿಂದಾಗಿ ಪದ್ಯ ಮತ್ತು ಸ್ವರವಚನ ಸಾಹಿತ್ಯವೇ ಮೊದಲು ಹುಟ್ಟಿ, ತರುವಾಯ ವಚನ ಸಾಹಿತ್ಯದ ಉದಯವಾಯಿತೆನ್ನಬೇಕು.



# ನೂರೊಂದು ವಿರಕ್ತಯುಗದ ಸ್ವರವಚನಸಾಹಿತ್ಯ

*ಬಿ.ಆರ್. ಹಿರೇಮಠ*

ವಚನ ಹಾಗೂ ಸ್ವರವಚನಗಳು ತಮ್ಮ ಅನುಭವದ ಅಭಿವ್ಯಕ್ತಿಗಾಗಿ ಅನುಭಾವಿಗಳು ರೂಪಿಸಿಕೊಂಡ ಸಾಹಿತ್ಯ ಮಾಧ್ಯಮಗಳು. ಇವುಗಳಲ್ಲಿ ತುಂಬ ಉಪೇಕ್ಷೆಗೆ ಗುರಿಯಾದ ಸಮಗ್ರ ಸ್ವರವಚನ ಸಾಹಿತ್ಯವನ್ನು ಅಧ್ಯಯನದ ಅನುಕೂಲತೆಗಾಗಿ ೧. ಬಸವ ಪೂರ್ವ ಯುಗದ ಸ್ವರವಚನ ಸಾಹಿತ್ಯ ೨. ಬಸವಯುಗದ ಸ್ವರವಚನ ಸಾಹಿತ್ಯ ೩. ಬಸವೋತ್ತರ ಯುಗದ ಸ್ವರವಚನ ಸಾಹಿತ್ಯವೆಂದು ಸ್ಥೂಲವಾಗಿ ವರ್ಗೀಕರಿಸಬಹುದು. ಇಲ್ಲಿ ಬಸವೋತ್ತರಯುಗದ ಸ್ವರವಚನ ಸಾಹಿತ್ಯದಲ್ಲಿ ೧. ನೂರೊಂದು ವಿರಕ್ತರ ಪೂರ್ವಯುಗ ೨. ನೂರೊಂದು ವಿರಕ್ತರ ಯುಗ ೩. ನೂರೊಂದು ವಿರಕ್ತೋತ್ತರ ಯುಗ ೪. ಏಳುನೂರೊಂದು ವಿರಕ್ತ ಯುಗ ೫. ಏಳುನೂರೊಂದು ವಿರಕ್ತೋತ್ತರ ಯುಗವೆಂದು ಮತ್ತೆ ಉಪವರ್ಗೀಕರಣ ಮಾಡಿಕೊಳ್ಳಬಹುದಾಗಿದೆ.

ನೂರೊಂದು ವಿರಕ್ತರ ಯುಗದ ಸ್ವರವಚನ ಸಾಹಿತ್ಯ, ಬಸವೋತ್ತರ ಯುಗದ ಸ್ವರವಚನ ಸಾಹಿತ್ಯಚರಿತ್ರೆಯಲ್ಲಿ ದ್ವಿತೀಯ ಘಟ್ಟವೆನಿಸಿಕೊಳ್ಳುತ್ತದೆ. ಪರಂಪರೆ ಹಾಗೂ ಸತ್ವಗಳ ದೃಷ್ಟಿಯಿಂದ ಗಮನಾರ್ಹವಾಗಿರುವ ಈ ಯುಗದ ಸ್ವರವಚನ ಸಾಹಿತ್ಯ ೧. ಸ್ವತಂತ್ರ ರಚನೆ ಸಾಹಿತ್ಯ ೨. ಸಂಯೋಜನ ಸಾಹಿತ್ಯವೆಂದು ಎರಡು ತೆರನಾಗಿರುತ್ತವೆ. ಕರಸ್ಥಲದ ನಾಗಿದೇವ, ಗುರುಬಸವ, ಗುರುಪುರದ ಮಲ್ಲಯ್ಯ, ನಿರ್ವಾಣ ಬೋಳೇಶ, ಬತ್ತಲೇಶ್ವರ, ವೀರಣ್ಣದೇವ, ಮಗ್ಗೆಯ ಮಾಯಿದೇವ, ಕವಿಲಿಂಗ, ಕಾರುಗಹಳ್ಳಿ ಶಾಂತಯ್ಯ, ಕೊಡೇಕಲ್ಲ ಬಸವಣ್ಣ ಮೊದಲಾದ ಅನುಭಾವಿಗಳು ಈ ಯುಗದಲ್ಲಿ ಸ್ವತಂತ್ರವಾಗಿ ಸ್ವರವಚನಗಳನ್ನು ರಚಿಸಿದ್ದಾರೆ. ಇವರು ರಚಿಸಿದ ಈ ಸಾಹಿತ್ಯ ಸ್ವತಂತ್ರ ರಚನಾ ಸಾಹಿತ್ಯ ಗುಂಪಿಗೆ ಸೇರುತ್ತದೆ. ಮಹಾಲಿಂಗದೇವ, ಜಕ್ಕಣಾರ್ಯ, ಸಿದ್ಧಲಿಂಗರ ಏಕೋತ್ತರ ಶತಸ್ಥಲಗಳು, ಶಿವಗಣಪ್ರಸಾದಿ ಮಹಾದೇವಯ್ಯ, ಹಲಗೆದೇವ, ಗುಮ್ಮಳಾಪುರದ ಸಿದ್ಧಲಿಂಗರ ಶೂನ್ಯಸಂಪಾದನೆಗಳು, ಶಿವಯೋಗ ಪ್ರದೀಪಿಕೆ ಮೊದಲಾದ ಸಂಕಲನ ಕೃತಿಗಳು ಸ್ವರವಚನ ಸಂಯೋಜನ ಸಾಹಿತ್ಯವನ್ನು ಪ್ರತಿನಿಧಿಸುತ್ತವೆ.

'ಹಾಡಿ'ನ ಮೂಲಕ ಹೇಳುವ ಧರ್ಮಬೋಧೆ, ನೀತಿಬೋಧೆಗಳು ಜನಮನವನ್ನು ತೀವ್ರವಾಗಿ, ಪರಿಣಾಮಕಾರಿಯಾಗಿ ತಲುಪುವವೆಂಬುದನ್ನು ಮನಗಂಡ ಈ ಯುಗದ ಅನುಭಾವಿಗಳು 'ಸ್ವರವಚನ'ವನ್ನು ತಮ್ಮ ಅಭಿವ್ಯಕ್ತಿಯ ಸೂಕ್ತ ಮಾಧ್ಯಮವನ್ನಾಗಿ

ಮಾಡಿಕೊಂಡರು. ತಾವೂ ಹಾಡಿ, ಇತರರೂ ಹಾಡಲು ಅನುಕೂಲವಾಗುವಂತೆ ಇವುಗಳಿಗೆ ರಾಗ, ತಾಳಗಳ ನಿರ್ದೇಶನ ನೀಡಿದರು.

ಈ ಯುಗದ ಸಮಗ್ರ ಸ್ವರವಚನ ಸಾಹಿತ್ಯ ಒಂದೆಡೆ ವ್ಯವಸ್ಥಿತವಾಗಿ ಸಿಗುವುದಿಲ್ಲ. ಅಲ್ಲಲ್ಲಿ ಚದುರಿಹೋಗಿರುವ ಈ ಸಾಹಿತ್ಯ ರಾಶಿಯನ್ನು ಅಚ್ಚುಕಟ್ಟಾಗಿ ಸಂಗ್ರಹಿಸಿ, ಪ್ರಕಟಿಸುವ, ಅಧ್ಯಯನ ಮಾಡುವ ಕಾರ್ಯ ನಡೆಯುವುದು ತೀರ ಅವಶ್ಯವಿದೆ. ಆಗ ಮಾತ್ರ ಈ ಯುಗದ ಸ್ವರವಚನ ಸಾಹಿತ್ಯದ ಸ್ವರೂಪ, ವೈಶಿಷ್ಟ್ಯ, ಸತ್ವ, ಶ್ರೀಮಂತಿಕೆಗಳನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ.

ಇಲ್ಲಿಯ ಸ್ವರವಚನಗಳ ಆರಂಭದಲ್ಲಿ ಶುದ್ಧ ಕಾಂಬೋಧಿ, ಒಡ್ಡಿಯ ಧನ್ನಾಸಿ, ಭೈರವಿ, ದೇಶಿ, ಸೌರಾಷ್ಟ್ರ, ಶಂಕರಾಭರಣ ಮೊದಲಾದ ರಾಗಗಳನ್ನು ಅಟ್ಟ, ತ್ರಿವಿಡೆ ಮುಂತಾದ ರಾಗಗಳನ್ನೂ ನಿರ್ದೇಶಿಸಲಾಗಿದೆ. ಈ ಎಲ್ಲ ರಾಗ, ತಾಳಗಳನ್ನು ಪ್ರಾದೇಶಿಕವಾಗಿ ಸಂಗ್ರಹಿಸಿ, ವರ್ಗೀಕರಿಸಿ ವಿಶ್ಲೇಷಿಸಬೇಕು. ಇಷ್ಟೇ ಅಲ್ಲ ಪ್ರಾದೇಶಿಕವಾಗಿ ಇವುಗಳನ್ನು ಹಾಡುವವರು, ಹಾಡುವಾಗ ಬಳಸುವ ವಾದ್ಯ, ಹಾಡುವ ಸಂದರ್ಭಗಳನ್ನು ಕಲೆಹಾಕಿ ಅಭ್ಯಸಿಸಬೇಕಾಗಿದೆ. ಇದಲ್ಲದೆ ಈ ಸ್ವರವಚನಕಾರರ ಸಂಗೀತಜ್ಞಾನ, ಸಂಗೀತ ಪ್ರಸಾರಗಳನ್ನು ಗುರುತಿಸುವ, ವಿವರಿಸುವ ಕಾರ್ಯವೂ ನಡೆಯಬೇಕಾಗಿದೆ. ಈ ವಾಗ್ಗೇಯಕಾರರು ಹರಿದಾಸರಿಗಿಂತ ಪೂರ್ವದಲ್ಲಿ ಕರ್ನಾಟಕ ಸಂಗೀತ ಕ್ಷೇತ್ರಕ್ಕೆ ಸಲ್ಲಿಸಿದ ಕೊಡುಗೆಯನ್ನೂ ಕಂಡುಹಿಡಿಯಬಹುದಾಗಿದೆ. ಜೊತೆಗೆ ಹರಿದಾಸರ ಕೀರ್ತನಸಾಹಿತ್ಯ, ಕೀರ್ತನಸಂಗೀತಗಳಿಗೂ ಈ ಯುಗದ ಸ್ವರವಚನ ಸಾಹಿತ್ಯ, ಸ್ವರವಚನ ಸಂಗೀತಗಳಿಗೂ ಇರುವ ಪ್ರೇರಣೆ, ಪ್ರಭಾವ, ಸಾದೃಶ್ಯ-ವೈದೃಶ್ಯಗಳನ್ನು ಕುರಿತು ತಲಸ್ಪರ್ಶಿಯಾಗಿ ಅಧ್ಯಯನ ನಡೆಯಬೇಕಾಗಿದೆ.

ಛಂದಸ್ಸಿನ ದೃಷ್ಟಿಯಿಂದಲೂ ಈ ಕಾಲದ ಸ್ವರವಚನಗಳು ಪ್ರಾಮುಖ್ಯತೆ ಪಡೆದುಕೊಂಡಿರುತ್ತವೆ. ಇವು ಹೆಚ್ಚಾಗಿ ಷಟ್ಪದಿ, ರಗಳೆ, ಕಂದ ಮೊದಲಾದ ಮಾತ್ರಾ ಛಂದಸ್ಸು; ಅಕ್ಕರ, ಚೌಪದಿ, ಏಳೆ ಮುಂತಾದ ಅಂಶ ಛಂದಸ್ಸು; ಅಕ್ಷರ ವೃತ್ತಗಳಲ್ಲಿಯೂ ರಚಿತವಾಗಿರುತ್ತವೆ. ಉದಾಹರಣೆ:

ಷಟ್ಪದಿ

ಲಿಂಗ ಸಹಿತ ನಡೆ ಲಿಂಗ ಸಹಿತ ನುಡಿ
ಲಿಂಗ ಸಹಿತ ಸಕಲೇಂದ್ರಿಯ ಮುಖವು
ಲಿಂಗಾಲಿಂಗಿತವಾಗಿಹದಿಂಥಾ ಲಿಂಗಾಂಗಿಯ ಸಹಜ
ಅಂಗದಿ ಸತಿಸುತ ಮಿತ್ರರುಗಳು ಶಿವ
ಲಿಂಗವ ಧರಿಸಿಹುದದು ಕಾರಣದಿಂ
'ಅಂಗಸುಸಂಗ ತದಂತರ್ಗ್ರಗಣಾ'ಯೆಂಬ ಶ್ರುತಿ ಮತವು

(ಗುರುಪುರದ ಮಲ್ಲಯ್ಯ)

ಉಣಲಿಲ್ಲದ ಉಪವಾಸಿ ಮನವಿದು
ಹಣವಿಲ್ಲದ ಬ್ರಹ್ಮಚಾರಿ ಮನವಿಲ್ಲದ
ಗುಣಹೀನ ಮನ ಪರವಧು ದೊರೆಯದ ಮಹಾವ್ರತಿ ಮನ ನೋಡಾ
ಕುಣಿವ ಮನ ವಿಷಯಂಗಳ ಬಳಿಯಲಿ
ಮಣಿವ ಮನ ನೋಡವರವರಿಚ್ಛೆಗೆ
ತ್ರಿಣಯನೆ ಕರುಣಾಕರ ಕೃಪೆ ಮಾಡಯ್ಯ ಶಂಕರಾ ನಿಮ್ಮ ಕಿಂಕರ
(ಗುರುಪುರದ ಮಲ್ಲಯ್ಯ)

ಭಾವದ ಕಲೆಗಳ ಬಲ್ಲ
ಭಾವಕಿಯರೆ ಇದನುಸುರಿ
ಭಾವಕಿಯರ ಇರವು ಮತ್ತಾರಿಗೆಯಘಟಿತವು।
ಭಾವದ ಕಲೆಗಳನಱುಹೆ
ಭಾವಕಿಯರೊಳಿಂಬಿಟ್ಟು
ಭಾವಕಿಯರ, ನೆರದಿರ್ದ ನಿರ್ವಾಣ ಬೋಳ್ಕೇಶನೆ ಬಲ್ಲ॥
(ನಿರ್ವಾಣ ಬೋಳೇಶ)

ಕಿರಿಯಕ್ಕರ

ಹಾಱುವ ಹಂಸನ ಹತ್ತೆ ಕರವುದೊಂದು। ಚಂದಮಾಮ
ದಾರಿ ಬಟ್ಟೆಯ ಕಟ್ಟಿ ನಡೆದಾಡುವದೊಂದು। ಚಂದಮಾಮ
ಮೂಱು ಬಾಗಿಲ ಮುಚ್ಚಿ ಮುಕ್ತನಾದುದೊಂದು। ಚಂದಮಾಮ
ಮೀಱಿ ನಿರ್ವಾಣಪ್ರಿಯಲಿಂಗವಾದುದೊಂದು। ಚಂದಮಾಮ
(ಬತ್ತಲೇಶ್ವರ)

ಚೌಪದಿ

ರೂಪು ರೂಪಿನಿಂದಱಿಯೆ
ರೂಪಿನೊಳಗೆ ಮೈಮಱೆಯೆ
ರೂಪನೆಱಿಡು ಕಣ್ಣೆಱೆಯ ಚಿ
ದ್ರೂಪು ನಿರೂಪಿನೊಳ್ಮೆಱೆಯೆ
(ವೀರಣ್ಣದೇವ)

ಹೀಗೆ ಅಂಶಛಂದಸ್ಸಿನ ಪ್ರಯೋಗಶೀಲತೆಗಳನ್ನು ಮೈಗೂಡಿಸಿಕೊಂಡಿರುವ ಈ ಸ್ವರವಚನಗಳ ಸಮಗ್ರ ಛಂದೋಅಧ್ಯಯನ ಇನ್ನೂ ನಡೆಯಬೇಕಾಗಿದೆ. ಇಲ್ಲಿಯ ಸ್ವರವಚನಗಳಲ್ಲಿ ಹಾಸುಹೊಕ್ಕಾಗಿರುವ ಆದಿಪ್ರಾಸ, ಅನುಪ್ರಾಸ, ಅಂತ್ಯಪ್ರಾಸ ಹಾಗೂ ವಡಿಗಳು ಭಾವ, ಅರ್ಥಗಳನ್ನು ಪರಿಣಾಮಕಾರಿಯಾಗಿ ಪರಿಸ್ಫುಟಗೊಳಿಸುತ್ತವೆ. ಉದಾಹರಣೆ

ಅಂಗವಿಲ್ಲದೆ ಕೂಡಬೇಕು ಅಪ್ರಮಾಣವಳಿಯಬೇಕು
ಕಂಗಳಿಲ್ಲದೆ ಕಾಣಬೇಕು ಕಾಂತೆಯ ಕಲೆಯ ನೆಲೆಯನು
ಮುಂಗಡೆಯಲ್ಲಿ ಹಿಡಿಯಬೇಕು ಮುಂದೆ ನಿಜವನಳಿಯಬೇಕು
ಸಂಗವಿಲ್ಲದೆ ಸಾಧಿಸಬೇಕು ಸರಸವಿರಸವಾಗದೆ

(ನಿರ್ವಾಣ ಬೋಳೇಶ)

ಅಪರಾಪರವ ದಾಂಟಿ ಸುಪರಾಪರವ ಮೀಟಿ
ವಿಪರೀತವಾದ ನಿರ್ವಾಣಲಿಂಗದತ್ತ

(ನಿರ್ವಾಣ ಬೋಳೇಶ)

ಅರಿವು ಮರವೆಗಳನೊಳಕೊಂಡಪರಿಮಿತ ಲಿಂಗ ತುಂಬಿ
ತೆರಹಿಲ್ಲದಿಹ ಕಾಯಕರಣಂಗಳೊಳಗೆಲ್ಲ ಲಿಂಗ ತುಂಬಿ
ಕುರುಹಿಡಬಾರದ ಪರಿಪೂರ್ಣವಾಗಿಹ ಲಿಂಗ ತುಂಬಿ
ನೆರೆ ತನ್ನ ಬೆಳಗಲಿ ತಾನೆ ರಾಜಿಸುತಿದೆ ಲಿಂಗ ತುಂಬಿ

(ಕರಸ್ಥಲದ ನಾಗಿದೇವ)

ಈ ಸಮಯದ ಸ್ವರವಚನಗಳು ಕಣಿ, ಚಂದಮಾಮ, ಕೊರವಂಜಿ, ಕೋಲಾಟ ಪದ, ಆರತಿಪದ ಮೊದಲಾದ ಶುದ್ಧ ಜಾನಪದ ಸಾಹಿತ್ಯ ಪ್ರಕಾರಗಳೆನಿಸಿವೆ. ಉದಾಹರಣೆ:

ಕಣಿ:

ಕಣಿಯ ಹೇಳಬಂದೆ ನಾನು
ಕಣಿಯ ಕೇಳೆ ಹೆಣ್ಣೆ ನೀನು
ಕ್ಷಣದಿ ನಿನ್ನ ದೇಹ ಜಡವ
ಹಣದವಾಡಿ ಓಡಿಸುವೆನು

ವಚನ:

ಭಕ್ತಿ ಸತಿಯನಬಿಸಿ ಕಣಿಯ ಹೇಳ ಬಂದೆ
ಆವ ದೇವರ ವಲವರವೆ? ಕಲ್ಯಾಣದ ಬಸವಣ್ಣನ ಕರುಣವೆ
ಚೆಕ್ಕಯ್ಯನ ಒಲವೆ, ಅಲ್ಲಯ್ಯನ ಕೃಪೆಯ ಮೇಲೆ
ಭ್ರಮರಾಂಬಿಕೆಯ ವರವೆ. ಭೂನಾಥನ ಸೋಂಕೆ?
ಕೇಳು ಕೇಳಮ್ಮಾ
ಕೇಳುವ ತೆರನಾವುದವ್ವಾ?

ಮಂಗಳಾಂಗಿಯಾಗಿ, ನೀ ಶುದ್ಧ ಪದ್ಮಾಸನವನಿಕ್ಕಿ, ಕರವ ಮುಗಿದು ಶರಣೆನ್ನೆ. ಏಕಾಗ್ರ ಚಿತ್ತದಿ ಕೇಳಿ, ಸೊಲ್ಲನಾರೈದು ಹೂ ಕೊಳ್ಳೆ, ಮಾಕೊಳ್ಳದೆ ಶ್ರದ್ಧೆಯಾಗಿರೆ. ಈಗಳೆ ನಿನ್ನ ತನುವಿಕಾರ ಮಬವೆಯ ಬಿಡಿಸುವೆ, ನಿನ್ನಾಣೆ, ಹುಸಿಯ. ಎನ್ನಾಣೆ ನಿಜವೆ? ದೇವರಾಣೆ, ನಂಬು ನಂಬೆಯಮ್ಮ.

**ಪದ:**

ಸತ್ಯದಕ್ಕಿ ಹಸೆಯನಿಕ್ಕಿ, ಭಕ್ತಿ ತಾಂಬೂಲವಿರಿಸಿ
ಚಿತ್ತದಮಲ ತೈಲದಿಂದ ಜ್ಯೋತಿ ಬೆಳಗಲು
ನಿತ್ಯ ಪ್ರಣವದಾದಿಯಕ್ಷರಂಗಳ ಬೋಧಿಸಿ ಜ್ಞಾನ
ಚಿತ್ತದಿಂದ ಹೊಯ್ದು ನಿನ್ನ ಮತ್ತ ಜಡವನೋಡಿಸುವೆನು
(ಕರಸ್ಥಲದ ನಾಗಿದೇವ)

**ಚಂದಮಾಮ:**

ಮುಂದ ಮುಂದಕೆ ಹೋಗಿ
ಮುಕ್ತನಾದುದೊಂದು ಚಂದಮಾಮ
ಅಂಧಕ ನಯನ ತೆರೆದು
ನೋಡುವದೊಂದು ಚಂದಮಾಮ ||ಪಲ್ಲ||

ಐದು ಬಣ್ಣದ ಪಕ್ಷಿ ಮೈದೊಳೆವುದು। ಒಂದು ಚಂದಮಾಮ
ನೆಯ್ದಿಲು ಕುಮುದವು ನೆರವಾದುದು। ಒಂದು ಚಂದಮಾಮ
ಹೊಯ್ದಲೆ ಚಿಗಿತು ಹೊಸತಾದುದು। ಒಂದು ಚಂದಮಾಮ
ಐದಲೆ ನೂರೊಂದು ತಲೆಯಾದುದು।ಒಂದು ಚಂದಮಾಮ
(ಬತ್ತಲೇಶ್ವರ)

**ಕೋಲಾಟ ಪದ:**

ಕೋಲು ಕೋಲು ಕೋಲೆ ಸುಜ್ಞಾನದ
ಕೋಲೆ ಕೋಲ ಪದನ ಘನಲೀಲೆ। ನೀ
ಪೇಳಂಗಲಿಂಗದ ಮೇಲೆ ||ಪಲ್ಲ||

ಗಗನ ಮಂಟಪದೊಳು ಪುಗುತ
ಸೊಗಸು ಲಿಂಗದ ಗತಿ ಮಿಗುತ
ಯುಗ ನಯನಾಶ್ರುಗಳೊಗುತ। ಈ
ಜಗದ ಜನರ ಕಂಡು ನಗುತ ||೧||

ಆರು ಮುಖದ ಶಕ್ತಿ ನೋಡೆ
ಮೂರು ಲಿಂಗದ ಗತಿಗೂಡೆ
ತೋರಿ ಸದ್ಭಕ್ತಿಯ ಪಾಡೆ। ಮಿಗೆ
ಮೀರಿದ ಯುಕ್ತಿಯೊಳಾಡೆ ||೨||
(ವೀರಣ್ಣದೇವ)

ಆರತಿಪದ:

ಕರ್ಪೂರ ಜ್ಯೋತಿ ಪ್ರಕಾಶ ನಿಜ
ನಿಷ್ಪತ್ತಿ ನಿಜಲಿಂಗ ಶರಣಾ ಹೋ ||ಪಲ್ಲ||

ಕರ್ಪೂರ ಮಂಟಪದೊಳು ಕರ್ಪೂರ ಕಂಬದ ಮೇಲೆ
ಕರ್ಪೂರ ಜ್ಯೋತಿಯ ಬೆಳಗಿನ ಬೆಳಗು
ಕರ್ಪೂರ ಮುಪ್ಪುರ ಯೋಗ ದರ್ಪಣ ಸುಜ್ಞಾನಲಿಂಗ
ಕರ್ಪೂರ ನಿರ್ವಾಣಪ್ರಿಯ ಬೋಳೇಶ ಹೋ ||೩||

(ನಿರ್ವಾಣಿ ಬೋಳೇಶ)

ಮುಂದಿನ ಯುಗದ ಅನುಭಾವಿಗಳು ಈ ದೇಶೀಯ ಸಾಹಿತ್ಯ ಪ್ರಕಾರಗಳನ್ನು ಇನ್ನೂ ಶಕ್ತಿಯುತವಾಗಿ ಬಳಸಿಕೊಳ್ಳಲು ಇವು ಪ್ರೇರಣೆಯನ್ನೊದಗಿಸಿದವು. ಇದರಿಂದ ಶಿಷ್ಟಪದ ಸಾಹಿತ್ಯ ಜನಪದ ಸಾಹಿತ್ಯಗಳ ಅಂತರ ಕಡಿಮೆಗೊಳ್ಳುವಂತಾಯಿತು. ಜನಸಾಮಾನ್ಯರು ಹಾಗೂ ಜನಸಾಮಾನ್ಯರ ಪ್ರತಿನಿಧಿಗಳಾದ ಅನುಭಾವಿ, ಶಿವಯೋಗಿಗಳು ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸುವಂತಾಯಿತು.

ಈ ಯುಗದ ಸ್ವರವಚನ ಸಾಹಿತ್ಯದಲ್ಲಿ ಸಾಮಾಜಿಕ ವಿಚಾರಗಳಿಗಿಂತ ತತ್ವ, ಲೋಕ ನೀತಿ ಮೊದಲಾದ ವಿಷಯಗಳೇ ಪ್ರಮುಖವಾಗಿರುತ್ತವೆ. ಉದಾಹರಣೆ:

ತತ್ವಪದಗಳು:

ಹಾಜಿತೋ ಹಂಸ ಹಾಜಿತೋ
ಮೂಜು ನದಿಯ ದಾಂಟ ಮುಕುತಿ ರಾಜ್ಯದತ್ತ ||ಪಲ್ಲ||

ಕರ್ತೃ ಭೃತ್ಯ ಶತ್ರುಮಿತ್ರಗಳಿಲ್ಲದೆ
ಉತ್ತರಗತಿಯತ್ತ ಉನ್ಮನಿಯ ಪಥದತ್ತ ||೧||

ಹಟಿಯ ಪುರವ ಸಾರಿ, ಅಜನ ಪುರವ ಹೊಕ್ಕು
ಹರನ ರಾಜ್ಯಕಾಗಿ ಶಿವನ ರಾಜ್ಯದತ್ತ ||೨||

ಅಪರಾಪರವ ದಾಂಟ, ಸುಪರಾಪರವ ಮೀಜಿ
ವಿಪರೀತವಾದ ನಿರ್ವಾಣಲಿಂಗದತ್ತ ||೩||

(ಬತ್ತಲೇಶ್ವರ)

ಬಳ್ಳಿ ಕೂಗಿದ ಫಲವ ಬಳ್ಳೆಯ ಎಲೆಯಕ್ಕ
ಒಳ್ಳಿತಲ್ಲವೆ ತಂಗಿ ಪುರದ ಜನರ್ಗಳಿಗೆ ||ಪಲ್ಲ||

ಪುರದ ಮೂಡಣ ದಿಕ್ಕನಡರಿಯಗ್ನಿಗೆ ಬಂದು
ಸರವನಿಕ್ಕಿತು ಯಮ ನೈರುತ್ಯಕಾಗಿ

ದೊರೆಗಳಳಿವರು ತಂಗಿ, ಮರಣ ತಳವಾರರಿಗೆ
ಸಿರಿ ಹೋಗಿ ಭೂಪತಿಗೆ ಸೆರೆಯಹುದು ತರಳೆ ||೧||

ನಡುಗೇರಿ ಉರಿದು ನಾನಾಭಟರು ಮಡಿದಾರು
ನಡೆವುತಿದೆ ವರುಣ ವಾಯವ್ಯಕಾಗಿ
ಕಡು ಚೆಲ್ವೆ ಕೇಳು, ಕುಬೇರನಲಿ ಕೂಗುತಿದೆ
ಒಡೆಯನಾಗುವನಲ್ಲಿ ಪರಲೋಕದರಸು ||೨||

ಸೊಲ್ಲುತಿದೆ ಈಶಾನ್ಯದಲಿ ಜಂಬುಕ ತಾನು
ಎಲ್ಲ ಮಾತೇಕೆ ಶಿವಪುರವಾದುದು
ತಲ್ಲೀಯವಹುದು ಗುರುಶಾಂತನೊಳಗಾ ಬಳ್ಳು
ನಿಲ್ಲುತಿದೆ ಬಟ್ಟ ಬಯಲೊಳಗೆ ಲಲಿತಾಂಗಿ ||೩||

(ಕರಸ್ಥಲದ ನಾಗಿದೇವ)

ಲೋಕನೀತಿ:

ಗುರುವಿಂದಲುದಿಸಿ ಗುರುವಿನ ನಿಜವರಿಯದ
ನರನಿಗೆ ಶಿವಪಥವೆಲ್ಲಿಯದೊ ||ಪಲ್ಲ||

ಕೋಹಮೆಂದು ಬಂದೆರಗಿದ ಶಿಷ್ಯಗೆ
ಸೋಹಮೆಂಬ ನಿಜವನರುಹಿದ ಗುರು
ಸಹಜಾನುಗ್ರಹ ಸ್ವಾಯತ ಸಂಬಂಧವ ಮಾಳ್ಪು
ದೀ ಹದನರಿಯದನುಗ್ರಹ ಸಲ್ಲ ||೧||

ಹಿಂದನಳಿದು ಮುಂದನು ತೋರಿದ ಗುರು
ವಿಂದುಪದೇಶವ ಪಡೆದರೆ
ಸಂದು ಸಂಶಯವೆಂತಳಿವುದೊ? ಉಭ
ಯಾಂಧಕನಂಧಕನ ಕೈವಿಡಿದಂತೆ ||೩||

ಪರುಷ ಮುಟ್ಟಲು ಲೋಹ ಹೊನ್ನಾಗಿ ಫಲವೇನು
ಪರುಷ ತಾನಾಗದನ್ನಕ್ಕರ?
ಗುರುಕರುಣವ ಪಡೆದು ಗುರುವಿನಂತಾಗದಿರೆ
ಮರಳಿಯು ಪರಿಭವ ತಪ್ಪದು ನೋಡಾ ||೪||

(ಗುರುಪುರದ ಮಲ್ಲಯ್ಯ)

ಈ ಯುಗದ ಸ್ವರವಚನಗಳಲ್ಲಿ ಸಾಹಿತ್ಯಿಕ ಗುಣ ಕಡಿಮೆ. ಕೆಲವು ಸ್ವರವಚನಗಳು ಮಾತ್ರ ಸಾಹಿತ್ಯಿಕ ಮೌಲ್ಯದಿಂದ ಶೋಭಿಸುತ್ತವೆ. ಈ ಅನುಭಾವಿಗಳ ಸ್ವರವಚನಗಳ ಒಡಲಲ್ಲಿ ಮಿಂಚುವ ಕೆಲವು ಲೋಕೋಕ್ತಿ, ಸೂತ್ರರೂಪದ ವಾಕ್ಯಗಳು ಸಾಹಿತ್ಯಿಕ ಗುಣವನ್ನು ಸಾದರಪಡಿಸುತ್ತವೆ. ಉದಾಹರಣೆ: "ಪರುಷ ಮುಟ್ಟಲು ಲೋಹ ಹೊನ್ನಾಗಿ ಫಲವೇನು,

ಪರುಷ ತಾನಾಗದನಕ್ಕರ", "ಲಿಂಗ ಸಹಿತ ನಡೆ, ಲಿಂಗ ಸಹಿತ ನುಡಿ", "ಸದರವಲ್ಲವೊ ನಿಜಭಕ್ತಿ", "ಬಜಿಯ ಬೊಮ್ಮದ ಮಾತು ಕೇಡು", "ಶರಣರ ಸೇವೆಯ ಮಾಡು ಬೇಗ", " ಗುರು ಕರುಣವ ಪಡೆದು ನಿಜವ ನೋಡಿರೀಗ", " ಅಕ್ಕುಲಜನೆ ಯೋಗಿ, ಅನಾಮಿಕನೆ ದೈವ", "ಒಡಲ ಗುಣವನೆಲ್ಲ ಅಳಿಯಬೇಕು", "ಕಡಲಂತೆ ಕರುಣವ ತಾಳಬೇಕು", "ಸಲುಗೆಯಜಿದು ಸಾಧಿಸಬೇಕು".

ಇಲ್ಲಿಯ ಬಹಳಷ್ಟು ಸ್ವರವಚನಗಳು ತಾತ್ವಿಕ ಧೋರಣೆಯಿಂದ ಮಾರ್ಗನಿಷ್ಠವೆನಿಸಿದರೂ ಅವು ಅಭಿವ್ಯಕ್ತಿಯ ತಂತ್ರದಲ್ಲಿ ಶುದ್ಧ ದೇಶೀಯತೆಯನ್ನು ಮೈಗೂಡಿಸಿಕೊಂಡಿರುತ್ತವೆ. ಜನಸಾಮಾನ್ಯರ ಬದುಕಿನ ವಿವಿಧ ಮುಖಗಳನ್ನು ಈ ಸ್ವರವಚನಗಳಲ್ಲಿ ಜೀವಂತವಾಗಿ ನಿರೂಪಿಸಲಾಗಿದೆ. ಉದಾಹರಣೆ-ಮದುವೆಯ ಚಿತ್ರಣ:

ಅಂಬರ ಚಪ್ಪರದಡಿಯಲಿ ಘನ
ಕುಂಭಿನಿಯನೆ ಹಸೆಯ ಹಾಸಿ
ಇಂಬಪ್ಪ ಜೀವಾದಿ ಕರಣ ನಿಬ್ಬಣಿಗರು
ಸಂಭ್ರಮ ಸಂಭ್ರಮಿಸಿದರು ನೋಡಿ ||ಪಲ್ಲ||

ಇಹ-ಪರವೆಂಬೆರಡೈರಣಗಳ ಹೂಡಿ
ಶಿವೋಹಮೆಂಬಗ್ನಿವಣಿಯ ತುಂಬಿ
ನಾಹಂ ಕೋಹಂ ಸೋಹಮೆನ್ನದೆ ಮುನ್ನ
ದಾಸೋಹವಿಡಿದು ನಡವುತ ಬಂದರೋ ||೧||

ಇಪ್ಪತ್ತೈದು ಬಾಲೆಯರೆಲ್ಲರೂ ಕೂಡಿ
ತಪ್ಪದೆ ಕಳಸ ಕನ್ನಡಿವಿಡಿದು
ಒಪ್ಪವಿಡುತ ಶೃಂಗಾರದ ಗರಿಗಟ್ಟಿ
ಇಪ್ಪರು, ಮದುವೆಯ ತಿಂಥಿಣಿ ನೋಡಿರೇ ||೨||

ಮುತ್ತೈದೆಯರೆಂಬ ತತ್ವವೆಣ್ಣುಗಳು
ನಿತ್ಯ ಸೋಭನದೊಸಗೆಯ ಪಾಡುತಲಿ
ಸತ್ಯ ಸಹಜವೆಂಬ ಜ್ಯೋತಿಯಾರತಿಗಳ
ನಿತ್ಯದಲ್ಲಿ ಪಿಡಿದರು ನೋಡಿರೇ ||೩||

ಆದಿ ಮದವಣಿಗಗೆ ಬ್ರಹ್ಮದ ಬಾಸಿಗ
ನಾದಿ ಮದವಳಿಗಗಾತ್ಮದೊಂಡಿಲಗಟ್ಟಿ
ವೇದವಜಿಯದಾದಿಯ ಸಾಕ್ಷಿಯನಿಟ್ಟು
ಸಾದರದಿಂ ಕೈಗೂಡಿಸಿದರೋ ||೪||

ಪರಕೆ ಪರಾನಂದ, ಉಪಮೆಗುಪಮಾತೀತ
ನಿರತ ನಿರ್ವಾಣ ನಿಶ್ಚಿಂತಪದ

ಸ್ಥಿರಕಲ್ಯಾಣ ಬೋಳೇಶಲಿಂಗ ನಿ-
ಮ್ಮಿರವ ಬಣ್ಣಿಸಬಲ್ಲವರಾರೋ ॥೫॥

(ನಿರ್ವಾಣ ಬೋಳೇಶ)

ಈ ಸ್ವರವಚನಕಾರರ ಆತ್ಮಾನುಭಾವದಷ್ಟೇ ಉಜ್ವಲವಾಗಿ ಮೂಡಿಬಂದಿದೆ ಲೋಕಾನುಭವ. ಈ ಅನುಭಾವಿಗಳ ಲೋಕನಿರೀಕ್ಷಣೆ ಅತ್ಯಂತ ಸೂಕ್ಷ್ಮವೂ ವಾಸ್ತವವೂ ಆದುದಾಗಿರುತ್ತದೆ. ಈ ಲೋಕಾನುಭವದ ವಾಸ್ತವಿಕತೆಯ ಚಿತ್ರಣ ಈ ಕೆಳಗಿನ ಸ್ವರವಚನದಲ್ಲಿ ಹೀಗೆ ಅರಳಿನಿಂತಿದೆ. ಉದಾಹರಣೆ-ಧರ್ಮವರದ ಪೇಟೆ:

ಕರ್ಮವ ಕಳೆದು ನಿರ್ಮಲಭಕ್ತಿ ಸುಜ್ಞಾನ
ಧರ್ಮವರದ ಪೇಟೆಯ ಬೆವಹಾರ ॥ಪಲ್ಲ॥

ಅಷ್ಟದಿಕ್ಕೈವತ್ತಾಱು ನವಖಂಡ ದೇಶಕ್ಕೆ
ಮೊಟ್ಟಮೊದಲಿಗ ಇಷ್ಟಲಿಂಗಣ್ಣ ಸೆಟ್ಟಿ
ಪಟ್ಟಣಪ್ರಜೆ ಸಾಲುಮೂಲೆ ಸರ್ವರಿಗೆಲ್ಲ
ಕಟ್ಟನಿಕ್ಕುವ ವೀರಭದ್ರಸೆಟ್ಟಿ ॥೧॥

ಊರಾದಿ ಕೊಳಗ ನಾಡಿನ ಬಳ್ಳಗಳ ಸರಿ
ಮಾನದಳತೆಯ ಲೆಕ್ಕದ ಪೇಟೆಗೆ ಹೇಱು
ಮೂಱಿಡೆ ತಾಕುವ ದಾರಿ ನೂಱೊಂದು
ಮೂಱೂಱು ಸುಂಕ ಮೂವತ್ತಾಱುನುಪು ॥೪॥

ಇನ್ನೂಱು ಹದಿನಾಱೆತ್ತಿನ ಸಂಗ್ರಹವಿದು
ಚೆನ್ನಬಸೆಟ್ಟಿಯಾಡಿದ ಬೇಹಾರ
ಹೊನ್ನ ಬಣ್ಣದ ಚೆನ್ನವೀರೇಶ ಮೊದಲಿಗ
ಮುನ್ನಿನ ಹಿರಿಯರಾಡಿದ ಬೇಹಾರ ॥೧೧॥

ಹಿಡಿದ ಛಲ ದೃಢದಿಂದ ಬಿಡದೆ ಬೇಹರವಾಡಿ
ಕೊಡುವುದೊಂದು ಲಕ್ಷ, ಕೊಂಬುದೊಂದು ಲಾಭವು
ಎಡೆವಿಡದಾತನೊಳೊಡಗೊಂಡ ಬೆವಹಾರ
ಮೃಡನ ಗಣಂಗಳಾಡಿದ ಬೆವಹಾರ ॥೩೧॥

(ಗುರುಬಸವ)

ಈ ಯುಗದ ಸ್ವರವಚನಗಳನ್ನು ಕೆಲವೊಮ್ಮೆ ಬೆಡಗಿನ ರೂಪದಲ್ಲಿ ಸಾಂಕೇತಿಕಾರ್ಥದಲ್ಲಿ ರಚಿಸಲಾಗಿದೆ. ಅನುಭಾವ, ತತ್ವ, ಯೋಗ ಮೊದಲಾದ ಗಹನ-ಗಂಭೀರ ವಿಷಯಗಳನ್ನು ಈ ಅನುಭಾವಿಗಳು ಪರಿಚಿತ ಪ್ರಾಣಿ, ಪಕ್ಷಿ, ವ್ಯಕ್ತಿ, ವಸ್ತು, ಪ್ರಕೃತಿ ಮೊದಲಾದ ಸಂಕೇತ ಹಾಗೂ ರೂಪಕಗಳ ಮೂಲಕ ಸುಲಭಗ್ರಾಹ್ಯವಾಗುವಂತೆ

ವಿವರಿಸಿದ್ದಾರೆ. ಇದರಿಂದ ಯೋಗ, ಆಧ್ಯಾತ್ಮದಂಥ ಕಠಿಣ ವಿಷಯಗಳು ಸಾಮಾನ್ಯರಿಗೂ ಅರ್ಥವಾಗತೊಡಗಿದವು. ಇದು ಈ ಸ್ವರವಚನಗಳ ಇನ್ನೊಂದು ವೈಶಿಷ್ಟ್ಯ.

ಒಟ್ಟಿನಲ್ಲಿ ನೂರೊಂದು ವಿರಕ್ತಯುಗದ ಸ್ವರವಚನಕಾರರು ಸೃಷ್ಟಿಸಿದ ಸ್ವರವಚನಗಳನ್ನು ಸಮಾಜೋದ್ಧಾರಕ್ಕಿಂತ ಆತ್ಮೋದ್ಧಾರವನ್ನು ಪ್ರತಿಪಾದಿಸುವ ಸಾಹಿತ್ಯ ಎಂದು ಕರೆಯಬಹುದಾಗಿದೆ. ಇದು ಪ್ರಮುಖವಾಗಿ "ಮುಮುಕ್ಷು ಸಾಹಿತ್ಯ". ಸಾಹಿತ್ಯ ಮಾಧ್ಯಮದ ಮೂಲಕ ಅವರು ಈ ಮಹಾಮಣಿಹವನ್ನು ಪೂರೈಸಿಕೊಟ್ಟರು. ಭಕ್ತಿ-ಜ್ಞಾನ-ವೈರಾಗ್ಯ-ಯೋಗ-ಮುಕ್ತಿಪರವಾದ ಈ ಸಾಹಿತ್ಯಕ್ಕೆ ರಾಗ-ತಾಳಗಳ ಮೂಲಕ ಸಂಗೀತವನ್ನು ಸಂಯೋಜಿಸಿ ಸ್ವರವಚನಗಳು ಜನಪರವಾಗುವಂತೆ ನೋಡಿಕೊಂಡುದು ಈ ಯುಗದ ವೈಶಿಷ್ಟ್ಯವೆನಿಸಿದೆ.



# ತೋಂಟದ ಸಿದ್ಧಲಿಂಗಯುಗದ ಸ್ವರವಚನಸಾಹಿತ್ಯ

*ವೈ.ಸಿ. ಭಾನುಮತಿ*

ವೀರಶೈವ ಧಾರ್ಮಿಕ ಇತಿಹಾಸದ ಮೂರನೆಯ ಘಟ್ಟದಲ್ಲಿ ಬಂದ ತೋಂಟದ ಸಿದ್ಧಲಿಂಗಯತಿಗಳು ಶ್ರೇಷ್ಠ ಅನುಭಾವಿಗಳು. ನೂರೊಂದು ವಿರಕ್ತರು ಆಗಿ ಹೋದ ಬಳಿಕ ಹಾಗೂ ಅದೇ ಕಾಲದಲ್ಲಿ ರಾಜಕೀಯವಾಗಿ ವಿಜಯನಗರದ ಪತನ ಕಾರಣವಾಗಿ ಮಧ್ಯಕಾಲೀನ ಸಮಾಜದಲ್ಲಿ ಉಂಟಾಗಿದ್ದ ಗೊಂದಲ ತಲ್ಲಣ ತಳಮಳಗಳಿಂದಾಗಿ ಒಂದು ರೀತಿಯ ಶೂನ್ಯ ಆವರಿಸಿತ್ತು. ಇಂಥ ಸನ್ನಿವೇಶದಲ್ಲಿ ಇವರು ಜನ್ಮತಳೆದರು.

ತೋಂಟದ ಸಿದ್ಧಲಿಂಗಯುಗದ ಸ್ವರವಚನಸಾಹಿತ್ಯವನ್ನು ಅಧ್ಯಯನಕ್ಕೆ ಎತ್ತಿಕೊಳ್ಳುವ ಮುನ್ನ ಇವರ ಕಾಲವನ್ನು ಸ್ಪಷ್ಟಪಡಿಸಿಕೊಳ್ಳುವುದು ಅವಶ್ಯಕ. ಇವರ ಕಾಲವನ್ನು ಕುರಿತಂತೆ ಕವಿಚರಿತೆಕಾರರಿಂದ ಕಲಬುರ್ಗಿಯವರ ವರೆಗೆ ಅನೇಕ ವಿದ್ವಾಂಸರು ಚರ್ಚಿಸಿದ್ದಾರೆ. ಕ್ರಿ. ಶ. ೧೨೮೧-೧೫೩೦ರ ವರೆಗೆ ಎಳೆದಾಡುತ್ತಿದ್ದ ಇವರ ಕಾಲವನ್ನು ಕಲಬುರ್ಗಿಯವರು ಪೂರ್ವ ವಿದ್ವಾಂಸರ ಚರ್ಚೆಗಳನ್ನು ಗಮನಿಸಿ ತಮಗೆ ದೊರೆತ ನೂತನ ಆಕರಗಳ ಬೆಂಬಲದಿಂದ ಕ್ರಿ. ಶ. ೧೫೬೧ ಎಂದು ತೀರ್ಮಾನಿಸಿದ್ದಾರೆ. ಇವರು ಮಂಡಿಸುವ ವಾದ ಹೀಗಿದೆ: ಬಿಜ್ಜಾವರದ ಅರಸನನ್ನು ಕೇಂದ್ರವಾಗಿಟ್ಟುಕೊಂಡು ರಚಿತವಾದ ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯದಲ್ಲಿ ಈ ರಾಜನು ತೋಂಟದ ಸಿದ್ಧೇಶ್ವರರ ಪ್ರಸಾದದಿಂದ ಜನಿಸಿದನೆಂದೂ ಈತನ ಪುತ್ರ ಮುಮ್ಮಡಿ ಚಿಕ್ಕಭೂಪಾಲನಿಗೆ ತೋಂಟದಾರ್ಯರ ಶಿಷ್ಯ ಬೋಳಬಸವೇಶ ರಾಜ್ಯಪಟ್ಟ ಕಟ್ಟಿದನೆಂದೂ ಉಕ್ತವಾಗಿದೆ. ಆದುದರಿಂದ ತೋಂಟದಾರ್ಯರು ಇಮ್ಮಡಿ ಚಿಕ್ಕಭೂಪಾಲನ ಹಿರಿಯ ಸಮಕಾಲೀನರಾಗುವರು. ಇಮ್ಮಡಿ ಚಿಕ್ಕಭೂಪಾಲನ ಆಶ್ರಯದಲ್ಲಿ ರಚಿತವಾದ ಸಾಹಿತ್ಯ ಕೃತಿಗಳ ಪೈಕಿ ಅಮೃತೇಶ್ವರ ಭಾಷ್ಯದ ಕಟ್ಟಿನಲ್ಲಿ "ರೌದ್ರಿ ಸಂವತ್ಸರದ ಶ್ರಾವಣ ಶುದ್ಧ ೧೧ ರಲ್ಲು" ಎಂಬ ಕಾಲಸೂಚನೆಯಿದ್ದು ಅದು ಕ್ರಿ. ಶ. ೧೫೬೧ಕ್ಕೆ ಸರಿಹೊಂದುವುದರಿಂದ ಸಿದ್ಧೇಶ್ವರಪುರಾಣದ ಕಾಲವಾದ ೧೫೬೧ರಲ್ಲಿ ಬದುಕಿದ್ದ ಗುರು ತೋಂಟದಾರ್ಯರು, ಚೆನ್ನಬಸವಪುರಾಣ ಕಾಲವಾದ ೧೫೮೪ಕ್ಕೆ ಮೊದಲು ತೀರಿಕೊಂಡಿದ್ದಾರೆ ಎಂಬುದು ಕಲಬುರ್ಗಿಯವರ ನಿರ್ಣಯದ ಸಾರಾಂಶ.

ಪ್ರಸ್ತುತ ಕ್ರಿ. ಶ. ೧೫೦೦ರಿಂದ, ೧೬೦೦ ರವರೆಗಿನ ಅವಧಿಯಲ್ಲಿ ಬದುಕಿದ್ದ ಸ್ವರವಚನಕಾರರನ್ನು ಈ ಪ್ರಬಂಧದ ಕಕ್ಷೆಗೆ ಒಳಪಡಿಸಿದೆ. ಇವರಲ್ಲಿ ಕಾಲ ಸ್ಪಷ್ಟವಿರುವ

ಮತ್ತು ಕಾಲ ಸುಮಾರಾಗಿ ತಿಳಿದಿರುವ ಸ್ವರವಚನಕಾರರನ್ನು ಮಾತ್ರ ಸ್ವೀಕರಿಸಿದೆ. ಬಹಳಷ್ಟು ಸ್ವರವಚನಕಾರರ ಕರ್ತೃ ಕಾಲವಿಚಾರಗಳು ಅವಿದಿತವಾಗಿರುವುದರಿಂದ ಆತ್ಯಂತಿಕವಾಗಿ ಈ ಅವಧಿಯಲ್ಲಿ ಇಂತಿಷ್ಟೆ ಸ್ವರವಚನಕಾರರು ಕಂಡುಬಂದಿದ್ದಾರೆಂದು ಖಚಿತವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಸದ್ಯದಲ್ಲಿ ಕವಿಲಿಂಗ, ಜಿಗುನಿಮರುಳದೇವ, ಕಂಬಾಳದ ಶಾಂತಮಲ್ಲೇಶ, ಸಿದ್ಧಲಿಂದ, ಗಂಗೇಶ, ಶಂಕರದೇವ, ನಿಜಗುಣಶಿವಯೋಗಿ, ಮುಪ್ಪಿನ ಷಡಕ್ಷರಿ, ಕಾರುಗಹಳ್ಳಿ ಶಾಂತಯ್ಯ ಇವರ ಸ್ವರವಚನಗಳನ್ನು ಪರಿಶೀಲಿಸಿದೆ.

ಯಾವುದೆ ಕವಿಕೃತಿಯನ್ನು ಅಭ್ಯಾಸ ಮಾಡುವ ಮೊದಲು ಕವಿ-ಕಾಲವಿಚಾರಗಳನ್ನು ತಿಳಿದುಕೊಳ್ಳುವುದು ಅಗತ್ಯ ಮತ್ತು ಅನಿವಾರ್ಯ. ಅಂತೆಯೇ ಈ ಯುಗದ ಸ್ವರವಚನಕಾರರ ಇತಿವೃತ್ತಗಳತ್ತ ನೋಟ ಹಾಯಿಸಬಹುದು. ಕವಿಲಿಂಗ ವಿಜಯನಗರದ ಸಾಳುವ ನರಸಿಂಹನ ಆಸ್ಥಾನದಲ್ಲಿದ್ದ. ಈತನ ಕೆಲವು ಹಾಡುಗಳಲ್ಲಿ ನರಸಿಂಹನ ಉಲ್ಲೇಖವಿದ್ದು ಅದು ಈತನ ಕಾಲವನ್ನು ಕ್ರಿ. ಶ. ೧೪೯೦ ಎಂದು ನಿರ್ಧರಿಸುವಲ್ಲಿ ಸಹಾಯಕವಾಗಿದೆ. ಕವಿಲಿಂಗ ಹದಿನೈದನೆಯ ಶತಮಾನದ ಅಂತ್ಯ ಹಾಗೂ ಹದಿನಾರರ ಹೊಸ್ತಿಲಲ್ಲಿ ನಿಂತಿರುವುದನ್ನು ಗಮನದಲ್ಲಿಟ್ಟುಕೊಂಡು ಸಿದ್ಧಲಿಂಗಯತಿಯ ಹಿರಿಯ ಸಮಕಾಲೀನನಾಗಿ ಇಲ್ಲಿ ಸ್ವೀಕರಿಸಿದೆ. ಈತನ ಆರಾಧ್ಯದೈವ ಮತ್ತು ಅಂಕಿತ ಕಪಿನಿಪತಿ ನಂಜುಂಡ. ಈ ನಂಜುಂಡನ ನೆಲೆಯಾದ ನಂಜನಗೂಡು ಕವಿಯ ಸ್ಥಳವಿರಬಹುದು.

ತೋಂಟದ ಸಿದ್ಧಲಿಂಗಯುಗದ ಸ್ವರವಚನಗಳ ವಸ್ತು ಅಷ್ಟಾವರಣ, ಷಟ್ಸ್ಥಲ, ಲೋಕನೀತಿ, ಭಕ್ತಿ, ಶಿವಪಾರಮ್ಯ ಎಂದು ಸ್ಥೂಲವಾಗಿ ಹೇಳಬಹುದಾದರೂ ಭಿನ್ನತೆಗಳು ಗೋಚರಿಸುತ್ತವೆಂಬುದನ್ನು ಮರೆಯುವಂತಿಲ್ಲ. ಹೀಗಾಗಿ ಸಾಮಾನ್ಯ ಅಂಶಗಳ ಜೊತೆಗೆ ಕವಿಯ ವೈಯಕ್ತಿಕ ಛಾಪು ಮೂಡಿಸುವ ವಿಶಿಷ್ಟ ಅಂಶಗಳನ್ನು ಸ್ವರವಚನಗಳಲ್ಲಿ ವಿರಳವಾಗಿಯಾದರೂ ಗುರುತಿಸಬಹುದು. ಪ್ರಸ್ತುತ ಕವಿಲಿಂಗ ಸು. ೫೦ ಹಾಡುಗಳನ್ನು ರಚಿಸಿದ್ದಾನೆ. ಈತನ ಹಾಡುಗಳಲ್ಲಿ ಪ್ರತಿಪಾದಿತವಾಗಿರುವ ಸತಿಪತಿಭಾವ ರಾಣಿವಾಸದ ನೆಲೆಯಿಂದ ರೂಪುಗೊಂಡಿರುವಂತೆ ತೋರುತ್ತದೆ. ಇವುಗಳ ಬಾಹ್ಯರೂಪ ಶೃಂಗಾರವಾದರೂ ಅದನ್ನು ವೈವಿಧ್ಯಮಯವಾಗಿ ತಂದಿರುವುದು ಈತನ ಹೆಗ್ಗಳಿಕೆ. ಶೃಂಗಾರಕ್ಕೆ ಪೂರಕವಾದ ವಸಂತಾಗಮನವನ್ನು

ಓಲೆ ಬಂದಿದೆ ಕಾವರಾಯ ಕಟ್ಟಾಳು ತಂಬೆಲರ್ನಟ್ಟಿದನೆಂದು
ಬಂದು ತಂಬೆಲರು ಹರಿಚಂದ್ರನೋಲೆಯ
ತಂದು ವಸಂತಗೀಯಲು ಕೂಡೆ
ಚಂದ್ರಿಕೆದೆರೆದರಗಿಳಿ ಮೆಲ್ಲನೋದಲು ಅದ
ರಂದವನೇನ ಬಣ್ಣಿಪೆನಮ್ಮ

ಎಂಬ ಹಾಡಿನಲ್ಲಿ ಆ ಕಾಲದ ಪತ್ರಲೇಖನದ ಮಾದರಿಯನ್ನು ಕಾಣಬಹುದು. ಕವಿಲಿಂಗನ ಬಹುತೇಕ ಹಾಡುಗಳು ಕಾಮಶಾಸ್ತ್ರದ ಪರಿಭಾಷೆಯಲ್ಲಿವೆ. ಕಾಯಜ ಮೋಹನ ರಾಜ್ಯವನ್ನು ಕವಿಲಿಂಗನಿಗೆ ಅಮರಮಾಗಣೆಯಾಗಿ ಕೊಟ್ಟನೆಂದು ಹೇಳುವ ಒಂದು ಹಾಡಿನಲ್ಲಿ ದೇಶ

ಪಟ್ಟಣ ಹೋಬಳಿ ಸುಂಕ ಕಾಣಿಕೆ ದಾನ ಮಾನ್ಯ ಆಜ್ಞೆ ಮೈಗಾವಲಾಳು ಕಪ್ಪ ಮುಂತಾದ ತಾಂತ್ರಿಕ ಪದಗಳು ಶೃಂಗಾರ ಚಟುವಟಿಕೆಗೆ ಸಂಕೇತವಾಗಿ ಬಂದಿವೆ. ದಾಸರ ಕೀರ್ತನೆಗಳ ಹೊಳಪುಗಳು ಕ್ವಚಿತ್ತಾಗಿ ಗೋಚರಿಸುವುದುಂಟು. "ಗಿಳಿಯು ಪಂಜರದೊಳಗಿಲ್ಲ ರಾಮರಾಮ" ಎಂಬ ಕೀರ್ತನೆಯನ್ನು ಕವಿಲಿಂಗ "ಗಿಳಿಯು ಪಂಜರದೊಳಿಲ್ಲ ಶಿವಶಿವಾ" ಎಂದು ವೀರಶೈವಕ್ಕೆ ರೂಪಾಂತರಿಸಿದ್ದಾನೆ. ಶೃಂಗಾರ ಸಂದರ್ಭದಲ್ಲಿ ಸೇರಿರುವ ವನಿತೆಯರು ಕವಿಲಿಂಗನಿಗೆ ಕಾಮನ ಜಾತ್ರೆಯ ಸಂದಣಿಯಂತೆ ತೋರುತ್ತದೆ. ಇಲ್ಲಿ ಹರಕೆ ಸಲ್ಲಿಸುವುದು, ಬೇವಿನುಡಿಗೆ ಉಟ್ಟು ಹೂವಿನ ಹೆಡಗೆ ಹೊರುವುದು, ದೀವಟಿಗೆ, ಸಿಡಿ, ಹಗ್ಗ, ಹುರಿ ಮೊದಲಾದ ವಿವರಗಳು ಸಿಡಿ ಆಡುವ ಸಂಪ್ರದಾಯವನ್ನು ದಾಖಲಿಸುತ್ತವೆ. ಹೀಗೆ ಕವಿಲಿಂಗನ ಹಾಡುಗಳು ಶೃಂಗಾರದ ಪಾತಳಿಯಲ್ಲಿಯೆ ಸಾಗಿದರೂ ಸಮಕಾಲೀನ ಅಂಶಗಳ ಸೇರ್ಪಡೆಯಿಂದಾಗಿ ಅಪೂರ್ವ ರೀತಿಯಲ್ಲಿ ಕಂಗೊಳಿಸಿವೆ.

ಜಿಗುನಿ ಮರುಳದೇವರು ತೋಂಟದ ಸಿದ್ಧಲಿಂಗರ ನೇರ ಶಿಷ್ಯರೆಂಬುದು ಚೆನ್ನಬಸವಪುರಾಣದಿಂದ ಸ್ಪಷ್ಟವಾಗುತ್ತದೆ. ಇಲ್ಲಿ ಉಕ್ತವಾದ ಜಿಗುನಿ ಬೆಂಗಳೂರು ಜಿಲ್ಲೆಯಲ್ಲಿದೆ. ಮರುಳದೇವರ ಕಾಲ ಕ್ರಿ. ಶ. ೧೫೫೦. ಈತನ ಅಂಕಿತ ನಿಜಗುರುಸಿದ್ಧಶಾಂತ. ಸದ್ಯದಲ್ಲಿ ಈತನ ೧೫೭ ಹಾಡುಗಳು ದೊರೆತಿವೆ. ಹಾಡುಗಳಷ್ಟೆ ಅಲ್ಲದೆ ಚಿತ್ರಿಯಾ ಸಂಗ್ರಹ ಮರುಳದೇವರ ಕಂದ ಎಂಬ ಕೃತಿಗಳನ್ನು ಬರೆದಿದ್ದಾನೆ.

ತೋಂಟದ ಸಿದ್ಧಲಿಂಗಯತಿಯ ವ್ಯಕ್ತಿತ್ವ ಅನೇಕ ಶರಣರಿಗೆ ಸ್ಫೂರ್ತಿಯ ಸೆಲೆಯಾಗಿತ್ತು. ಆದುದರಿಂದ ಅವರನ್ನು ವಸ್ತುವಾಗಿಟ್ಟುಕೊಂಡು ಅನೇಕ ಸ್ವರವಚನಗಳು ಹೊರಬಂದವು. ಬಸವಣ್ಣನವರನ್ನು ಹೊರತುಪಡಿಸಿದರೆ ಇಷ್ಟು ದೊಡ್ಡ ಪ್ರಮಾಣದಲ್ಲಿ ಹಾಡುಗಳು ದೊರೆಯುವುದು ಸಿದ್ಧಲಿಂಗರಿಗೆ ಮಾತ್ರ. ಇವರ ತರುವಾಯದಲ್ಲಂತು ಇವರನ್ನು ಕೇಂದ್ರವಾಗಿಟ್ಟುಕೊಂಡು ಕೋಲುಪದಗಳು ಮಂಗಳಾರತಿ ಹಾಡುಗಳು ಸ್ತುತಿರೂಪದ ಹಾಡುಗಳ ಮಹಾಪೂರವೆ ಹರಿದುಬಂದಿದೆ. ಸಮಕಾಲೀನರಲ್ಲಿ ತೋಂಟದ ಸಿದ್ಧಲಿಂಗಯತಿಗಳ ಶಿಷ್ಯರಾದ ಜಿಗುನಿ ಮರುಳದೇವರು ರಚಿಸಿದ ಒಂದು ಹಾಡು ಆತನ ಭವ್ಯ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ

> ಯೋಗಿ ಬಂದ ಕಾಣೆಯಮ್ಮ ರಾಗ ವಿ
> ರಾಗ ವಿದೂರ ಜಂಗಮಲಿಂಗ ಬಂದ ಕಾಣೆ
> ಸುರುಚಿರ ಬ್ರಹ್ಮಾಂಡಗಳೆಯಕಟ ಬಂ
> ಧುರ ದಿವ್ಯದೇಹದೊಳಖಿಳಲೋಕ
> ಅರರೆ ಗಗನವಾನನ ದಿಕ್ಕುಗಳೆ ತೋಳು
> ವರ ಚಂದ್ರಸೂರ್ಯರೆಸೆವ ಕಂಗಳ ಚೆಲ್ವಯೋಗಿ

ಎಂದು ಆರಂಭಗೊಳ್ಳುವ ಹಾಡು ಪುರಂದರದಾಸರ "ದೇವ ಬಂದ ನಮ್ಮ ಸ್ವಾಮಿ ಬಂದ" ಎಂಬ ಕೀರ್ತನೆಯನ್ನು ನೆನಪಿಗೆ ತರುತ್ತದೆ. ಈ ಭೂಮಂಡಲವನ್ನೆಲ್ಲ ಸಿದ್ಧಲಿಂಗರು ವ್ಯಾಪಿಸಿರುವಂತೆ ಕವಿಗೆ ಭಾಸವಾಗುತ್ತದೆ-

ಎಸೆವ ಪಾತಾಳವೆ ಚರಣ ಮೇಘಾಳಿರಂ
ಜಿಸಿ ತೋರ್ಪ ಜಡೆ ಶೂನ್ಯಲಿಂಗವಾಂತು
ಶಶಿವೆಳಗಿನ ಭಸ್ಮಾಂಗ ವೇದಾಗಮ
ವಿಸರಂಗಳೆ ಕ್ರಿಯಾಕಾರವಾಗಿಹ
ಹೊಳೆವ ತಾರೆಗಳೆ ಕುಸುಮಾಕ್ಷಮಾಲೆಯೆ
ಕುಲಗಿರಿ ಸಾಗರ ಜಲಪಾತ್ರೆಯು
ಸಲೆ ಸ್ಥಿತಿ ಸೃಷ್ಟಿ ಮಾಯದ ಕಂಥೆ ಪೀಠವೆ
ನೆಲನಹೋರಾತ್ರೆಯ ಗುಹೆಯಿವನಿಗೆ ದಿವ್ಯಯೋಗಿ

ಎಂದು ಆ ಅದ್ಭುತ ವ್ಯಕ್ತಿತ್ವಕ್ಕೆ ಅನುಗುಣವಾದ ಶಬ್ದಚಿತ್ರವನ್ನು ಕಟ್ಟಿಕೊಡಲಾಗಿದೆ. ಇಂಥ ಯೋಗಿಗೆ ಆರು ಋತುಗಳೆ ಷಟ್ಸ್ಥಲಗಳು, ಶೇಷನೆ ಉಡಿದಾರ, ಅತಿಶಯವಾದ ಜ್ಞಾನಮುದ್ರೆಯ ವಾಙ್ಮಯ, ತ್ರಿಕಾಲಜ್ಞಾನವೆ ಸೌಭಾಗ್ಯ, ಮೇರುವೆ ದಂಡ, ಸುಗುಣನೆ ಪಾತ್ರೆ, ರೋಮಾಳಿಗಳೆ ವನಸ್ಪತಿ, ಸಿದ್ಧಲಿಂಗಯತಿಗಳು ಬಸವ ಮೊದಲಾದ ಶರಣರ ಹೃದಯಾಂಗಳದಲ್ಲಿ ಸಂಚರಿಸಿ ಭಕ್ತಿಭಿಕ್ಷೆ ಬೇಡುತ್ತ ಬಂದರೆಂಬಂತೆ ಚಿತ್ರಿಸಲಾಗಿದೆ.

ವೀರಶೈವಸಿದ್ಧಾಂತ ಅದರಲ್ಲಿಯೂ ಮುಖ್ಯವಾಗಿ ಷಟ್ಸ್ಥಲಗಳ ಪ್ರತಿಪಾದನೆಗೆ ಸಿದ್ಧಲಿಂಗರು ತಮ್ಮ ವಚನಗಳಲ್ಲಿ ಆದ್ಯತೆ ನೀಡಿದರು. ಇವರ ಪ್ರಭಾವ ಆ ಕಾಲದ ಸ್ವರವಚನಕಾರರ ಮೇಲೆ ನಿಚ್ಚಳವಾಗಿತ್ತು. ಈ ಹಿನ್ನೆಲೆಯಲ್ಲಿ ಆ ಕಾಲದ ಸ್ವರವಚನಕಾರರು ಅದರಲ್ಲಿಯೂ ಜಿಗುನಿ ಮರುಳಾರ್ಯರಂಥವರು ಈ ಬಗೆಯ ಶಾಸ್ತ್ರನಿರೂಪಣೆಗೆ ಒತ್ತುಕೊಟ್ಟರು. ಇಷ್ಟಲಿಂಗಧಾರಣೆ ವೀರಶೈವದ ವೈಶಿಷ್ಟ್ಯಗಳಲ್ಲಿ ಒಂದು. ಶಿವನಿಗಿಂತ ಹಿರಿದಾದ ಸ್ಥಾನ ಇಷ್ಟಲಿಂಗಕ್ಕಿದೆ. ಕರಸ್ಥಲದಲ್ಲಿ ಲಿಂಗವಿರಲು ಕಂಗೆಡುವುದೇಕೆ ಮನವೆ ಎಂದು ಕೇಳುವ ಜಿಗುನಿ ಮರುಳದೇವರು "ಮಂಗಳಾತ್ಮಕ ಪರಮಲಿಂಗವ ತ್ರಿಕಾಲದೊಳು ಹಿಂಗದರ್ಚಿಪುದು" ಎಂದು ಹೇಳುತ್ತಾರೆ. ಲಿಂಗದ ನೆನಪಿನಿಂದ ಪುಳಕಗೊಳ್ಳುವ ಭಕ್ತನ ಆನಂದವನ್ನು ಸೊಗಸಾಗಿ ದಾಖಲಿಸುತ್ತಲೆ ಲಿಂಗವು ಹೇಗೆ ಭಕ್ತಿ ಯುಕ್ತಿ ಶಕ್ತಿ ಮುಕ್ತಿ ದೊರಕುವಂತೆ ಮಾಡಿದೆ, ಲಿಂಗದ ಕಾರಣವಾಗಿ ಮದ ಅಡಗಿ ಅಪೂರ್ವವಾದ ಬೆಳಗು ಎಂತು ಆವರಿಸುತ್ತಿದೆ, ಭ್ರಾಂತಿ ಅಳಿದು ಯಾವ ರೀತಿ ಶಾಂತಿ ದೊರಕೊಳ್ಳುತ್ತಿದೆ ಎಂಬುದನ್ನು ವಿಶದಪಡಿಸಿದ್ದಾರೆ.

ವೀರಶೈವದಲ್ಲಿ ಜಂಗಮನನ್ನು ಲಿಂಗಕ್ಕಿಂತ ಅಧಿಕವೆಂದು ಪರಿಗಣಿಸುವರು. ಶಿವನೆ ಸದ್ಭಕ್ತ, ಸದ್ಭಕ್ತನೆ ಶಿವ ಇವರಿಬ್ಬರ ಅದ್ವಿರಳ ಕೂಟವೆ ಮಹಾಜಂಗಮ ಎಂಬುದನ್ನು ನಿರೂಪಿಸುವ ಜಿಗುನಿ ಮರುಳದೇವರು "ಜಂಗಮವೆ ಲಿಂಗಕಧಿಕವೆಂದರ್ಚಿಸುವನಾವನವನೆ ಸರ್ವಕ್ಕಧಿಕಂ" ಎಂದು ಜಂಗಮಾರ್ಚನೆಯ ಶ್ರೇಷ್ಠತೆಯನ್ನು ಎತ್ತಿ ಹಿಡಿಯುವ ಸಂದರ್ಭದಲ್ಲಿ ಜಂಗಮಜಗತ್ತಿನ ಶ್ರೇಷ್ಠ ವಸ್ತುಗಳ ಒಂದು ಪಟ್ಟಿಯೇ ದೊರೆಯುತ್ತದೆ. ಜಂಗಮಕ್ಕೆ ಅರ್ಪಿತವಾದ ತೀರ್ಥಪ್ರಸಾದಗಳನ್ನು ಲಿಂಗಕ್ಕೆ ಅರ್ಪಿಸಬಹುದೆ ಎಂಬ ಅವಮಾನ ವ್ಯಕ್ತಪಡಿಸುವವರಿಗೆ

ಚರಲಿಂಗ ಸುಪ್ರಸಾದವೆ ಲಿಂಗಕರ್ಪಿತವು
ಚರಣಜಲವೆ ಲಿಂಗಕಭಿಷೇಕ

ಎಂದು ಆಗಮಪುರಾಣಗಳಿಂದ ಸಾಕ್ಷಿಯನ್ನು ಒದಗಿಸಲಾಗಿದೆ. ಹಾಗೂ ಸಂಶಯಪಡುವಂಥವರು ಇಹಪರಗಳಲ್ಲಿ ನೆಲೆಯಿಲ್ಲದೆ ನರಕಕೂಪದಲ್ಲಿ ಬೀಳುವರೆಂಬ ಎಚ್ಚರಿಕೆಯನ್ನೂ ಕೊಡಲಾಗಿದೆ.

ಅಧ್ಯಾತ್ಮ ಸೋಪಾನವನ್ನೇರಲು ಗುರುವಿನ ಮಾರ್ಗದರ್ಶನ ತೀರ ಅಗತ್ಯ ಮತ್ತು ಅನಿವಾರ್ಯ ಎಂಬ ಅಭಿಪ್ರಾಯಕ್ಕೆ ವೀರಶೈವಧರ್ಮ ಕೂಡ ಭಿನ್ನವಾಗಿಲ್ಲ. ಆದುದರಿಂದ ಗುರುವಿನ ಹಿರಿಮೆ ಗರಿಮೆಗಳನ್ನು ಬಿಂಬಿಸುವುದು ಎಲ್ಲ ಸ್ವರವಚನಕಾರರ ಆಶಯವಾಗಿದೆ. ಒಬ್ಬ ಆದರ್ಶ ಶಿಷ್ಯನ ದೃಷ್ಟಿಯಲ್ಲಿ ಗುರು ಯಾವ ಯಾವ ರೂಪದಲ್ಲಿ ಗೋಚರಿಸುವನೆಂಬುದನ್ನು ಹೀಗೆ ಚಿತ್ರಿಸಲಾಗಿದೆ.

ಗುರುವೆ ಪರಮೇಷ್ಠಿ ಗಿರಿಜಾಪತಿ ಪರತತ್ವ
ಗುರು ಶೌರಿ ವೇದ ಶಾಸ್ತ್ರಾಳಿ ತೀರ್ಥಂಗಳು
ಗುರುದೈವವೇ ಬಂಧು ತಂದೆ ತಾಯೆಂದು ತನು ಮನ ಧನಂ ವನಿತಾದಿಯ
ಹರುಷದಿಂದಿತ್ತು ಪರಿಚರ್ಯಂಗಳಂ ಮಾಡಿ
ಪೊರೆದಹಂಕೃತಿಯಡಗಿ ಪರಮ ವಿಶ್ವಾಸದೊಡ
ವೆರೆದು ಗುರುವಾಳನಾಳೆಂಬ ಭಾವತತ್ಪರವಾಗೆ ವರಶಿಷ್ಯನು

ಎಂಬಲ್ಲಿ ಗುರುವಿನ ಬಗೆಗೆ ಭೃತ್ಯಭಾವ ವ್ಯಕ್ತಪಟ್ಟಿದೆ. ಶ್ರೇಷ್ಠ ಗುರುವಿನ ಸಾನ್ನಿಧ್ಯದಲ್ಲಿ ಘೋರಸಂಸಾರದ ಕೋಟಲೆಗಳಿಂದ ಮಾಯಾಮೋಹಗಳಿಂದ ಬಿಡುಗಡೆಗೊಂಡ ಶಿಷ್ಯನೊಬ್ಬನ ಆನಂದದ ಪರಿಯನ್ನು ನಿಜಗುಣರು-

ಏನೆಂದು ಪೇಳುವೆನು ಪರ
ಮಾನಂದವೆನಗಾದ ಹದನಾನಿನ್ನು

ಎಂಬ ಹಾಡಿನಲ್ಲಿ ವ್ಯಕ್ತಪಡಿಸಿದ್ದಾರೆ.

ವೀರಶೈವ ಅಧ್ಯಾತ್ಮದ ಅಂತಿಮ ಮಜಲು ಲಿಂಗಾಂಗ ಸಾಮರಸ್ಯ. ಸಾಧನೆಯ ಹಾದಿಯಲ್ಲಿರುವ ಭಕ್ತನು ಪರಿಪೂರ್ಣತೆಯನ್ನು ಸಾಧಿಸುವುದು ಈ ಹಂತದಲ್ಲಿಯೆ. ಆದುದರಿಂದ ಲಿಂಗಾಂಗ ಸಾಮರಸ್ಯ ವಿಚಾರ ಅನೇಕ ಸ್ವರವಚನಗಳಿಗೆ ವಸ್ತುವಾಗಿದೆ. ಇಂಥ ಸ್ಥಿತಿಯಲ್ಲಿರುವ ಶರಣನಿಗೆ "ಅನ್ಯದಾ ನೆನಹದುಂಟೆ" ಎಂಬ ಉದ್ಗಾರದೊಡನೆ ಆ ಐಕ್ಯಸ್ಥಿತಿಯ ಅನುಭವವನ್ನು ಸ್ಪಷ್ಟವಾಗಿ ದಾಖಲಿಸಿದೆ.

ತೋಂಟದ ಸಿದ್ಧಲಿಂಗಯುಗದ ಸ್ವರವಚನಕಾರರಲ್ಲಿ ಸೂರ್ಯೋದಯದ ವರ್ಣನೆ ಹಲವೆಡೆ ಬಂದಿದೆ. ಶಿಷ್ಟ ಕಾವ್ಯಗಳಲ್ಲಿ ಸೂರ್ಯೋದಯ ಚಂದ್ರೋದಯ ವರ್ಣನೆಗಳು ಅಷ್ಟಾದಶ ಲಕ್ಷಣಗಳಲ್ಲಿ ಒಂದೆಂಬಂತೆ ಮೈದಾಳಿದ್ದರೆ, ಜಿಗುನಿ ಮರುಳದೇವ

ನಿಜಗುಣಶಿವಯೋಗಿ ಮೊದಲಾದವರಲ್ಲಿ ಅವು ಆಧ್ಯಾತ್ಮ ನಿರೂಪಣೆಗೆ ಪೂರಕವಾಗಿ ಬಂದಿರುವುದನ್ನು ಗಮನಿಸಬಹುದು. ಉದಾಹರಣೆಗೆ

ಕವಿದು ಸುಜ್ಞಾನ ಭಾಸ್ಕರನೊಲಿದು ಮೂಡುತಿರೆ
ಭವತಿಮಿರವಿರಲಮ್ಮದೋಡುತಿದೆ ದೆಸೆಗೆಟ್ಟು
ಶಿವಮಂತ್ರ ಜಪವೆಂಬ ವಿಹಗತತಿ ನಲಿವುತಿದೆ ತವೆ ಬಾಡಿ ದುರಿತ ಕುಮುದ
ಅವಿರಳಾನಂದ ಸಾರಸ ನೋಡಿ ನಗುತಲಿವೆ
ನಮ ಭಕ್ತಿಂಭ್ರಮರ ನಲಿದಾಡುತಿವೆ ಸ್ವರಗೂಡಿ
ಜವನ ಭೀತಿಯೆನಿಪ್ಪ ಜೊನ್ನವಕ್ಕಿಗೆ ದುಃಖಮೂಡೆ ಚಿತ್ಸೂರ್ಯನೊಗೆದ ಶಿವನೆ

ಎಂಬ ಸಾಲುಗಳನ್ನು ನೋಡಬಹುದು.

ಸಂಸಾರದ ಅಶಾಶ್ವತೆಯನ್ನು ಅರುಹಿ ಅಧ್ಯಾತ್ಮದ ಕಡೆಗೆ ಒಲಿಯುವಂತೆ ಮಾಡುವುದು ಸ್ವರವಚನಕಾರರ ಉದ್ದೇಶವಾಗಿದೆ. ಸ್ವರವಚನದ ಉದ್ಯಾನದಲ್ಲಿ ಮತ್ತೆ ಮತ್ತೆ ಈ ಅಂಶ ಪ್ರಸ್ತಾಪಿತವಾಗಿದೆ. ಜಿಗುನಿಯವರು ಸಂಸಾರವನ್ನು ಕುರಿತು-

ಕಾರಮೇಘದ ಮಿಂಚು ಘನಸಾರದುರಿ ಮಂಜು
ನೀರ ತರಂಗ ಬುದ್ಬುದವಿಂದ್ರಚಾಪ
ಸೂರ ಮುಂಬನಿ ಮೇಘ ಮಾರುತಾಗ್ರದ ದೀಪ
ವಾರಿಶಿಲೆಯು ಸಂತೆ ಮೃಗತೃಷ್ಣೆ ಶಶಿಯಂದದ

ಎಂದು ಹೇಳಿರುವಲ್ಲಿ ಜೈನಕಾವ್ಯದ ಪ್ರಭಾವವನ್ನು ಗುರುತಿಸಬಹುದು. ಶರಣ ಎಂಬ ಶಬ್ದ ವೀರಶೈವ ಸಾಹಿತ್ಯದಲ್ಲಿ ವ್ಯಾಪಕವಾಗಿ ಬಳಕೆಯಲ್ಲಿದೆ. ಶರಣನೆಂದರೆ ಯಾರು ಎಂಬ ಬಗ್ಗೆ ಜಿಜ್ಞಾಸೆ ನಡೆಸುವ ಜಿಗುನಿಯವರು "ಬಂದುದನತಿಗಳೆಯದೆ ಬಾರದುದನು ತನಗೆಂದೆನ್ನದೆ ನಿಂದವನೆ ಶರಣ" ಎಂದು ಸರಳವಾಗಿ ಸ್ಪಷ್ಟವಾಗಿ ತಿಳಿಸಿದ್ದಾರೆ.

ಕುಲಜಾತಿಗಳ ಬಗೆಗೆ ನಮ್ಮ ಎಲ್ಲ ಶರಣರು ಸಂತರು ವಿಶಾಲ ದೃಷ್ಟಿಯನ್ನು ಹೊಂದಿರುವುದು ಗೊತ್ತಿರುವ ಸಂಗತಿ. ಸಮಾಜದಲ್ಲಿ ಕಂಡುಬರುವ ಜಾತಿಭೇದ ವರ್ಗಭೇದವನ್ನು ಕುರಿತು ಜಾತಿವಾದಿಗಳ ಶರೀರದಲ್ಲಿಯ ಕುಲ ಹದಿನೆಂಟು ಜಾತಿಗಳಿವೆಯೆಂದು ಜಿಗುನಿಯವರು ಮಾರ್ಮಿಕವಾಗಿ ತಿಳಿಸಿದ್ದಾರೆ. ಶಿವಿ ರುದ್ರ, ಶಿರ ಬ್ರಹ್ಮ, ಕಿವಿ ಗೊಲ್ಲ, ಕಣ್ಣು ಕ್ಷತ್ರಿಯ, ಮೂಗು ಬಣಜಿಗ, ತುಟಿ ವೈಶ್ಯ, ಕಂಠ ಕುಂಬಾರ, ಬೆನ್ನು ಅಗಸ, ಎದೆ ಜಿಪ್ಪಿಗ, ಚರ್ಮ ದೇವಾಂಗ, ಕೈ ಕಮ್ಮಾರ, ಮೂಗು ಕ್ಷೌರಿಕ, ಹೊಟ್ಟೆ ಡೊಂಬ, ಒಳದೊಡೆ ನೀಚ, ಮೊಣಕಾಲು ಒಕ್ಕಲಿಗ, ಕಣಕಾಲು ಕುರುಬ, ಮೇಗಾಲು ಮಚ್ಚಿಗ, ಅಂಗಾಲು ಮಾದಿಗ ಎಂದು ಹೇಳಿ ದ್ವಿಜರು ಹೇಗೆ ಶ್ರೇಷ್ಠರಾಗುತ್ತಾರೆಂದು ವಾದಿಸಿದ್ದಾರೆ. ಕಡೆಯಲ್ಲಿ ಶಿವನನ್ನು ಅರ್ಚಿಸುವ ಶ್ವಪಚನೆ ಶ್ರೇಷ್ಠ ಶಿವಭಕ್ತ ಹೀನನಾದ ಬ್ರಾಹ್ಮಣನೆ ಶ್ವಪಚ ಎಂದು ಘೋಷಿಸುವ ಮೂಲಕ ವಚನಕಾರರ ನಿಲುವನ್ನೆ ಬೆಂಬಲಿಸಿದ್ದಾರೆ.

ದಾಸಸಾಹಿತ್ಯ ಮತ್ತು ವೀರಶೈವಸಾಹಿತ್ಯಗಳ ನಡುವೆ ಕೊಳಕೊಡುಗೆಗಳು ನಡೆಯುವುದಕ್ಕೆ ಅನೇಕ ನಿದರ್ಶನಗಳು ದೊರೆಯುತ್ತವೆ. ಕೆಲವೊಮ್ಮೆ ಕೀರ್ತನೆಗಳಲ್ಲಿ ಕಂಡು ಬರುವ ಸಂಗತಿಗಳಿಗೆ ಪ್ರತಿಕ್ರಿಯೆಯೋ ಎಂಬಂತೆ ಸ್ವರವಚನಗಳು ಕಾಣಸಿಕೊಂಡಿರುವುದುಂಟು. ಹರಿದಾಸರು ಹರಿಯ ಬಾಯಲ್ಲಿ ವಿಶ್ವರೂಪದರ್ಶನ ಮಾಡಿಸಿರುವುದಕ್ಕೆ ಸಮಾನಾಂತರವಾಗಿ ಮರುಳದೇವರು ಶರಣನ ಶರೀರದಲ್ಲಿ ಬ್ರಹ್ಮಾಂಡವೆ ಅಡಗಿದೆ ಎಂದಿದ್ದಾರೆ. ಇವರು ಕೋಗಿಲೆಯನ್ನು ಪ್ರತಿಮೆಯಾಗಿಟ್ಟುಕೊಂಡು ಜೀವಾತ್ಮ ಪರಮಾತ್ಮರ ಸಂಬಂಧವನ್ನು ನಿರೂಪಿಸಿರುವ ರೀತಿ ಸೊಗಸಾಗಿದೆ. ಪ್ರಾಯಶಃ ಈ ಒಂದು ಸ್ವರವಚನದ ಪ್ರಭಾವದಿಂದಲೊ ಏನೊ ಇವರ ಶಿಷ್ಯರಾದ ನಿಜಗುಣರು "ಕೋಗಿಲೆ ಚೆಲ್ವ ಕೋಗಿಲೆ ಮುದ್ದು ಕೋಗಿಲೆ ಜಾಣ ಕೋಗಿಲೆ" ಎಂಬ ಸುಪ್ರಸಿದ್ಧ ಹಾಡನ್ನು ರಚಿಸಿರಬೇಕು.

ಭಕ್ತನೊಬ್ಬ ಶಿವನಲ್ಲಿ ತನ್ನ ಅಪರಾಧಗಳನ್ನು ಮನ್ನಿಸಬೇಕೆಂದು ಬಿನ್ನವಿಸಿಕೊಳ್ಳುವಲ್ಲಿ-

ನಿನ್ನೊಳಾವ ಸುಗುಣವಿಹುದು ವಿಚಾರಿಸಿ ನೋಡ
ದೆನ್ನೊಳರಸುವೆ ಲೆಸುಗಳನೇಕೆ ದೇವ

ಎಂದು ಶಿವನ ಅಪರಾಧಗಳ ಒಂದು ಪಟ್ಟಿಯನ್ನೇ ನೀಡಿರುವುದು ಸೊಗಸಾಗಿ ಬಂದಿದೆ. ಹೀಗೆ ಜಿಗುನಿ ಮರುಳಾರ್ಯರು ವೀರಶೈವ ಅನುಭಾವ ಪ್ರಪಂಚದ ಹಲವು ಸಂಗತಿಗಳನ್ನು ಸರಳವಾಗಿ ವಿವರಿಸಿದ್ದಾರೆ.

ಗಂಗೇಶ ಅಂಕಿತದಲ್ಲಿ ಸುಮಾರು ೪೪ ಹಾಡುಗಳನ್ನು ಜಿ. ಎ. ಶಿವಲಿಂಗಯ್ಯನವರು ಪ್ರಕಟಿಸಿದ್ದಾರೆ. ಈ ಅಂಕಿತವು ಕವಿ ಹೊನ್ನನಿಗೆ ಸಲ್ಲುವುದೆಂಬುದು ಇತ್ತೀಚೆಗೆ ಬೆಳಕಿಗೆ ಬಂದ ಸಂಗತಿಯಾಗಿದೆ. ಈತ ಕೆಂಪೇಗೌಡ ಜಯಪ್ರಶಸ್ತಿ, ಅಲ್ಲಮಪ್ರಭು ಸಂಗೀತ ಪದನು ಎಂಬ ಕೃತಿಗಳನ್ನು ರಚಿಸಿದ್ದಾನೆ. ಸ್ವರವಚನದಲ್ಲಿ ಬರುವ ಕಕುದ್ಗಿರಿಯ ಉಲ್ಲೇಖದಿಂದ ಈತನ ಸ್ಥಳ ಶಿವಗಂಗೆಯ ಸಮೀಪದಲ್ಲಿರಬಹುದೆಂದು, ಕಾಲ ಸು. ೧೬೦೦ ಎಂದು ಊಹಿಸಲಾಗಿದೆ. ಗುರುಕೃಪೆ ಲಭಿಸಿದ ಶಿಷ್ಯನ ಅರಿವು ದಿನದಿಂದ ದಿನಕ್ಕೆ ವೃದ್ಧಿಸುವ ಪರಿಯನ್ನು ಈತ ಚಂದ್ರನಿಗೆ ಹೋಲಿಸಿರುವುದಲ್ಲದೆ ಹಲವು ದೃಷ್ಟಾಂತಗಳ ಮೂಲಕ ಸ್ಪಷ್ಟಪಡಿಸಿದ್ದಾನೆ. ಸ್ವರವಚನಗಳಲ್ಲಿ ವೈದಿಕ ವಿರೋಧಿ ಅಂಶಗಳು ಕಾಣಬರುವುದು ಸಾಮಾನ್ಯ. ಆದರೆ ಗಂಗೇಶ ಅಂಕಿತ ಸ್ವರವಚನದಲ್ಲಿ ಮುಸ್ಲಿಮರ ದೈವವಾದ ಅಲ್ಲಾನನ್ನು ಅಲ್ಲಗಳೆಯುವ ಅಂಶವಿದ್ದು ಇದು ಅಂದಿನ ರಾಜಕೀಯ ಧಾರ್ಮಿಕ ಸ್ಥಿತಿಗತಿಯ ಮೇಲೆ ಮುಸಲಮಾನರಿಂದ ಒದಗಿದ ಆಕ್ರಮಣಕಾರಿ ಪ್ರವೃತ್ತಿಗೆ ತೋರಿದ ಪ್ರತಿಭಟನೆಯಾಗಿರಬಹುದು.

ಅಲ್ಲ ಅಲ್ಲವೆಂದು ಗುರುವೆ ನಿಮ್ಮ ಬರಿದೆ
ಬಲ್ಲಿದ ಮುಸಲಮಾನರು ಕರೆವರದೇ ||ಕೊ|| ಪಲ್ಲ

ಜಗವ ಪುಟ್ಟಿಸುವ ಜಗದೊಳಗೆ ಬೆರೆವನಲ್ಲ
ಬಗೆಬಗೆಯ ಭಜನೆಯ ಬಲೆಗೆ ಸಿಕ್ಕುವನಲ್ಲ

ಗಗನಾದಿ ಪಂಚಭೂತದ ರೂಪು ತಾನಲ್ಲ
ಮಿಗೆ ತನ್ನನರಿವರ ಮನಕೆ ಗೋಚರನಲ್ಲ
ಸುಗುಣಾದಿ ರೂಪನಲ್ಲ ಸಕಲರೊಳು ಬೆರೆಸಿಪ್ಪನಲ್ಲ
ನಿಗಮವಿದೂರನಲ್ಲ ವಿಚಾರಿಸೆ ಅನ್ಯನಲ್ಲ

ಎಂದು ಅಲ್ಲಾ, ಭೇದವಾದಿಗಳ ತರ್ಕಕ್ಕೆ ನಿಲುಕದಿರುವ, ಬಿಂದು ಕಳೆಗಳ ರೂಪನ್ನು ಹೊಂದದಿರುವ, ಬ್ರಹ್ಮ ವಿಷ್ಣುಗಳಿಗೆ ಅಗೋಚರನಾಗಿರುವ ಅಂಶಗಳನ್ನು ವಿವರಿಸುತ್ತಲೆ ಅಲ್ಲ ಮತ್ತು ಶಿವರ ವೈದೃಶ್ಯಗಳನ್ನು ಅವಲೋಕಿಸಿ ಶಿವನ ಹಿರಿಮೆಯನ್ನು ಶ್ರುತಪಡಿಸುವ ಕಾರ್ಯವನ್ನು ಏಕಕಾಲಕ್ಕೆ ನಿರ್ವಹಿಸುವ ರೀತಿಯನ್ನು ಕಾಣಬಹುದು.

ಕವಿ ಹೊನ್ನನ ಗಂಗೇಶ ಅಂಕಿತದ ಹಾಡುಗಳು ಮುಖ್ಯವಾಗಿ ಅಷ್ಟಾವರಣ ಮತ್ತು ಶಿವಭಕ್ತಿಗೆ ಸಂಬಂಧಿಸಿವೆ. ಜಂಗಮಸೇವೆ ಜಂಗಮಾರಾಧನೆಗಳನ್ನು ಮಾಡಬೇಕೆಂಬುದನ್ನು ಬಹು ಸರಳವಾಗಿ ನಿರೂಪಿಸಿದ್ದಾನೆ.

ಪೊಸತಪ್ಪ ಸುಖವಹ ವಸ್ತುವೆಲ್ಲವ ತಂದು ನೀಡಬೇಕು
ವಸವಾಭರಣ ವಸ್ತುಗಳು ಬರೆ ಮರೆಯದೆ ನೀಡಬೇಕು
ಹಸನಾದ ನುಡಿಗಳಿಂದಾನಂದವಹ ಮಾತನಾಡಬೇಕು
ಶಶಿಧರ ಗಂಗೇಶ ಜ್ಞಾನ ಜಂಗಮಪೂಜೆ ಮಾಡಬೇಕು

ಎಂದು ಜಂಗಮಕ್ಕೆ ಮನ್ನಣೆ ನೀಡಿದ್ದಾನೆ. ಈತನ ದೃಷ್ಟಿಯಲ್ಲಿ ಸಕಲರಹುದಹುದೆನಲು ನಡೆವನೆ ಶಿವಯೋಗಿ. ಬೇಕೆಂದು ಬಯಸದಿರುವುದೆ ವೈರಾಗ್ಯ. ಇಷ್ಟಲಿಂಗವನ್ನು ಧರಿಸಿ ಅಂಗಲಿಂಗ ಏಕವೆಂದು ತಿಳಿಯುವುದೆ ಶೀಲ. ವಿಭೂತಿಧಾರಣೆಯಿಂದ ಒಂದು ರೀತಿಯ ಸಂಯಮ ಪ್ರಾಪ್ತವಾಗುವದೆಂದು "ಧರಿಸಿಕೊಳ್ಳಿಕೊ ಚಿದ್ವಿಭೂತಿಯ ಹಿರಿದಾದ ಕಾಮಬಾಧೆಗಳಿನಿತಿಲ್ಲ" ಎಂದು ವಿಭೂತಿಮಹಿಮೆಯನ್ನು ಸಾರಿದ್ದಾನೆ. ಮುಕ್ತಿ ಎಂಬುದು ಮರಣೋತ್ತರದಲ್ಲಿ ದೊರೆಯುವಂಥದ್ದು ಎಂಬ ಮಾತನ್ನು ಅಲ್ಲಗಳೆಯುವ ಈತ ಬದುಕಿರುವಾಗಲೆ ಕಾಮಾದಿ ಅರಿಷಡ್ವರ್ಗಗಳನ್ನು ಗೆದ್ದು ಮುಕ್ತಿ ಪಡೆಯುವ ಸಾಧ್ಯತೆಯನ್ನು ಅರುಹುತ್ತಾನೆ.

ಶಂಕರದೇವನ ಇತಿವೃತ್ತದ ಬಗೆಗೆ ಹೆಚ್ಚಿನ ಮಾಹಿತಿ ಲಭ್ಯವಿಲ್ಲ. ಈತನ ಕಾಲ ಚರ್ಚಾಸ್ಪದವಾಗಿದ್ದು ಕ್ರಿ. ಶ. ೧೪೩೦ರಿಂದ ೧೬೦೦ ವರೆಗೆ ಹರಿದಾಡುತ್ತಿದೆ. ಶಂಕರದೇವ ೧೨೪ ಹಾಡುಗಳನ್ನು ರಚಿಸಿದ್ದಾನೆ. ಆತನ ಒಂದು ಹಾಡಿನಲ್ಲಿ ಅನೇಕ ಊರುಗಳ ಉಲ್ಲೇಖವಿದ್ದು ಅವು ವಿಶೇಷವಾಗಿ ಬೆಂಗಳೂರು ತುಮಕೂರು ಜಿಲ್ಲೆಗಳಲ್ಲಿ ಕಂಡುಬರುವುದರಿಂದ ಶಂಕರದೇವ ಈ ಭಾಗದಿಂದ ಬಂದಿರಬೇಕೆಂಬ ಅಭಿಪ್ರಾಯವಿದೆ.

ಸಾಧನೆಯ ಪಥದಲ್ಲಿ ಎದುರಾಗುವ ಅಡಚಣೆಗಳೆಂದರೆ ಹೆಣ್ಣು ಹೊನ್ನು ಮಣ್ಣು ಪಂಚೇಂದ್ರಿಯಗಳು ಅರಿಷಡ್ವರ್ಗಗಳು ನಾಲ್ಕು ಕರಣಗಳು ಎಂಟು ವ್ಯಸನಗಳು ಎಂದು ಗುರುತಿಸುವ ಶಂಕರದೇವನು ಲಿಂಗದೊಡನೆ ಬೆರೆದು ಇವುಗಳನ್ನು ಗೆಲ್ಲಬಹುದೆಂದು

ಮನವರಿಕೆ ಮಾಡಿಕೊಟ್ಟಿದ್ದಾನೆ. ದೇಹ ನಶ್ವರ. ಈ ಸಾಯುವ ದೇಹವನ್ನು ಭೋಗಿಸಬಾರದೆಂದು ಸೂಚಿಸಿದ್ದಾನೆ. ಕಾಲನ ಕರೆ ಬಂದಾಗ ಏನು ಸಬೂಬು ಹೇಳಿದರೂ ನಡೆಯದು ಎಂಬುದನ್ನು -

ಮೊನ್ನೆ ಮದುವೆಯಾದ ಕಟಿವರೊಂದೆಮ್ಮೆಯ
ನಿನ್ನೆ ಕೊಂಡೆನು ನಾಳೆ ಬೆಳೆಬಹುದು
ನನ್ನ ಮನೆಯ ಹಬ್ಬ ನಾನಿಂದು ಬಾರೆನೆಂ
ದೆನ್ನಲಂತಕನ ದೂತರು ಬಿಡರಣ್ಣ

ಎಂದು ವಿವರಿಸಿದ್ದಾನೆ. ಹೀಗೆ ಶಂಕರದೇವ ದೈನಂದಿನ ಬದುಕಿನ ಚಟುವಟಿಕೆಗಳನ್ನು ದೃಷ್ಟಾಂತವಾಗಿ ಬಳಸಿಕೊಂಡು ಸ್ವರವಚನಗಳಿಗೆ ಸಹಜತೆಯನ್ನು ತಂದಿದ್ದಾನೆ. ಈತ ತನಗಿರುವ ಗ್ರಾಮಜೀವನದ ದಟ್ಟ ಅನುಭವವನ್ನು ಚೆನ್ನಾಗಿ ದುಡಿಸಿಕೊಂಡಿರುವುದಕ್ಕೆ ಅನೇಕ ನಿದರ್ಶನಗಳಿವೆ. "ಬಂದಡೆನಗೆ ಬಡಿದೊಡೆ ಬೀದಿಯ ಬಸವಂಗೆ" "ಒಲೆಯ ಬೂದಿಯು ತಲೆಯನು ಕಾಯ್ವುದು" ಎಂಬ ಗಾದೆಮಾತುಗಳನ್ನು ಉಚಿತವರಿತು ಪ್ರಯೋಗಿಸಿದ್ದು ನಿರೂಪಣೆಯಲ್ಲಿ ಜನಪದ ಸೊಗಡನ್ನು ಉಳಿಸಿಕೊಂಡಿದ್ದಾನೆ. ವಚನಕಾರರು ಗ್ರಾಮದೇವತೆಗಳನ್ನು ಬಿನುಗುದೈವಗಳೆಂದು ಹೀಗಳೆದಂತೆ ಶಂಕರದೇವ ಕೂಡ ಅವುಗಳನ್ನು ತುಡುಗುಣಿದೈವವೆಂದುಕರೆದು -

ಎಕ್ಕನಾತಿಯರು ಕಾಟಿ ಜಕಕ್ಕಿಯರು ಕನ್ನೆಯರು
ಸೊಕ್ಕಿಹೋದ ಸೊಂಟಮುರುಕ ಭೈರವದೇವರು
ಮಿಕ್ಕ ಮೈಲಾರ ದುರ್ಗಿ ಚಾಮುಂಡಿ ಮೊದಲಾದ
ಚುಕ್ಕಿದೈವದ ಭಜನೆಗಾಗಿ ಸಿಕ್ಕಬೇಡವೊ

ಎಂಬ ಎಚ್ಚರಿಕೆ ನೀಡಿರುವಲ್ಲಿ ವಚನಕಾರರ ಪ್ರಭಾವವನ್ನು ಗುರುತಿಸಬಹುದು. ಗ್ರಾಮದೇವತೆಗಳಿಗೆ ಹರಕೆಯ ರೂಪದಲ್ಲಿ ಹಣ ವೆಚ್ಚಿಸುವುದನ್ನು ಕೋಳಿ ಕುರಿಗಳ ಬಲಿ ನೀಡುವುದನ್ನು ಶಂಕರದೇವ ಖಂಡಿಸಿದ್ದಾನೆ. ಈತ ಶಿವಶರಣರ ಚರಿತ್ರೆಗಳನ್ನು ಚೆನ್ನಾಗಿ ಅಭ್ಯಾಸಮಾಡಿದಂತೆ ತೋರುತ್ತದೆ. ಚೇರಮ ಅನಿಮಿಷಯ್ಯ ಇತ್ಯಾದಿ ಶರಣರ ಕಥೆಗಳನ್ನು ಇಷ್ಟಲಿಂಗದ ಮಹಿಮೆಯ ಅಭಿವ್ಯಕ್ತಿಗಾಗಿ ಬಳಸಿಕೊಂಡಿದ್ದಾನೆ.

ಶಂಕರದೇವನಿಗೆ ಬಸವಣ್ಣನೆಂದರೆ ಅಪಾರ ಗೌರವ ಅಭಿಮಾನ. ಆ ಅನುಪಮ ವ್ಯಕ್ತಿತ್ವಕ್ಕೆ ಈತ ಮಾರುಹೋಗಿರುವುದಲ್ಲದೆ ಒಂದು ಹಾಡನ್ನೂ ರಚಿಸಿದ್ದಾನೆ. ಬಸವವಚನದ ಕೆಲವೊಂದು ನುಡಿಗಟ್ಟುಗಳನ್ನು ಬಳಸಿಕೊಂಡಿದ್ದಾನೆ. ಜಾತಿ ಕುಲಗಳ ಬಗೆಗೆ ವಿಶಾಲ ಮನೋಭಾವ ವ್ಯಕ್ತಪಡಿಸಿದ್ದಾನೆ. ವಿಧಿಯ ಮೇಲಿನ ನಂಬುಗೆ ಬಹುತೇಕ ಎಲ್ಲ ಧರ್ಮಗಳಲ್ಲಿಯೂ ಕಂಡುಬರುವ ಸಾಮಾನ್ಯ ಅಂಶ. ಶಂಕರದೇವ ಕೂಡ ಪೂರ್ವಾರ್ಜಿತಂಗಳನ್ನು ಯಾರೂ ಮೀರಲಾರರು' ಎಂದು ಅನೇಕ ಪೌರಾಣಿಕ ದೃಷ್ಟಾಂತಗಳ ಮೂಲಕ ದೃಢಪಡಿಸಿದ್ದಾನೆ.

ಹನ್ನೆರಡನೆಯ ಶತಮಾನದಲ್ಲಿ ಹುಟ್ಟಿಕೊಂಡ ಹೊಸ ಆಲೋಚನೆಯ ಫಲವಾಗಿ ವಚನಕಾರರು ಹೆಣ್ಣಿಗೆ ಸಮಾನವಾದ ಸ್ಥಾನಮಾನಗಳನ್ನು ನೀಡಿದರು. ಇಲ್ಲಿ ಹೆಣ್ಣು ಮೊದಲ ಬಾರಿಗೆ ಮೌನ ಮುರಿದು ಮಾತನಾಡುವುದನ್ನು ಕಲಿತಳು. ಸಮಾಜದ ಕೆಳವರ್ಗದಿಂದ ಬಂದ ಸ್ತ್ರೀಯರೂ ವಚನಗಳನ್ನು ರಚಿಸಿದರಲ್ಲದೆ ಅನುಭವ ಮಂಟಪದಲ್ಲಿ ಪುರುಷರಿಗೆ ಸರಿಸಾಟಿಯಾಗಿ ಚಿಂತನ ಮಂಥನಗಳಲ್ಲಿ ತೊಡಗಿದ್ದುದು ಇತಿಹಾಸದ ಒಂದು ಸುಂದರ ಅಧ್ಯಾಯ. ಸ್ತ್ರೀಯರ ಬಗೆಗೆ ಕಂಡುಬಂದಿದ್ದ ಇಂಥ ಅಭೂತಪೂರ್ವ ಕ್ರಾಂತಿಕಾರಕ ನಿಲುವುಗಳು ಸ್ವರವಚನಕಾರರ ಕಾಲಕ್ಕೆ ಕಿರಿದುಗೊಂಡು ಪೂರ್ವದ ಸ್ಥಿತಿಯ ಮರುಕಳಿಸಿದಂತೆ ತೋರುತ್ತದೆ. ಆದುದರಿಂದ "ನಂಬದಿರು ನಾರಿಯ ಮನವನೆಲ್ಲರ ನೆಚ್ಚಿ' 'ಅಂಗನೆಯರ ಚಿತ್ತವನು ಆರು ಕಂಡವರಿಲ್ಲ' ಎಂಬ ಮಾತುಗಳು ಗೋಚರಿಸುತ್ತವೆ. ಇಂಥ ಆಶಯದ ಹಾಡುಗಳಲ್ಲಿ ಹೆಣ್ಣನ್ನು ಏಕಮುಖವಾಗಿ ನೋಡಿರುವುದು ಸ್ಪಷ್ಟ.

ಈ ಅವಧಿಯ ಮಹತ್ವದ ಅನುಭಾವಿ ಕವಿಗಳೆಂದರೆ ನಿಜಗುಣಶಿವಯೋಗಿಗಳು. ಇವರ ಕಾಲ ಕೂಡ ಸಂದಿಗ್ಧವಾಗಿದ್ದು ಅದು ೧೫೦೦ ರಿಂದ ೧೬೦೦ರವರೆಗೆ ತೂಗುಯ್ಯಾಲೆಯಾಡುತ್ತಿದೆ. ಅವರು ಮೈಸೂರು ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನ ಶಂಭುಲಿಂಗನ ಬೆಟ್ಟದಲ್ಲಿ ವಾಸವಾಗಿದ್ದರು. ಅಲ್ಲಿಯೆ ಸಮೀಪದ ಗಾಳಿಪುರದಲ್ಲಿ ರಾಜರಾಗಿದ್ದರೆಂಬ ಹೇಳಿಕೆಯೂ ಇದೆ. ಇವರು ಅನುಭವಸಾರ, ಪರಮಾರ್ಥಗೀತೆ, ಪರಮಾನುಭವ ಬೋಧೆ, ಪರಮಾರ್ಥ ಪ್ರಕಾಶಿಕೆ, ವಿವೇಕ ಚಿಂತಾಮಣಿ ಎಂಬ ಗ್ರಂಥಗಳನ್ನು ರಚಿಸಿದ್ದಾರೆ. ಈ ಗ್ರಂಥಗಳ ಸಾರಸಂಗ್ರಹ ಕೈವಲ್ಯಪದ್ಧತಿ. ಈ ಕೃತಿಗೆ ಸ್ವರವಚನ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನವಿದೆ. ಇದರ ಪೂರ್ವದಲ್ಲಿ ಸ್ವರವಚನಗಳಿದ್ದರೂ ಕೈವಲ್ಯ ಎಂಬ ಸಂಪ್ರದಾಯ ಕಾಣಿಸಿಕೊಂಡದ್ದು ನಿಜಗುಣರ ಕೃತಿಯಿಂದಲೇ. ಕೈವಲ್ಯ ಪದ್ಧತಿಯಲ್ಲಿ ಶಂಭುಲಿಂಗ ಅಂಕಿತದ ೧೭೪ ಹಾಡುಗಳಿವೆ. ಇವು ಶಿವಕಾರುಣ್ಯ ಸ್ಥಲ, ಜೀವಸಂಬೋಧನ ಸ್ಥಲ, ನೀತಿಕ್ರಿಯಾಚಾರ ಸ್ಥಲ, ಯೋಗ ಪ್ರತಿಪಾದನ ಸ್ಥಲ, ಜ್ಞಾನಪ್ರತಿಪಾದನ ಸ್ಥಲ ಎಂಬ ಐದು ಸ್ಥಲಗಳ ಚೌಕಟ್ಟಿಗೆ ಒಳಪಟ್ಟಿವೆ. "ಆ ಬಾಲ ಯೌವನ ಪುರಾಣೇತಿಹಾಸ ಸೂತ್ರಾದಿ ಶಾಸ್ತ್ರಸಮ್ಮತದಿಂ ಪುರಾತನ ಗೀತಾನುಗುಣ್ಯವೆನಿಸಿ ಮೃದುಮಧುರ ಲಕ್ಷಣಯುಕ್ತವಾಗಿ" ರಚಿಸಿರುವಂತೆ ಹೇಳಲಾಗಿದೆ.

ಕೈವಲ್ಯ ಪದ್ಧತಿಯಲ್ಲಿ ಶಿವಯೋಗಕ್ಕೆ ಪ್ರಾಧಾನ್ಯತೆ. ಅಲ್ಲಲ್ಲಿ ದ್ವೈತ ಅದ್ವೈತ ವಿಚಾರಗಳೂ ಪ್ರಸ್ತಾಪಿತವಾಗಿವೆ. ನಿಜಗುಣರ ಕೃತಿಗಳು ಪಾಂಡಿತ್ಯದ ನೆಲೆಯಿಂದ ಮೂಡಿಬಂದಂಥವು. ವಿಷಯ ಮಂಡನೆಗೆ ಆಧಾರವಾಗಿ ಶ್ಲೋಕಗಳನ್ನು ಬಳಸಿದ್ದಾರೆ. ಬುದ್ಧಿ ಭಾವಗಳ ಅಪೂರ್ವ ಸಂಗಮದಿಂದಾಗಿ ಇವರ ಹಾಡುಗಳು ಇಂದಿಗೂ ಚಲಾವಣೆಯಲ್ಲಿವೆ. ಪರಮಾರ್ಥಬೋಧೆ ನೆಲಸಿದ ಬಳಿಕ ಸಾಂಸಾರಿಕ ಬಾಧೆಗಳು ತನ್ನಲ್ಲಿ ಸೇರುವುದಿಲ್ಲ. ಜ್ಞಾನವನ್ನು ನಂಬಬೇಕು. ಕರ್ಮಜಾಲದಲ್ಲಿ ಸಿಲುಕಿಕೊಂಡು ಮುಕ್ತಿಯನ್ನು ಬಯಸದಿರು ಎಂದು ಜ್ಞಾನಯೋಗವನ್ನು ವಿವರವಾಗಿ ಪ್ರತಿಪಾದಿಸಿದ್ದಾರೆ. ಇವರು ಗಿಳಿಯನ್ನು ಮನಸ್ಸಿಗೆ ಪ್ರತಿಮೆಯಾಗಿಟ್ಟುಕೊಂಡು ಲಯಯೋಗವನ್ನು ವರ್ಣಿಸಿರುವ ರೀತಿ ಮನೋಹರವಾಗಿದೆ. ಚಿಂತೆಯಲ್ಲಿ ಮುಳುಗಿದ ಮನುಷ್ಯನಿಗೆ -

ಮನುಜ ನಿನಗಾವ ನೋವಿಗೆ ಚಿಂತಿಸುವರೆ ಮು
ನ್ನಿನವರಿಗಾದ ಬಾಧೆಯ ನೋಡಲು

ಎಂದು ದೇವತೆಗಳು ಮುನಿಗಳು ದೊರೆಗಳು ಪಟ್ಟ ಪಾಡನ್ನು ನಿದರ್ಶನವಾಗಿ ನೀಡಿ ಶಂಭುಲಿಂಗನ ಶ್ರೀಪಾದವನ್ನು ನೆನೆ ಸುಖವಹುದು ಎಂದು ಆತ್ಮವಿಶ್ವಾಸ ಮೂಡಿಸಲಾಗಿದೆ.

ಹರಿದಾಸರು ಹರಿನಾಮಸ್ಮರಣೆಯ ಶ್ರೇಷ್ಠತೆಯನ್ನು ಬಣ್ಣಿಸಿದರೆ ನಿಜಗುಣರು ಹರನಾಮಸ್ಮರಣೆಯ ಹಿರಿಮೆಯನ್ನು ಮನಗಾಣಿಸಿದ್ದಾರೆ. ಹರನಾಮಸ್ಮರಣೆಯಿಂದ ಭವ ಮರಣ. ಕರ್ಮ ಮಲಪಾಶದಿಂದ ಕೂಡಿದ ಸಂಸಾರದ 'ಸಂತಾಪ ಸಂಚಯವಳಿದು ವರ ಭೋಗ ಮೋಕ್ಷವಹುದು' ಎಂದು ಹಾಡಿದ್ದಾರೆ. ಈ ನಿಟ್ಟಿನಲ್ಲಿಯೆ ಶಿವನ ನೂರೆಂಟು ನಾಮ ಮತ್ತು ಪಾರ್ವತಿಯ ನೂರೆಂಟುನಾಮಗಳನ್ನು ಹಾಡಾಗಿ ಪರಿವರ್ತಿಸಿದ್ದಾರೆ. ಇತರ ವಚನಕಾರರು ಶಿವಸ್ತುತಿಗೆ ಆದ್ಯತೆ ನೀಡಿದ್ದರೆ ನಿಜಗುಣರ ಸ್ವರವಚನಗಳಲ್ಲಿ ಪಾರ್ವತಿಗೂ ಸ್ಥಾನ ಕಲ್ಪಿಸಿರುವುದು ವೈಶಿಷ್ಟ್ಯ.

ವಿಷ್ಣುವಿನ ದಶಾವತಾರಗಳನ್ನು ತಮ್ಮ ಕೀರ್ತನೆಗಳಲ್ಲಿ ಬಣ್ಣಿಸುವುದು ಹರಿದಾಸರಿಗೆ ಪ್ರೀತಿಯ ಆಸಕ್ತಿಯ ಕಾರ್ಯ. ನಿಜಗುಣರು ದಶಾವತಾರಗಳನ್ನು ಬಳಸಿಕೊಂಡಿರುವ ರೀತಿ ಹೀಗಿದೆ -

ಹರಿ ವರಾಹವಾದಿಯಾದ ಪಲವು ಜನನವನ್ನೆಯ್ದಿ
ಬರುವ ಚಕ್ರಿಯೊಡನೆ ತಿರುಗಿ ಬಳಲಲಾರದೆ
ಶರಣೆನುತ್ತಭವನ ಚರಣವಿಡಿದೆನೆಂದೊಡೆ ನಿನಗೆ
ಸರಿಗಾಣೆ ನಾನು ಚಿತ್ರಭಾನುನೇತ್ರವೆ

ಒಟ್ಟಿನಲ್ಲಿ ಕೇಳುಗರ ಹೃದಯಕ್ಕೆ ಆಪ್ಯಾಯಮಾನವಾಗುವಂತೆ ನಿಜಗುಣರು ಅನುಭಾವ ವಿಚಾರಗಳನ್ನು ಪ್ರತಿಪಾದಿಸಿದರು. ಇವರ ಹಾಡುಗಳು ಮುಂದಿನ ಪೀಳಿಗೆಯ ಮೇಲೆ ಅಗಾಧ ಪರಿಣಾಮ ಬೀರಿದವು. ಕಡಕೋಳ ಮಡಿವಾಳಪ್ಪ, ಸರ್ಪಭೂಷಣ ಶಿವಯೋಗಿ ಮೊದಲಾದವರು ಸ್ವರವಚನಗಳನ್ನು ರಚಿಸಲು ಕಾರಣವಾದವು.

ಗಣವಚನರತ್ನಾವಳಿ ಎಂಬ ಸಂಕಲನಗ್ರಂಥದ ಕರ್ತೃ ಶಾಂತಕಂಬಾಳೇಶ ರಚಿಸಿದ ೫ ಹಾಡುಗಳು ದೊರೆತಿವೆ. ಈತನ ಕಾಲ ಸು. ೧೬೦೦. ಕವಿ ತನ್ನನ್ನು ಷಟ್ಸ್ಥಲಾಚಾರ್ಯವರ್ಯ ಎಂದು ಹೇಳಿಕೊಂಡಿದ್ದಾನೆ. ಈತನಲ್ಲಿ ಕೂಡ ಪ್ರಾಚೀನ ಕೃತಿಗಳ ಓದುಗಾರಿಕೆ ಕಂಡುಬರುತ್ತದೆ. "ಮಾಡಿದುಪಕಾರವನು ಮನದೊಳರಿಯದೆ ಮುನಿದು ಕಾಡಿ ಕೆಡುವನ ಸಂಗ ಬೇಡ" ಎಂಬ ಹೇಳಿಕೆಯನ್ನು ಸಮರ್ಥಿಸುವಾಗ ಪಂಚತಂತ್ರ ಮತ್ತು ಬತ್ತೀಸಪುತ್ತಳಿಯ ಕಥೆಗಳನ್ನು ಒಂದೊಂದು ನುಡಿಯಲ್ಲಿ ನಿರೂಪಿಸಿದ್ದಾನೆ. ನೀತಿ ಅನೀತಿಗಳನ್ನು ವೀರಶೈವದ ಪರಿಕಲ್ಪನೆಯಲ್ಲಿ ವಿವೇಚಿಸಿದ್ದಾನೆ. ಪ್ರಾಣಲಿಂಗ ಪೂಜೆಯನ್ನು ಕುರಿತು "ತನ್ನ ದೇಹದ ದೇಗುಲದಿ ಲಿಂಗವನು ನಿಲಿಸಿ" ಎಂಬ ಈತನ ನಿಲುವು ಬಸವಣ್ಣನವರ ದೃಷ್ಟಿಗಿಂತ ಭಿನ್ನವಾಗಿಲ್ಲ. ಗಂಗೆಯಲ್ಲಿ ಮಿಂದರೆ ಮುಕ್ತಿಯುಂಟೆಂಬ ಸಾಂಪ್ರದಾಯಿಕ ನಂಬಿಕೆಯನ್ನು

ಅಲ್ಲಗಳೆಯುವ ಶಾಂತ ಕಂಬಾಳೇಶನು ಬಾಹ್ಯಶುಚಿಗಿಂತ ಅಂತರಂಗದ ಶುಚಿಗೆ ಮನ್ನಣೆ ನೀಡಿದ್ದಾನೆ. ಗಂಗೆಯಿಂದ ಮುಕ್ತಿ ದೊರೆಯುವುದೆಂಬ ವೈದಿಕರ ಹೇಳಿಕೆಯನ್ನು ವಿಡಂಬಿಸಿ ಹಾಗಾದರೆ ನೀರಿನಲ್ಲಿಯ ವಾಸಿಸುವ ಮೀನು ಆಮೆ ಕಪ್ಪೆ ಮುಂತಾದ ಜಲಚರಗಳಿಗೇಕೆ ಅದು ಲಭ್ಯವಾಗಿಲ್ಲವೆಂದು ಪ್ರಶ್ನಿಸುತ್ತಾನೆ. ಹತ್ತನೆಯ ಶತಮಾನದಲ್ಲಿದ್ದ ಸೋಮದೇವನ 'ಯಶಸ್ತಿಲಕ ಚಂಪು' ಎಂಬ ಜೈನ ಗ್ರಂಥದಲ್ಲಿಯೂ ಇದೇ ಬಗೆಯ ಚರ್ಚೆಗಳು ಕಂಡುಬರುತ್ತವೆ.

ಸಿದ್ಧಲಿಂಗ ಅಂಕಿತದ ಕೆಲವು ಹಾಡುಗಳು ಸಿಕ್ಕಿದ್ದು ಅವುಗಳ ಮೇಲೆ ದಾಸರ ಕೀರ್ತನೆಗಳ ನಿಚ್ಚಳ ಪ್ರಭಾವವಾಗಿರುವುದನ್ನು ಗುರುತಿಸಬಹುದು. ಈ ಆಧಾರದಿಂದ ಸಿದ್ಧಲಿಂಗ ಅಂಕಿತದ ಹಾಡುಗಳ ರಚನಾಕಾಲ ಸು. ೧೬೦೦ ಎಂದು ಸದ್ಯದಲ್ಲಿ ಅಂಗೀಕರಿಸಿದೆ. 'ಗೋವಿಂದಾ ಎನ್ನಿ ಬಲ್ಲವರೆಲ್ಲರು ಗೋಕುಲಪತಿ ಬಸವಣ್ಣನೆಂದು' ಎಂಬ ಹಾಡಿನಲ್ಲಿ ಬಸವನನ್ನು ಗೋವಿಂದ ಎಂದು ಕರೆದು ಆ ಮೂಲಕ ಗೋವಿನ ಮಹಿಮೆಯನ್ನು ಬಣ್ಣಿಸಲಾಗಿದೆ. ಕನಕದಾಸರ ಸುಪ್ರಸಿದ್ಧ ಕೀರ್ತನೆಯನ್ನು "ತಲ್ಲಣಿಸದಿರು ಕಂಡ್ಯ ತಾಳುಮನವೆ ಶಿವನೆಲ್ಲಿರ್ದಡೆ ರಕ್ಷಿಸುವ ನೀನಿದಕೆ ಸಂದೇಹ ಬೇಡ" ಎಂದು ಶಿವಗೀತೆಯನ್ನಾಗಿ ಮಾಡಿದ್ದಾನೆ.

ಸಿದ್ಧಲಿಂಗಯುಗದ ಸ್ವರವಚನ ಸಾಹಿತ್ಯಕ್ಕೆ ಸತ್ವವನ್ನೂ ಬನಿಯನ್ನೂ ತಂದುಕೊಟ್ಟವನು ಮುಪ್ಪಿನ ಷಡಕ್ಷರಿ. ನಿಜಗುಣರ ಸಮಕಾಲೀನನಾಗಿ ಬದುಕಿದ ಈತನ ಸ್ವರವಚನಗಳು ಸಾಮಾಜಿಕ ನೆಲೆಯಿಂದ ರೂಪುಗೊಂಡಿರುವಂಥವು. ಈತ ರಚಿಸಿದ್ದು ೭೪ ಹಾಡುಗಳಾದರೂ ಅಪಾರ ಜನಮನ್ನಣೆಗೆ ಪಾತ್ರವಾಯಿತು. ಸ್ವರವಚನಸಾಹಿತ್ಯವನ್ನು ದಕ್ಷಿಣ ಕರ್ನಾಟಕದಲ್ಲಿ ಜನಪ್ರಿಯಗೊಳಿಸಿದವರೆಂದರೆ ನಿಜಗುಣ ಮತ್ತು ಮುಪ್ಪಿನ ಷಡಕ್ಷರಿಗಳೆಂದರೆ ತಪ್ಪಾಗಲಾರದು. ಇವರಿಬ್ಬರೂ ಒಂದೇ ಭಾಗದಿಂದ ಬಂದವರೆಂಬುದು ಆಕಸ್ಮಿಕ. ಷಡಕ್ಷರಿಯ ಸ್ಥಳ ಎರಗಂಬಳ್ಳಿ. ಈತನ ಹಾಡುಗಳು ಇಷ್ಟು ವ್ಯಾಪಕವಾಗಿ ಪ್ರಚುರಗೊಳ್ಳಲು ಅಲ್ಲಿ ವ್ಯಕ್ತವಾಗಿರುವ ಉನ್ನತ ಧ್ಯೇಯಧೋರಣೆಗಳು ಕಾರಣವಾಗಿರಬೇಕು. ಇತರ ಸ್ವರವಚನಕಾರರು ಶಿವ ಎಂಬ ಲಕ್ಷ್ಮಣರೇಖೆಯನ್ನು ಕ್ರಮಿಸಲಾರದೆ ಹೋದಾಗ ಷಡಕ್ಷರಿ ತನ್ನ ಸ್ವರವಚನಗಳಲ್ಲಿ -

ಅವರವರ ದರುಶನಕೆ
ಅವರವರ ವೇಷದಲಿ
ಅವರವರ ಭಾವಕ್ಕೆ
ಅವರವರ ಭಕ್ತಿಗೆ
ಅವರವರಿಗೆಲ್ಲ ದೇವ ನೀನೊಬ್ಬನೆ
ಹೋರಾಟವಿಕ್ಕಿಸಲು ಬೇರಾದೆಯಲ್ಲದೆ
ಬೇರುಂಟೆ ಜಗದೊಳಗೆ ಎಲೆ ದೇವನೆ

ಎಂಬ ಉದಾತ್ತ ಭಾವನೆಯಿಂದ ಹಾಡುಗಳನ್ನು ಸೃಷ್ಟಿಸಿದ. ಇಲ್ಲಿ ಆತ್ಮೀಯ ಶೈಲಿ ಇದೆ. ಈತನ ನಿರೂಪಣೆಯಲ್ಲಿ ಕುತೂಹಲವನ್ನು ಉಳಿಸಿಕೊಂಡಿರುವುದಲ್ಲದೆ ಹಾಡುಗಳು ಸಾಹಿತ್ಯಿಕ ಸೊಬಗಿನಿಂದ ಕೂಡಿವೆ. ಷಡಕ್ಷರಿಯ ಸುಪ್ರಸಿದ್ಧ ಹಾಡು 'ತಿರುಕನೊಬ್ಬನೂರ ಮುಂದೆ' ಎಂಬುದು ಅತ್ಯುತ್ತಮ ಧ್ವನಿಶಕ್ತಿಯನ್ನು ಪಡೆದಿದೆ. ಇಲ್ಲಿ ಕನಸಿನ ತಂತ್ರವನ್ನು ಬಳಸಿಕೊಂಡು ಸುಪ್ತ ಮನಸ್ಸಿನ ಆಸೆ ಆಕಾಂಕ್ಷೆಗಳನ್ನು ಕವಿ ಹೊರಗೆಡಹಿದ್ದಾನೆ. ಸಂಸಾರವೆಂಬುದು ತಿರುಕನ ಕನಸಿನಂತೆ ಎಂಬ ಅರ್ಥವೂ ಸೂಚಿತವಾಗಿದೆ. ಸರಳವಾದ ಧ್ವನಿಪೂರ್ಣವಾದ ಶೈಲಿ ಈತನದು. ಷಡಕ್ಷರಿಯ ಮೇಲೆ ಬಸವಣ್ಣನ ಪ್ರಭಾವ ಗಾಢವಾಗಿ ಆಗಿದೆ. ವಚನಗಳ ವಿಸ್ತೃತರೂಪದಂತೆ ಈ ಹಾಡುಗಳು ಕಾಣಿಸಿಕೊಳ್ಳುತ್ತವೆ. ಸುವಿಶಾಲ ದೃಷ್ಟಿ, ಸರಳವಾದ ಸುಲಲಿತವಾದ ಭಾಷೆ, ಮಧುರಭಾವ ಈ ಕಾರಣವಾಗಿ ಮುಪ್ಪಿನ ಷಡಕ್ಷರಿ ವೀರಶೈವೇತರರಲ್ಲಿಯೂ ಪ್ರಸಿದ್ಧನಾಗಲು ಸಾಧ್ಯವಾಯಿತು.

ಈವರೆಗಿನ ಅಧ್ಯಯನದಿಂದ ಹೊರಬರುವ ಫಲಿತಗಳನ್ನು ಹೀಗೆ ಸಂಗ್ರಹಿಸಬಹುದು: ತೋಂಟದ ಸಿದ್ಧಲಿಂಗಯುಗದಲ್ಲಿ ಸು. ೭೦೦ಕ್ಕೂ ಹೆಚ್ಚು ಸಂಖ್ಯೆಯ ಸ್ವರವಚನಗಳು ಕಂಡುಬರುತ್ತವೆ. ಇವುಗಳಲ್ಲಿ ಬಹುಪಾಲು ದಕ್ಷಿಣ ಕರ್ನಾಟಕ ಕವಿಗಳಿಂದ ರಚಿತವಾಗಿರುವುದು ಅಚ್ಚರಿಯ ಸಂಗತಿಯಾಗಿದೆ. ಈ ಅವಧಿಯಲ್ಲಿ ಸೃಷ್ಟಿಯಾದ ಉತ್ತರ ಕರ್ನಾಟಕ ಭಾಗದ ಸ್ವರವಚನಗಳನ್ನು ಶೋಧಿಸಬೇಕಾಗಿದೆ. ಈಗ ದೊರಕಿರುವಷ್ಟು ಸ್ವರವಚನಗಳನ್ನೆ ಪರಿಶೀಲಿಸಿದರೆ ವಸ್ತು ಮತ್ತು ಸ್ವರೂಪದ ದೃಷ್ಟಿಯಿಂದ ವೈವಿಧ್ಯಮಯವಾದ ಸ್ವರವಚವಗಳು ಹೊರಬಂದಿವೆ. ಷಟ್ಸ್ಥಲ ನಿರೂಪಣೆಯೆ ಇವುಗಳ ಪ್ರಧಾನಧ್ಯೇಯವಾಗಿರುವಂತೆ ಸಿದ್ಧಾಂತನಿಷ್ಠವಾಗಿರುವಂತೆ ಕಂಡುಬಂದರೂ ಅದನ್ನು ಮೀರುವ ಪ್ರಯತ್ನವೂ ಅಲ್ಲಲ್ಲಿ ನಡಿದಿದೆ. ಕವಿಲಿಂಗ ನಿಜಗುಣಶಿವಯೋಗಿ ಮುಪ್ಪಿನ ಷಡಕ್ಷರಿಗಳಂಥ ಕವಿಗಳು ವಸ್ತು ಭಾವ ಭಾಷೆಯಲ್ಲಿ ನಾವಿನ್ಯತೆಯನ್ನು ತಂದು ಈ ಯುಗವನ್ನು ಬರಡಾಗದಂತೆ ಮಾಡಿದ್ದಾರೆ. ಸಿದ್ಧಲಿಂಗೋತ್ತರ ಯುಗದಲ್ಲಿ ಕಂಡುಬರುವ ಬೃಹತ್ಪ್ರಮಾಣದ ಸ್ವರವಚನ ಸಾಹಿತ್ಯ ನಿರ್ಮಾಣದ ಹಿಂದೆ ನಿಜಗುಣ ಮತ್ತು ಮುಪ್ಪಿನ ಷಡಕ್ಷರಿಯವರ ಪ್ರೇರಣೆ ಇರುವುದನ್ನು ತಳ್ಳಿಹಾಕುವಂತಿಲ್ಲ. ಚಂದಮಾಮ ಕೋಲಾಟ ಜೋಗುಳ ಸುವ್ವಿ ಹಾಡುಗಳ ಮಟ್ಟುಗಳು, ಅಕ್ಕರಿಕೆ ಚೌಪದಿ ಷಟ್ಪದಿಯಂಥ ಛಂದೋರೂಪಗಳ ಬಳಕೆ, ಬೆಡಗಿನ ತಂತ್ರ ವಿಶೇಷವಾಗಿ ಕಾಣಿಸುತ್ತವೆ. ಜಿಗುನಿ ಮರುಳದೇವರು ಬೊಲ್ಲಿಗಳನ್ನು ರಚಿಸಿದ್ದಾರೆ. ಕನ್ನಡ ಸ್ವರವಚನ ಸಾಹಿತ್ಯಕ್ಕೆ ಕೈವಲ್ಯ ಪದಗಳನ್ನು ಕೊಟ್ಟ ಕೀರ್ತಿ ಸಿದ್ಧಲಿಂಗಯುಗಕ್ಕೆ ಸಲ್ಲುತ್ತದೆ. ಒಟ್ಟಿನಲ್ಲಿ ಸ್ವರವಚನಗಳನ್ನು ಜನಾಭಿಮುಖಿಗೊಳಿಸಿದ್ದು ಸಿದ್ಧಲಿಂಗಯುಗದ ದೊಡ್ಡ ಸಾಧನೆ ಎನ್ನಬಹುದು.



# ತೋಂಟದ ಸಿದ್ಧಲಿಂಗೋತ್ತರ ಕಾಲೀನ ಸ್ವರವಚನಸಾಹಿತ್ಯ

*ಜಿ. ಜಿ. ಮಂಜುನಾಥನ್*

ಬಸವಾದಿ ಪ್ರಮಥರು, ಕರಸ್ಥಲದ ನಾಗಿದೇವರು ಮುಖ್ಯವಾದ ನೂರೊಂದು ವಿರಕ್ತರು, ಸಿದ್ಧಲಿಂಗವಚನಾಬ್ಧಿಕ್ಷೀರವ ಸವಿದಿದ್ದ ಗಣಗಳು ಸ್ವರವಚನವನ್ನು ತಮ್ಮ ಅನುಭವದ ಅಭಿವ್ಯಕ್ತಿಯ ಮಾಧ್ಯಮವನ್ನಾಗಿ ಮಾಡಿಕೊಂಡರು. ಆ ನಿಟ್ಟಿನಲ್ಲಿ ಲೋಕವನ್ನು ತಿದ್ದುವ ಕಾರ್ಯವನ್ನು ನಡೆಸಿದರು. ಕೆಸ್ತೂರ ದೇವರು ಈ ಬಗ್ಗೆ ಬರೆದಿರುವ ಹಾಡು ಶರಣ ಪರಂಪರೆಯ ಸಾಹಿತ್ಯವೆಲ್ಲವನ್ನು ದಾಖಲಿಸುವಲ್ಲಿ ಸಮರ್ಥವಾಗಿದ್ದು ಹೀಗಿದೆ -

ಏತರ ವಚನವಿನ್ನೇತರ ಪದಗೀತ
ನೂತನದಿಂದಾದ ಮಾತಿನ ಗೀತಗಳೇ। ಬೇರೆ ||ಪಲ್ಲ||

ನಿತ್ಯಪವಾಡವ ಮೆರೆದು ಕಲ್ಯಾಣದೊಳ್
ಭಿತ್ತಿಯೊಳಿಹ ಚಿತ್ರಗೀತಗಳನಡೆಸಿ
ಭಕ್ತಿರಸಾಂಬುಧಿರಸ ಬಸವಾರ್ಯ
ಹಾಡಿದ ಷಡುಸ್ಥಳಕುಳ ವಚನಂಗಳಿರಲು। ಬೇರೆ ||೧||

ಜ್ಞಾನ ಸಂಪನ್ನದುನ್ನತ. ಚೆನ್ನಬಸವಯ್ಯ
ಧ್ಯಾನಧಾರಣಯೋಗ ಶಿವಸುಖದ
ಸೋನೆಗರೆಸಿದನುಭಾವದೊಚನವಿರೆ
ತಾನನುಭವಿಸದೆ ಬೇರೊಂದರುಪಮೆಗಳೇ। ಬೇರೆ ||೨||

ಬಸವನಮಠದೊಳು ರಸಭಕ್ಷ್ಯಪಾಯಸ
ಹೊಸಪರಿಯಗಣಿತ ಶಾಕಂಗಳು
ಒಸೆದುಂಡು ಹಸಿದಿರ್ದ ಚರತೃಪ್ತಿವಡಿಸಿ ತಾ
ನೆಸೆದಿಹ ಪ್ರಭುದೇವರೂಚನಂಗಳಿರೆ । ಬೇರೆ ||೩||

ಮಡಿಯಂಬರ ಹೊದ್ದು ಬಸವೇಶ ಬರೆ ಕಂಡು
ಪೊಡವಿಪ ಬಿಜ್ಜಳ ಕಡುಮುಳಿದು
ಪಡೆಕೋಟಿ ಬರಲೊಂದು ಕ್ಷಣದೊಳು ಮಡುಹಿದ
ಮಡಿವಳಯ್ಯನ ಗೀತವಚನಂಗಳಿರೆ। ಬೇರೆ ||೪||

ಕಲ್ಯಾಣದೊಳಗುಳ್ಳಯೆಲ್ಲ ಪುರಾತನರು
ಸೊಲ್ಲಿದ ವಚನಂಗಳಮೃತವಿರೆ
ಕೊಲ್ಲಿಯಾವನು ಕರದಲ್ಲಿ ಹಾಲಿಲ್ಲದೆ
ತಲ್ಲಣಗೊಂಬುದು ಚಿತ್ರವಲ್ಲ। ಬೇರೆ ॥ ೫॥

ಕರಸ್ಥಲನಾಗಿದೇವರು ಮುಖ್ಯ ನೂರೊಂದು
ವಿರತರು ಸ್ವಾನುಭಾವಿಗಳುಸಿರ್ದ
ಪರಮಾಂಬುಧಿಯಿರೆ ಬಾಯಾರಿ ಬಾವಿಯೆನಗೆದುಪ್ಪ
ನೀರಕುಡಿಯಲೇಕೆ। ಬೇರೆ ॥೬॥

ಆದ್ಯರು ವೇದ್ಯರು ಸಾಧ್ಯರಾಚರಣೆಯ
ನುದ್ಧರಿಸಿದ ಗುರು ನಿರ್ಧಾರದಿ
ಸಿದ್ಧಲಿಂಗನ ವಚನಾಬ್ಧಿಕ್ಷೀರವ ಸವಿದಿರ್ದ
ಗಣಂಗಳ ಸ್ತೋತ್ರವಲ್ಲದೆ। ಬೇರೆ ॥೭॥

ಎಡೆಯೂರು ಸಿದ್ಧಲಿಂಗರು ವೀರಶೈವ ಧರ್ಮಕ್ಕೆ ಉತ್ಸಾಹವನ್ನು ತುಂಬಿದವರು. ಅನಂತರ ಅವರ ಪರಂಪರೆಯಲ್ಲಿ ಬಂದ ಕಟ್ಟಿಗೆ ಸಂಗ, ಮುರಿಗೆ ಶಾಂತವೀರ, ಇಮ್ಮಡಿ ಮುರಿಗಾಗುರುಸಿದ್ಧ, ಸೋದೆಯ ಸದಾಶಿವರಾಜ, ಮಡ್ನೇರಿ ಶಿವಲಿಂಗ, ಚೀಲಾಳಪ್ಪನವರು, ಸ್ವರವಚನವನ್ನು ಸಮೃದ್ಧವಾಗಿ ರಚಿಸಿದ್ದಾರೆ. ಚಿತ್ರದುರ್ಗ, ಸೋದೆ, ಕೆಳದಿ ಸಂಸ್ಥಾನದ ದೊರೆಗಳು ವೀರಶೈವಕ್ಕೆ ನೀಡಿದ ಪ್ರೋತ್ಸಾಹ ಇದಕ್ಕೆ ಕಾರಣವಾಯಿತು.

ನಿಜಗುಣ ಶಿವಯೋಗಿ ಮತ್ತು ಮುಪ್ಪಿನ ಷಡಕ್ಷರಿಗಳ ಪರಂಪರೆಯೊಂದು ಮೈಸೂರು ಪ್ರದೇಶದಲ್ಲಿ ರೂಪುಗೊಂಡಿತು. ಸೋಮೆಕಟ್ಟೆ ಕರಿವೃಷಭದೇಶಿಕರು ಮತ್ತು ಗುರುಕುಮಾರಸ್ವಾಮಿ ಅಂಕಿತದ ಸ್ವರವಚನಕಾರರು ನಿಜಗುಣರ ಎಲ್ಲ ಕೃತಿಗಳನ್ನೂ ಹೆಸರಿಸಿ ನಿಜಗುಣ ಶಿವಯೋಗಿಗಳ ಸ್ತೋತ್ರ ನಡೆಸಿದ್ದಾರೆ. ಸೋಮೆಕಟ್ಟೆ ಕರಿವೃಷಭೇಂದ್ರರು ವಿರಹಾರ್ತಕನ್ಯೆಯ ನಿಲುವಿನಲ್ಲಿ ನಿಜಗುಣರನ್ನು ಸ್ತುತಿಸಿರುವ ಹಾಡು ಸೊಗಸಾಗಿದೆ.

ತರಳೆ ಬೇಗದಿ ತಂದು ತೋರೆ ತಾರಕವ ಬೋಧಿಸಿದನ
ತಾರಕವ ಬೋಧಿಸಿದನ। ಶೃತಿಸಾರದಮೃತವ ಎರೆದನಾ ॥ಪ॥

ಪರಮ ಅನುಭವಬೋಧೆ ಬೋಧಿಸಿ। ಕರಣದೊಳಹೊರಗಿರ್ಪನ
ಶರಣಜನರ ಹೃದಯ ಕಮಲದಿ। ನಿರುತಗೀತವ ಪಾಡುವನ ॥೧॥

ಅನುಭವದ ಸಾರವನು ಎರೆದು । ಮನದ ಮಲಿನವ ತೊಳೆದನ
ಅನವರತ ವಿವೇಕ ಚಿಂತಾ। ಮಣಿಯನ್ನೊಳಗಿಟ್ಟನ ॥೨॥

ಪಾರಮಾರ್ಥ ಪ್ರಕಾಶಿಕೆಯೊಳೆನ್ನ। ಪರಮ ಜೀವರ ಕೂಡಿದನ
ಧೀರ ಕೈವಲ್ಯವನು ಪಡೆಯುವ। ಸಾರಪದ್ಧತಿ ಪೇಳ್ದನ ॥೩॥

ಶಂಭುರೂಪವನಿಂಬುಗೊಂಡು। ಕುಂಭಿನಿಯೊಳ್ ನಿಂದಿರುವನ
ಹಂಬಲಿಸುತಿಹ ಯೋಗಿ ಜನಕೆ।ಚಿದಂಬರವೆ ತಾನಾದನ ||೪||

ಸೋಮಕಟ್ಟೆಯ ನೇಮಸ್ಥಲದೊಳು। ಕಾಮಿಸನಗೆಯು ಒಲಿದನ
ನಾಮರೂಪು ಕ್ರಿಯಗಳಿಲ್ಲದ ನಿ। ಸ್ಸೀಮ ನಿಜಗುಣಧಾಮನ ||೫||

ನಿಜಗುಣ ಶಿವಯೋಗಿಗಳ ಕೈವಲ್ಯ ಪದ್ಧತಿಯು ನೀಡಿದ ಸ್ಫೂರ್ತಿಯಿಂದ ಸರ್ಪಭೂಷಣ ಶಿವಯೋಗಿಗಳ ಕೈವಲ್ಯ ಕಲ್ಪವಲ್ಲರಿ ರೂಪುಗೊಂಡಿತು. ಮುಂದೆ ಕೈವಲ್ಯ ಸಾಹಿತ್ಯ ರೂಪುಗೊಳ್ಳಲು ಈ ಎರಡು ಕೃತಿಗಳು ಕಾರಣವಾದುವು. ಹುಬ್ಬಳ್ಳಿಯ ಸಿದ್ಧಾರೂಢ ಸಂಪ್ರದಾಯದವರು ನಿಜಗುಣರ ಷಟ್‌ಶಾಸ್ತ್ರಗಳಲ್ಲಿ ಪಾರಮಾರ್ಥ ಪ್ರಕಾಶಿಕೆಯನ್ನು ಬಿಟ್ಟು ಉಳಿದ ಪಂಚರತ್ನಗಳನ್ನು ಅಳವಡಿಸಿಕೊಂಡರು. ದೇವನೂರು ಗುರುಮಲ್ಲೇಶ್ವರ ಸ್ವರವಚನಗಳನ್ನು ಬರೆದಿದ್ದು ಸಂಗ್ರಹಿಸಬೇಕಿದೆ.

ಹತ್ತೊಂಬತ್ತನೆಯ ಶತಮಾನದಲ್ಲಿ ಸ್ವರವಚನಗಳ ಮಹಾಪೂರವೆ ಹರಿಯಿತು. ಉತ್ತರ ಕರ್ನಾಟಕದ ಶರಣರು ಅದರಲ್ಲಿಯೂ ಗುಲಬರ್ಗ, ರಾಯಚೂರು, ವಿಜಾಪುರದ ಭಾಗದವರು ರಚಿಸಿದ ಸಮೃದ್ಧ ಸ್ವರವಚನಸಾಹಿತ್ಯ ಗಮನಾರ್ಹವಾದುದು. ಯರನಾಳು ಈ ಕಾರ್ಯದ ಮೂಲಬಿಂದುವಾಯಿತು. ಕಡಕೋಳ ಮಡಿವಾಳಪ್ಪನವರ ಜೊತೆ ಜೊತೆಯಲ್ಲಿ, ರಾಮಪುರದ ಬಕ್ಕಪ್ಪ, ಖೈನೂರ ಕೃಷ್ಣಪ್ಪ, ತೆಲುಗು ಬಾಳಪ್ಪಾವಪ್ಪ, ಕೂಡ್ಲೂರ ಬಸವಲಿಂಗಪ್ಪ, ಕಡ್ಲೆವಾಡ ಸಿದ್ಧಪ್ಪ, ಗೂಗಲ್ಲ ಪರಪ್ಪಯ್ಯ, ನೀರಲಕೇರಿ ಬಸವಲಿಂಗ, ಕೋಲ ಕುಂದಿಬಾಪಣ್ಣ, ಶಾಂತಗಿರಿ ಅಯ್ಯಪ್ಪಯ್ಯ, ಚೆಳ್ಳುಗುರುತಿ ತಿಕ್ಕಯ್ಯ, ಸಿರಗುರ ಕಲ್ಮೇಶ, ಮಹಾಗಾಂವದ ಗುರುಸಿದ್ಧಲಿಂಗ, ದ್ಯಾಂಪೂರ ಚೆನ್ನಕವಿ, ಕಲಬುರಗಿ ಚೆನ್ನಬಸವೇಶ್ವರ, ಕಾರಭಾಸಗಿ ರೇವಣಸಿದ್ಧಯ್ಯ, ಸಿರಗಾಪುರ ಬಂಡೆಪ್ಪ, ತುಕಡೊಳ್ಳಿ ಚೆನ್ನಮಲ್ಲಯ್ಯ, ಚಿಟಗುಪ್ಪದ ಹನುಮಂತಪ್ಪ, ಸಿಲ್ಲಪ್ಪ, ಬಂಕಾಪುರದ ಯೋಗೀಶ, ಕೊಹಿನೂರಿನ ಭದ್ರಪ್ಪಗೌಡ, ಸಲಗರದ ಸಿದ್ರಾಮ, ಜಂಬಗಿ ಶರಣ, ಕೋನಾಪುರದ ರಾಮಪ್ಪ, ತಿಗಡೊಳ್ಳಿ ಭಿಷ್ಮಪ್ಪ, ಮುತನಾಳದ ಮಲ್ಲೇಶಿ, ಕೊಂಗವಾಡದ ಸಂಗಮೇಶ, ಸೊಲ್ಲಾಪುರದ ಚೆನ್ನಯ್ಯ, ಕರಲಗಿ ಶರಣಪ್ಪ, ಸಾಲೊಟಗಿ ಶಿವಪ್ಪ, ತಾಳತೇರಿ ಬಸವರಾಜ, ರಾಯತೋಡಿ ಭೀಮಣ್ಣ, ಕಮಲಾನಗರದ ಶಿವರುದ್ರ, ಕಲಕೇರಿ ಗುರುಸ್ವಾಮಿ, ಮುನ್ನೊಳ್ಳಿ ಶಿವಪುತ್ರ ಮೊದಲಾದವರು ಸ್ವರವಚನಗಳನ್ನು, ಹಾಡುಗಳನ್ನು ರಚಿಸಿದರು.

ಶಿಶುನಾಳ ಷರೀಫ, ಚೆನ್ನೂರ ಜಲಾಲಸಾಹೇಬ, ಮೋಟನಹಳ್ಳಿ ಹಸನ ಸಾಹೇಬ, ಹುಸೇನ್‌ರಂತಹ ಮುಸ್ಲಿಂ ಬಂಧುಗಳು ಕೂಡ ಪದಗಳನ್ನು ರಚಿಸಿ ಹೆಸರಾಗಿದ್ದಾರೆ.

ಕಟ್ಟಿಗೆಹಳ್ಳಿ ಸ್ವಾಮಿಗಳು, ಮುರಿಗಾಶಾಂತವೀರರು, ಇಮ್ಮಡಿ ಮುರಿಗಾ ಗುರುಸಿದ್ಧ ಸ್ವಾಮಿಗಳು ಸ್ವರವಚನಗಳನ್ನು ರಚಿಸಿದುದಲ್ಲದೆ ಬೇರೆಯವರಿಗೆ ರಚಿಸಲು ಸ್ಫೂರ್ತಿಯ ಸೆಲೆಯಾಗಿದ್ದರು. ಇಮ್ಮಡಿ ಮುರಿಗಾ ಗುರುಸಿದ್ಧರು ಪ್ರಭುಲೀಲಾ, ಹಾಲಾಸ್ಯ ಪುರಾಣಗಳಂಥ ಉದ್ಗ್ರಂಥಗಳನ್ನು ರಚಿಸಿದ್ದಾರೆ. ವೀರಶೈವವನ್ನು ಪ್ರತಿಪಾದಿಸುವ ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಕೈವಲ್ಯ ಸೋಪಾನ ನಾಮ್ಮಕೋತ್ತರ ಶತಸ್ಥಲವನ್ನು ಹಾಡುಗಳಲ್ಲಿ

ರಚಿಸಿದ್ದಾರೆ. ಇವರ ಸ್ವರವಚನಗಳ ಸಂಪುಟವೊಂದು ಅಚ್ಚಾಗಿದೆ. ಅದರಲ್ಲಿ ಷಟ್‌ಸ್ಥಲದಲ್ಲೊಂದಾದ ಭಕ್ತಸ್ಥಲದಲ್ಲಿ ಬರುವ ಸತಿಪತಿಭಾವದ ನೆಲೆಯ ಹಾಡುಗಳು ಪ್ರಮುಖವಾಗಿವೆ.

ಹಾಗಲವಾಡಿ ಮುದ್ವೀರಸ್ವಾಮಿಗಳು ಸು. ೧೭೦೦-೧೭೭೦ರ ಕಾಲಾವಧಿಯಲ್ಲಿದ್ದವರು. ಬೆಂಗಳೂರು ಮುದ್ವೀರಸ್ವಾಮಿ ಎನ್ನುವ ಹೆಸರೂ ಇವರಿಗಿದೆ. ಹಾಗಲವಾಡಿಯಲ್ಲಿ ಇವರ ಸಮಾಧಿಯಿದೆ. ಇವರನ್ನು ಕುರಿತು ಚೆನ್ನವೀರನಿಂದ ತಾರಾವಳಿಯೊಂದು ರಚಿತವಾಗಿದೆ. ಇವರು ಶಿವಯೋಗವನ್ನು ಸಾಧಿಸಿದವರು. ಹಾಗಲವಾಡಿ ಪಾಳೆಯಗಾರ ಮುದಿಯಪ್ಪನಾಯಕ ಇವರಿಗೆ ಆಶ್ರಯವಿತ್ತಿದ್ದನು. ಶಾಂಭವಯೋಗದ ವಿವರಗಳು ಲಭಿಸುವುದಲ್ಲದೆ, ಷಟ್‌ಸ್ಥಲ, ಅಷ್ಟಾವರಣ ಪಂಚಾಚಾರ ಮುಂತಾದ ಸಂಗತಿಗಳು ಇವರ ಕೃತಿಗಳಲ್ಲಿವೆ.

ತಿಪಟೂರು ತಾಲ್ಲೂಕು ನೊಣವಿನ ಕೆರೆಯ ಸೋಮೇಕಟ್ಟೆಯಲ್ಲಿ ಚೆನ್ನವೀರ ಸ್ವಾಮಿಯವರು ಗುರುಚೆನ್ನಬಸವ, ಚೆನ್ನಬಸವ ಅಂಕಿತದಲ್ಲಿ ಸ್ವರವಚನಗಳನ್ನು ರಚಿಸಿದ್ದಾರೆ. ಅದೇ ಊರಿನ ಕರಿವೃಷಭದೇಶಿಕರು ರಾಚೋಟಿದೇವನ ಕರುಣದಿಂದ ಸ್ವರವಚನಗಳನ್ನು ರಚಿಸಿದ್ದಾರೆ.

ಬಸವಾದಿ ಪ್ರಮಥರ ಚರಣಸಾರಸಗಳಿಗೊಸೆದೆನ್ನ ಮನವನಾರಡಿಗೆಯ್ಯೆನು ಎನ್ನುವ ಸರ್ಪಭೂಷಣರು ಸಪ್ಪಣ್ಣ ಎನ್ನುವ ಲೋಕರೂಢನಾಮದಿಂದ ಪ್ರಸಿದ್ಧರು. ಮುಮುಕ್ಷು ಜನ ಉಪಯೋಗಿಯಾದ ಕೈವಲ್ಯ ಕಲ್ಪವಲ್ಲರಿ ಎನ್ನುವ ಕೃತಿಯನ್ನು ರಚಿಸಿದ್ದಾರೆ. ಕಾರ್ಯದ ಪ್ರಭುಸ್ವಾಮಿಗಳು ಇವರ ಒಡನಾಡಿಗಳು.

೧. ಪರಶಿವಕಾರುಣ್ಯ ಪ್ರಾರ್ಥನಾ ೨. ಜೀವಸಂಬೋಧನ ೩. ನೀತಿ ಕ್ರಿಯಾಚರ್ಯಾ ಪ್ರತಿಪಾದನ ೪. ಯೋಗ ಪ್ರತಿಪಾದನ ೫. ಜ್ಞಾನ ಪ್ರತಿಪಾದನ ಎನ್ನುವ ಐದು ಅಧ್ಯಾಯಗಳಿಂದ ಕೈವಲ್ಯ ಕಲ್ಪವಲ್ಲರಿ ಕೂಡಿದೆ. ನಿಜಗುಣ ಶಿವಯೋಗಿಗಳ ಕೈವಲ್ಯ ಪದ್ಧತಿಯನ್ನು ಇದು ಆಧರಿಸಿದೆಯೆನ್ನಬಹುದು. ಇವರು ಈ ಯುಗದ ಶ್ರೇಷ್ಠ ಸ್ವರವಚನಕಾರರು. ಯಶಸ್ಸಿನಿಂದ ಕೂಡಿ ಜನಪ್ರಿಯರಾಗಿದ್ದರು.

ತೋಂಟದಾರ್ಯ ಸಂಪ್ರದಾಯದ ಕಸ್ತೂರದೇವರು (ಸು. ೧೭೫೦) ಗುರುಸಿದ್ಧ ಲಿಂಗ ಅಂಕಿತದಲ್ಲಿ ೧೧೩ ಸ್ವರವಚನಗಳನ್ನು ರಚಿಸಿದ್ದಾರೆ. ಜಗದ್ಗುರುಗಳು ನೀವಾದರೆ ಜಗತ್ಪುತ್ರ ನಾನು ನಿಮಗೆ ತಿಳಿದಿರಬೇಕು ಎನ್ನುವ ಕೆಚ್ಚಿನ ಬಾಲಲೀಲಾ ಮಹಾಂತ ಶಿವಯೋಗಿಗಳು ಶ್ರೀ ಮಹಂತಲಿಂಗರ ಶಿಷ್ಯರು. ಆಲಮಟ್ಟಿ ಚೆನ್ನಮಲ್ಲಿಕಾರ್ಜುನ ಅನ್ನಪೂರ್ಣಾಂಬೆಯರ ಸಾಕುಮಗ. ಲಿಂಗನಾಯಕನಹಳ್ಳಿ ವಿರಕ್ತಮಠದ ಚೆನ್ನವೀರ ಸ್ವಾಮಿಗಳಲ್ಲಿ ವಿದ್ಯಾಭ್ಯಾಸ ಮಾಡಿದರು. ಕಡೆಯಕೊಳ್ಳದ ಶಾಂತವೀರ ಸ್ವಾಮಿಗಳ ಮೂಲಕ ಜ್ಞಾನೋಪದೇಶ ಪಡೆದರು. ಮುಳಗುಂದದಲ್ಲಿ ನೆಲೆಸಿದರು. ಮುಮ್ಮಡಿ ಕೃಷ್ಣರಾಜರು (೧೮೧೧-೧೮೩೦)ಆಳ್ವಿಕೆ ನಡೆಸಿದ್ದಾಗ ಅವರ ಸೇವೆಯನ್ನು ಸ್ವೀಕರಿಸಿದರು. ಅದರ ಕುರುಹ ಇಂದಿಗೂ ಮುಳಗುಂದದಲ್ಲಿರುವ ಕುಂಬಳಕಾಯಿ ಸೊರಟೆ. ಮರಿದೇವರೆನ್ನುವ ಇವರ

ಶಿಷ್ಯರು ಸಂಗ್ರಹಿಸಿದ ಇವರ ರಚನೆಗಳು ಕೈವಲ್ಯ ದರ್ಪಣ ಎನ್ನುವ ಪುಸ್ತಕದಲ್ಲಿ ಪ್ರಕಟವಾಗಿವೆ.

ಬಳ್ಳಾರಿ ಜಿಲ್ಲೆ, ಹೂವಿನಹಡಗಲಿ ತಾಲ್ಲೂಕು ಮೈಲಾರ ಬಸವಲಿಂಗಶರಣರು ವ್ಯಾಪಾರ ವೃತ್ತಿಯವರು. ಲಿಂಗನಾಯಕನಹಳ್ಳಿ ಚೆನ್ನವೀರರ ಶಿಷ್ಯರು. ಗುರುಕರುಣ ತ್ರಿವಿಧಿ, ಷಟ್ಸ್ಥಲ ನಿರಾಭಾರ ವೀರಶೈವ ಸಿದ್ಧಾಂತ, ಷಟ್‌ಸ್ಥಲ ಜ್ಞಾನಾನುಭವ, ಶಿವಾನುಭವದರ್ಪಣ, ಲಿಂಗಪೂಜಾವಿಧಾನ, ಭಕ್ತಿಬಿನ್ನಹ ದಂಡಕಗಳನ್ನು ಬರೆದಿದ್ದಾರೆ. ಮುಳಗುಂದದ ಬಾಲಲೀಲಾ ಮಹಾಂತ ಶಿವಯೋಗಿಗಳು, ಬನ್ನಿಮಟ್ಟಿ ಚೆನ್ನಪ್ಪನವರು, ಯಳಂದೂರು ಶಿವಬಸವ ಸ್ವಾಮಿಗಳು, ಚಿತ್ರದುರ್ಗದ ಶಾಂತವೀರ ಶಿವಯೋಗಿಗಳು, ಹೊಳಲು ಲಿಂಗಪ್ಪ ಶರಣರು, ಚಿತ್ರದುರ್ಗದ ರಾಚೋಟಿಸ್ವಾಮಿಗಳು ಇವರ ಸಹಪಾಠಿಗಳು.

ಕಡಕೋಳ ಮಡಿವಾಳೇಶ್ವರರು ಗುರುಮಹಾಂತ ಅಂಕಿತದಲ್ಲಿ ಸ್ವರವಚನಗಳನ್ನು ರಚಿಸಿದ್ದಾರೆ. ಚಿಣಮಗೇರಿ ಶ್ರೀ ಗುರುಬಸವರು ಇವರ ದೀಕ್ಷಾಗುರು. ೧೭೫೦ ಪದಗಳನ್ನು ರಚಿಸಿದುದಾಗಿ ಅವರೇ ಹೇಳಿಕೊಂಡಿದ್ದಾರೆ.

'ಅಳುತಿದ್ಯಾ ಕಂದ ಅಳುತಿದ್ಯಾ ತಿಳಿಯದೆಮರ್ತ್ಯಕ್ಕೆ ಮರಳಿ ಬಂದೆನೆಂದು' ಜೀವವನ್ನು ಸಂಬೋಧಿಸಿ ಸ್ವರವಚನವನ್ನು ರಚಿಸಿದವರು ಶ್ರೀಗುರು ಕೂಡಲೂರ ಬಸವಲಿಂಗರು. ಇವರು ಗುಲ್ಬರ್ಗ ಜಿಲ್ಲೆಯ ಯಾದಗಿರಿ ತಾಲ್ಲೂಕಿನ ಬಳಿ ಚಕ್ರ ಎನ್ನುವ ಊರಿನವರು. ೧೮ನೇ ಶತಮಾನದಲ್ಲಿದ್ದ ಇವರು ಕಲಿಯುಗದ ಕಡೆಯ ಶರಣರೆಂದು ಖ್ಯಾತರಾಗಿದ್ದಾರೆ.

ರಾಮಪುರದ ಬಕ್ಕಪ್ಪನವರು ಗುಲ್ಬರ್ಗ ಜಿಲ್ಲೆ ಜೇವರಗಿ ತಾಲ್ಲೂಕು ಆಂದೇಲಿ ಸಮೀಪದ ರಾಮಪುರದವರು. ನಿಜಶರಣ ತ್ರಿವಿಧಿ ಮತ್ತು ಸ್ವರವಚನಗಳನ್ನು ರಚಿಸಿದ್ದಾರೆ. ಬೂದಿ ಬಸವ ಅಥವಾ ಕೊಟ್ಟಿ ಬಸಪ್ಪ ಈತನ ಗುರು. ಕಡಕೋಳ ಮಡಿವಾಳಪ್ಪನ ಮೇಲೆ ಈತನ ಪ್ರಭಾವ ದೊಡ್ಡದು. ೧೯ನೆಯ ಶತಮಾನದಲ್ಲಿದ್ದ ದೇವದುರ್ಗದ ಆದಿ ಅಮಾತೆಪ್ಪ ತನ್ನ ಕೈವಲ್ಯ ನವನೀತ ಗ್ರಂಥದಲ್ಲಿ ತತ್ವಸಮರ್ಥನೆಗಾಗಿ ನಿಜಶರಣ ತ್ರಿವಿಧಿಯ ನುಡಿಗಳನ್ನು ಬಳಸಿಕೊಂಡಿದ್ದಾನೆ. ಶರಣಸತಿ ಲಿಂಗಪತಿಭಾವ ಮತ್ತು ಲಿಂಗಾಂಗ ಸಾಮರಸ್ಯ ಇಲ್ಲಿ ಚೆನ್ನಾಗಿ ಪ್ರಕಟವಾಗಿದೆ.

'ಬಸವನ ಪಾದ ಮರೀತಾರಿವರು ವಸುಧೆಯೊಳು ಪಾಮರ ಜನರು' ಎಂದು ನುಡಿಯುವ ಸಾರವಾಡದ ಚಿಕ್ಕಪ್ಪಯ್ಯನವರು ವಿಜಾಪುರ ಜಿಲ್ಲೆಯವರು. ವೀರಯ್ಯ ಮತ್ತು ಅಲ್ಲವೆಯರ ಮಗ. ಕ್ರಿ. ಶ. ೧೭೭೫ ಎಂದರೆ ತನ್ನ ೨೮ನೆಯ ವಯಸ್ಸಿನಲ್ಲಿಯೆ ಲಿಂಗವಾದನಂತೆ.

## ವಸ್ತುವಿವೇಚನೆ

ಕೆಸ್ತೂರದೇವರು 'ಸದರವ ವೀರಶೈವದಿ ನಿಂದು ಮದನಾರಿಯೊಡ್ಡಿದ ಮಾಯೆಯ ಗೆಲುವುದು' ಎಂದಿದ್ದಾರೆ. ಅವರ ಪ್ರಕಾರ ಶ್ರೀಗುರುಲಿಂಗಜಂಗಮ ಭಕ್ತಿಯೆನ್ನುವುದು ಅಲಗಿನ ಮೊನೆಯಿದ್ದಂತೆ. ಭಕ್ತಿಯೆನ್ನುವುದು ಮೃಡನೊಲಿದವನಿಗಲ್ಲದೆ ದೊರಕೊಳ್ಳದು.

ಆದುದರಿಂದಲೇ ಅವರು ದೇವನಲ್ಲಿ ದೃಢವುಳ್ಳ ಭಕ್ತಿಯನ್ನು ಬೇಡುತ್ತಾರೆ. ಅಂಗ ಲಿಂಗವಾಗುವ, ಲಿಂಗ ಸಂಗವಾಗುವ ಷಟ್ಸ್ಥಲ ಕುಳಗಳನ್ನು ತಿಳಿದು ಆಚರಿಸುವ ಬಗ್ಗೆ ಆಸಕ್ತಿ ತೋರುತ್ತಾರೆ. ಆದರಿಂದ ಭವದ ಭಂಗ ಹರಿಯುತ್ತದೆ. ಇದಕ್ಕೆ ಗುರುಕರುಣೆಯಿಲ್ಲದೆ ಆಗದು.

ಬಾಲಲೀಲಾ ಮಹಂತ ಶಿವಯೋಗಿಗಳು 'ಪಾಲಿಸೈ ಪರಮ ಶ್ರೀ ಗುರುನಾಥ ದಯದಿಂದ ಕಾಲಕಾಮಾದ್ರಿಪವಿ ಬಸವಲಿಂಗ' ಎಂದು ಬೇಡುತ್ತಾರೆ. ಗುರುವಿನ ಮಹತ್ವವೆಂದರೆ ಗುರುಮುನಿದರೆ ಹರಕಾಯಲಾರನು; ಆದರೆ ಹರಮುನಿದರೆ ಗುರು ಕಾಯಬಲ್ಲನು. 'ಲಿಂಗ ಕಲ್ಲೆನಬೇಡ ಕುದ್ದಲಗೇಡಿ' ಎಂದು ಕಡಕೋಳ ಮಡಿವಾಳಪ್ಪನವರು ಸಾರುತ್ತಾರೆ. ಗುರುಕೊಟ್ಟ ಇಷ್ಟಲಿಂಗವನ್ನು ಮನಮುಟ್ಟಿ ಪೂಜಿಸದೆ ಅನ್ಯದೈವ ಭಜನೆಯಿಂದ ಕೆಟ್ಟವರು ಎಷ್ಟೋ ಜನರು. ಹಾಗಲವಾಡಿ ಮುದ್ವೀರಸ್ವಾಮಿಯವರು 'ಲಿಂಗದೊಳಗೆ ಲೀಯವಾಗು। ಬಹಿರಂಗದ ಬಳಕೆಯಯ ನೀಗು॥' ಎಂದಿದ್ದಾರೆ. ಜಂಗಮನನ್ನು ಸತ್ಕರಿಸಬೇಕು. ಪೂಜಿಸಬೇಕು. ಶರಣರ ನಿಂದೆಯನ್ನು ಮಾಡಬಾರದು. ಶರಣ ಸಂತತಿ ಬಯಸಿದುದನ್ನು ಕೊಡಬೇಕು. ಮೈಲಾರ ಬಸವಲಿಂಗರು ಮನವನ್ನು ಸಂಬೋಧಿಸುತ್ತ 'ಹೊರಗೆ ಕಂಡರೆ ಎನ್ನ ಹರಣದೊಡೆಯ, ಶಿವ, ಶರಣು ಮನೆಗೆ ಬನ್ನಿಸ್ವಾಮಿ ಎನ್ನುತ್ತೀಯೆ. ಸದ್ಭಕ್ತನು ಕರೆದಿದ್ದಾನೆಂದು ಮರುದಿನ ಮನೆಗೆ ಬಂದರೆ ಗ್ರಹ ಹೊಡೆದಂತೆ ಸುಮ್ಮನಿರುವೆ' ಎನ್ನುತ್ತಾರೆ. ಅಷ್ಟಾವರಣ ಪಂಚಾಚಾರವರಿಯದೆ ಭ್ರಷ್ಟರು ಲಿಂಗಜಂಗಮವೇಷವ ತೊಟ್ಟರೆ ಆವನು ಜಂಗಮನಲ್ಲ ಎನ್ನುವ ಮಾತನ್ನು ಕೂಡ ಸ್ವರವಚನಕಾರರು ಆಡುತ್ತಾರೆ. ಕುಟಿಲ ಜಂಗಮರಿರುವಂತೆಯೇ ಕುಟಿಲ ಭಕ್ತರೂ ಇರುತ್ತಾರೆ. ದೊಡ್ಡ ಜಂಗಮ ಬಂದರೆ ಅಡ್ಡಡ್ಡ ಬಿದ್ದು ದೊಡ್ಡ ವಸ್ತ್ರ ಕೊಟ್ಟು ಶರಣೆನ್ನುತ್ತಾರೆ. ಬಡಜಂಗಮ ಬಂದರೆ ಸಡ್ಡೆ ಮಾಡುವುದಿಲ್ಲ. ಅಡ್ಡ ಮೋರೆ ತೆಗೆಯುತ್ತಾರೆ. ಕೆಟ್ಟ ಜಂಗಮನೂ ಇರಬಾರದು. ಕೆಟ್ಟ ಭಕ್ತನೂ ಇರಬಾರದು. ಜಂಗಮನನ್ನು ಹಿರಿದು ಕಿರಿದು ಎನ್ನದೆ ಅರ್ಚಿಸುವ ಭಕ್ತನ ಅಂಗದಲ್ಲಿ ಶಿವನು ನೆಲೆಸಿರುತ್ತಾನೆ. ಆದುದರಿಂದ ಚರಲಿಂಗ ದಾಸೋಹಿಯಾಗಿ ಬಾಳಬೇಕೆನ್ನುವುದು ಸ್ವರವಚನಕಾರರ ಸಂದೇಶ. ಬಾಲಲೀಲಾ ಮಹಾಂತ ಸ್ವಾಮಿಗಳು 'ಲೋಲಚರ ತೀರ್ಥಪ್ರಸಾದಗಳನ್ನುಳಿಸಿ ಮೂಲವನು ಚುಂಬಿಪ ಪರಿಯನ್ನು ಪಾಲಿಸುವಂತೆ' ಕೋರಿದ್ದಾರೆ(1). ಭಸಿತ, ರುದ್ರಾಕ್ಷಿಧಾರಣ, ಮಂತ್ರೋಚ್ಚಾರಣೆ, ಚರಣಾಂಬು ಶೇಷವನ್ನು ಹಾಗಲವಾಡಿ ಮುದ್ವೀರಸ್ವಾಮಿಯವರು ವರ್ಣಿಸಿದ್ದಾರೆ.

ವೀರಶೈವಾಚಾರದ ನಡೆನುಡಿಯಲ್ಲಿ ನಡೆಯುವಲ್ಲಿ ಗುರುಕೃಪೆಯಾದರೆ ಪರುಷ ಮುಟ್ಟಿದ ಲೋಹದಂತೆ ಶರಣ ಶರೀರ ಲಿಂಗವಾಗುತ್ತದೆ. ಆ ಪರಿಯನ್ನು ಮೈಲಾರ ಬಸವಲಿಂಗರು ಒಂದರಿಂದ ಹನ್ನೆರಡರವರೆಗಿನ ಸಂಖ್ಯಾನುಕ್ರಮದಲ್ಲಿ ಹೇಳಿಕೊಂಡು ಹೋಗಿದ್ದಾರೆ. ಭವಿ ಮತ್ತು ಭಕ್ತನ ಸ್ವರೂಪ :

೧. ಶರೀರವೆ ನಾನು X ನೀ ನರನಲ್ಲ ಪರವಸ್ತು.

೨. ನಾನು ನನ್ನದು ಎಂಬಹಮ್ಮಮತೆ X ನೀನೆ ಶರಣಸತಿ ಲಿಂಗಪತಿ ವಸ್ತು ತಾನೆ ಒಂದು ಎರಡಾದುದು.

೩. ವಿಶ್ವ ತೈಜಸ ಪ್ರಾಜ್ಞ ಜೀವ X ಇಷ್ಟ, ಪ್ರಾಣ, ಭಾವ, ತ್ರೈಲಿಂಗ ಸಜ್ಜೀವಿ.

೪. ಮನ ಬುದ್ಧಿ ಚಿತ್ತ ಅಹಂಕಾರ X ಗುರುಲಿಂಗ ಚರಶೇಷ.

೫. ಐದು ಭೂತಗಳು X ಐದು ಅಕ್ಷರದ ಮೂಲಮಂತ್ರ, ನಮಃ ಶಿವಾಯ

೬. ಕಾಮಾದಿ ಅರಿಷಡ್ವರ್ಗಗಳು X ಮಹಾಷಟ್‌ಸ್ಥಲಮಾರ್ಗ.

೭. ಏಳು ವ್ಯಸನ X ಏಳು ನೆಲೆಯ ಭಕ್ತಿಮಂಟಪ.

೮. ದುರ್ಮದವೆಂಟು X ಅಷ್ಟಾವರಣ.

೯. ಒಂಬತ್ತು ತೂತಿನ ಘಟದಲ್ಲಿ ಜೀವನಾಂಬು ತುಂಬಿದ ಜಡದೇಹ X ಒಂಬತ್ತು ರಾಜೀವದೊಳಿಷ್ಟಲಿಂಗ ತುಂಬಿ ಕಾಣಿಸುವುದು.

೧೦. ಹತ್ತು ವಾಯುವಿನ ಸಂಚಲX ಹತ್ತು ಪಾದೋದಕದಾಚರಣೆ.

೧೧. ಆರುxಐದು= ಆರೈದು ಇಂದ್ರಿಯ ಭೋಗ X ಸಾರ ಸದ್ಭಕ್ತಿ ಸುಪ್ರಸಾದವನ್ನು ಆರೈದು ಭೋಗಿಸುವುದು.

೧೨. ದುರ್ಮಾಯೆ ಮರವೆಯ ದೆಸೆಯಿಂದ ಕರ್ಮ ದೇಹವ ತಾಳಿ ಚರಿಸುವುದು X ಪರತತ್ವದಾಚರಣೆ.

ಪರತತ್ವದಾಚರಣೆಯಲ್ಲಿ ತೊಡಗಿದ ಜೀವಕ್ಕೆ ಹಲವು ಹನ್ನೊಂದು ಅಡಚಣೆಗಳುಂಟು. ಘೋರ ಸಂಸಾರದ ಮಾಯೆ ಮುಂದೆ ಹೋಗಲು ಬಿಡದೆ ಹಿಂದಕ್ಕೆ ಜಗ್ಗುತ್ತಿರುತ್ತದೆ. ಧ್ಯಾನ ಧಾರಣ ಸಮಾಧಿಗಳನ್ನು ಮೋಕ್ಷವಾಂಛಿತರು ಅನುಸಂಧಾನಿಸುತ್ತಿರುತ್ತಾರೆ. ಸರ್ಪಣ್ಣನವರು ಹೇಳುವಂತೆ ಹರಶರಣರು ಅರಿವೆಂಬ ಸಾಮಗ್ರಿಗೂಡಿ ಸಾರತರ ಮೋಕ್ಷವೆಂದೆಂಬ ಪಾಕವ ಮಾಡಿ ಸವಿಯುತ್ತಾರೆ. ಆದರೂ ಆ ಹಾದಿಯಲ್ಲಿ ಅನೇಕ ಅಡ್ಡಿ ಆತಂಕಗಳುಂಟು. ಕುಲಮದ ಅಡ್ಡಬರುತ್ತದೆ. ಪಾರವಿಲ್ಲದ ಆಸೆ ಬಾರದುದಕ್ಕೆಲ್ಲ ಮನ ಸೆಳೆಯುತ್ತದೆ. ಮನವೆಂಬ ಮರ್ಕಟ ಅತ್ತಿತ್ತ ಚಲಿಸುತ್ತದೆ. ಕುಜನರ ಸಂಗ ದಾರಿತಪ್ಪಿಸುತ್ತದೆ. ಅಂತಹ ಸಂದರ್ಭದಲ್ಲಿ ಕಡಕೋಳ ಮಡಿವಾಳಪ್ಪನವರು 'ಕೆಡಬೇಡ ಕೆಡಬೇಡ ಈ ಪೊಡವಿಯೊಳಗಮಾನವ ಜನ್ಮ ಅಪೂರ್ವ' ಎಂದು ಹೇಳಿ ಮುಂದುವರೆದು 'ಯಾಕೆ ಭವಸಾಗರಕೆ ಬಂದೆಣ್ಣ ಬಂದರ ಬಂದೆ ಜ್ವಾಕಿಲಿಂದ ಈಸಿ ದಾಟಣ್ಣ ನೀ ಕೇಳೊ ಜಾಣ' ಎಂದು ಮಾರ್ಗದರ್ಶನ ಮಾಡಿದ್ದಾರೆ.

ದೈವಸಾಕ್ಷಾತ್ಕಾರಕ್ಕೆ ಹಲವಾರು ಮಾರ್ಗಗಳುಂಟು. ಅದರಲ್ಲಿ ಷಟ್‌ಸ್ಥಲದಲ್ಲಿ ಬರುವ ಭಕ್ತಸ್ಥಲದ ಶರಣಸತಿ ಲಿಂಗಪತಿ ಎನ್ನುವ ನಿಲುವು ಸ್ವರವಚನಕಾರರಲ್ಲಿ ನಿಚ್ಚಳವಾಗಿ ಕಾಣುತ್ತದೆ. ಲಿಂಗಾಂಗ ಸಾಮರಸ್ಯವೆ ಅವರ ಗುರಿ. ಅದಕ್ಕಾಗಿ ನಡೆಯುವ ಜೀವದ ತೊಳಲಾಟವನ್ನು ಗುರುತಿಸಿದ್ದಾರೆ. ದ್ವೈತಭಾವ ಕಳೆಯುವುದನ್ನು ತಿಳಿಸುತ್ತಾರೆ. 'ಬಾರೋ ಬಾರೋ ಚೆನ್ನಿಗ ಮನೆಗೆ ಬಾರೋ ಬಾರೋ,' 'ಕಾಂತನ ಕರೆದು ತಾರಮ್ಮ ಗುಣವಂತನ, ಕರದು ತಂದು ತೋರಿಸಮ್ಮ ಕಾಂತನ ಬೇಗ ತರಳನೇ ತಾಳಲಾರೆ ತರುಣ ಚಂದ್ರಚೂಡನ'

ಎಂದು ಇಮ್ಮಡಿ ಗುರುಸಿದ್ಧರು ಹಾರೈಸುತ್ತಾರೆ. ಇಲ್ಲಿ ಶರಣ ಸತಿ ಲಿಂಗಪತಿಯನ್ನು ನೆನೆದರೆ ಕೂಡಲೂರು ಬಸವಲಿಂಗರು ಲಿಂಗಪತಿ ಶರಣಸತಿಯನ್ನು ನೆನೆಯುವುದನ್ನು ಚಿತ್ರಿಸಿದ್ದಾರೆ:

ನೀರಿಗಂತಲೆ ಬಾರೆ ನಾರಿ ನೀನು ಬರುವ
ದಾರಿಲಾನು ಇರುತೀನಿ ಪೋರಿ
ಕೊಡಹೊತ್ತುಕೊಂಡು ನೀ ಬಾರೆ! ಆಕೊಡ ಮತ್ತೆ
ಒಡಿದಂತೆ ಎಲ್ಲರಿಗೆ ನೀ ಸಾರೆ
ಬಿಡದೆನ್ನ ಕೈಯೊಳು ಸೇರೆ! ನಿನಗುಡಲು
ಕೊಡುವೆ ಲಿಂಗದ ಹೂವಿನ ಸೀರೆ

ಸೋಮೇಕಟ್ಟೆ ಚೆನ್ನವೃಷಭರು ಹೇಳುವಂತೆ ಹೀಗೆ ಶರಣಸತಿಯನ್ನು ಮರುಳು ಮಾಡಿದ ಲಿಂಗಪತಿ ಹಾದರವ ನಾನರಿಯದಿದ್ದೆ ಸಿದ್ಧಪುರುಷರ ಕಣ್ಣಲ್ಲಿ ನೋಡದಿದ್ದೆ ಎನ್ನುವ ಶರಣಸತಿಯನ್ನು ರಮಿಸಿ -

ಉಟ್ಟಿದ್ದ ಸೀರೆಯ ಬಿಚ್ಚಿ ಆಧರವ ಕಚ್ಚಿ, ಮೆಚ್ಚಿ
ಆರು ವರಹದ ಓಲೆ ಕೊಟ್ಟು ಬೇರೆ
ಮೂರು ವರಹ ತೂಕದ ಮೂಗುತಿ ಇಟ್ಟು
ಪರಂಜ್ಯೋತಿಯಂಥ ರತ್ನ ಮಡಗೆಂದು ಕೊಟ್ಟು
ಗುರುಸೋಮೆ ಕಟ್ಟೇಶ ಭಜಿಸೆಂದುಬಿಟ್ಟು.

ಶರಣರು ಬಯಲನ್ನು ಸಾಧಿಸಲು ಕಂಡುಕೊಂಡ ಮತ್ತೊಂದು ದಾರಿಯೆಂದರೆ ಶಿವಯೋಗ. ನಿಜಗುಣರು ಈ ಪರಂಪರೆಯ ಅಧ್ವರ್ಯು. ಸಪ್ಪಣ್ಣನವರು ಅದನ್ನು ಮತ್ತಷ್ಟು ಸ್ಫುಟಗೊಳಿಸಿದರು. ಅವರ ಪ್ರಕಾರ ನಿಖಿಲವಿದ್ಯದಿ ಬ್ರಹ್ಮವಿದ್ಯವಧಿಕ ನಿಖಿಲಯೋಗಂಗಳೊಳು ರಾಜಯೋಗವಧಿಕ(೨೫) ಅದನ್ನು ಸಾಧಿಸಲು ತನುವೆ ಪಂಪಾಕ್ಷೇತ್ರ, ತನ್ನ ಮನವೆ ದೇವಸ್ಥಾನ. ಅಲ್ಲಿ ಮಿನುಪ ಜೀವನೆ ವಿರೂಪಾಕ್ಷನೆನಿಪ ಸಮ್ಯಜ್ಞಾನ. ಕಂಗಳ ಮಧ್ಯ ಕಾಶಿಸ್ಥಳ. ಉಳ್ಳಲುಗಾಟ ಪಂಚಕ್ರೋಶ, ತುಂಗ ಪ್ರಣವನೆ ಶ್ರೀ ವಿಶ್ವೇಶ. ಶಿರವೆ ಶ್ರೀಗಿರಿ. ಗುರು ಸಿದ್ದೇಶ್ವರ, ಬ್ರಹ್ಮರಂಧ್ರವೆ ಗುಡಿಯು. ಮೆರೆವ ಜ್ಯೋತಿ ಪ್ರಭೆಯೇ ಮಲ್ಲೇಶ್ವರ. ಹೀಗೆ ಮೆರೆವ ಜ್ಯೋತಿಯನ್ನು ಕುರಿತೇ ಜ್ಯೋತಿ ಬೆಳಗುತಿದೆ ವಿಮಲ ಪರಂಜ್ಯೋತಿ ಬೆಳಗುತಿದೆಯೆಂದು ನಿಜಗುಣ ಶಿವಯೋಗಿಗಳು ಹಾಡಿದ್ದು.

ಇತರೆ

೧. ಐತಿಹಾಸಿಕ ಸಂಗತಿಗಳು ಸ್ವರವಚನಗಳಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ಚಿತ್ರದುರ್ಗದ ಮೊದಲ ಜಗದ್ಗುರು ಶಾಂತವೀರರು ಲಿಂಗೈಕ್ಯರಾದ ಸಂದರ್ಭದಲ್ಲಿ ರಚಿತವಾದ ಸ್ವರವಚನವೊಂದು ಲಭ್ಯವಾಗಿದೆ. ಅದು 'ಲಿಂಗವಾದ ಮುರಿಗೆ ಶಾಂತವೀರ ಕರುಣಾಪಾಂಗನ ' (ಸ್ವರವಚನ ಸಂಪುಟ-೨-೨೨೧) ಎಂದು ಮುಕ್ತಾಯವಾಗುತ್ತದೆ. ಇಮ್ಮಡಿ

ಮುರಿಗಾ ಗುರುಸಿದ್ಧರು ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಶಿವಾನಂದ ಪುರದಲ್ಲಿ ಲಿಂಗೈಕ್ಯರಾದ ಸಂಗತಿ (ಸ್ವರವಚನ ಸಂಪುಟ ೪-೧೬೬)ರಲ್ಲಿ ದೊರೆಯುತ್ತದೆ. ಅದರಲ್ಲಿ ಇಮ್ಮಡಿ ಮುರುಗಾ ಗುರುಸಿದ್ಧರು ಚಿತ್ರದುರ್ಗದ ಮದಕರಿಯ ಸೇವೆಯನ್ನು ತಿರಸ್ಕರಿಸಿದ್ದು, ಅಲ್ಲಿಂದ ಸೋದೆಗೆ ಹೋದದ್ದು ಅಲ್ಲಿ ಬಸವಲಿಂಗರಾಜನ ಸೇವೆಯನ್ನು ಒಪ್ಪದೆ ಬೀಳಗಿ ಮತ್ತು ಸಾಗರಕ್ಕೆ ಬಂದ ವಿಚಾರಗಳಿವೆ. ಅಲ್ಲಿ ಕೆಳದಿ ಸೋಮಶೇಖರ ದೊರೆ ಮತ್ತು ಅವನ ಬಂಧು ನಿರ್ವಾಣೇಂದ್ರನ ಸೇವೆಯನ್ನು ಸ್ವೀಕರಿಸಿ ಆನಂದಪುರದಲ್ಲಿ ನೆಲಸಿ ಲಿಂಗೈಕ್ಯವಾದ ವಿಚಾರ ವಿವರವಾಗಿದೆ.

ಬಾಲಲೀಲಾಮಹಂತ ಶಿವಯೋಗಿಗಳು ಮುಮ್ಮಡಿ ಕೃಷ್ಣರಾಜನ ಸೇವೆಯನ್ನು ಸ್ವೀಕರಿಸಿ ಅವರು ಕೊಟ್ಟ ನವರತ್ನಾಭರಣಗಳನ್ನು ನಿರಾಕರಿಸುತ್ತಾರೆ. ಅವರ ಪ್ರೀತ್ಯರ್ಥವಾಗಿ ಕುಂಬಳ ಸೊರಟೆಯನ್ನು ಸ್ವೀಕರಿಸಿದ ವಿಚಾರ ಕೈವಲ್ಯ ಕಲ್ಪವಲ್ಲರಿಯಲ್ಲಿ ದಾಖಲಾಗಿದೆ.

ಸೋಮಶೇಖರ ಭೂಪಾಲನರಸಿ ಕೆಳದಿ ಚೆನ್ನವ್ವೆಗೆ ಹೂವಕೊಡೊ ಎಂದು ವಿನಾಯಕನನ್ನು, ವೀರಭದ್ರನನ್ನು ಪ್ರಾರ್ಥಿಸುವ ಸ್ವರವಚನವೊಂದು (ಸ್ವರವಚನ ೧-೨೦೯) ಲಭ್ಯವಾಗಿದೆ. ಅವಳು ಲಕ್ಷದ ಮೇಲೆ ತೊಂಬತ್ತಾರು ಸಾವಿರಕ್ಕೆ ಭಿಕ್ಷವ ನೀಡುತಾಳೆ ಎನ್ನುವ ಮಾತಿನಿಂದ ಅವಳ ವೀರಶೈವನಿಷ್ಠೆ ಎದ್ದು ಕಾಣುತ್ತದೆ. 'ಲೇಸು ವಿಜಯದೊಂದು ಹೂವ ಕೊಡೊ' ಎನ್ನುವ ಮಾತು ಗಮನಾರ್ಹವಾದದ್ದು. ಔರಂಗಜೇಬನನ್ನು ಎದುರು ಹಾಕಿಕೊಂಡು ಶಿವಾಜಿಯ ಮಗ ರಾಜಾರಾಮನಿಗೆ ಆಶ್ರಯ ನೀಡಿದ ಕೆಳದಿ ಚೆನ್ನಮ್ಮನಿಗೆ ಯುದ್ಧ ಪ್ರಸಂಗಗಳು ಅನೇಕವಿದ್ದುವು. ಅವುಗಳಲ್ಲಿ ವಿಜಯಕ್ಕಾಗಿ ವರವನ್ನು ಬೇಡುವ ಈ ಸ್ವರವಚನ ಅತ್ಯಂತ ಹೃದಯಂಗಮವಾಗಿದೆ.

ಕರಿಬಸವೇಶ್ವರನ ವಚನಗಳಲ್ಲಿ ಕೊಟ್ಟೂರ ಬಸವೇಶ, ಕೆಂಪನಂಜೇಶ, ಕೆಂಪ ಮಲ್ಲೇಶ, ಕೆಂಪ ಸೋಮೇಶ, ಕೆಂಪ ಗಂಗಾಧರ, ಕೆಂಪ ಬಸವರಾಜ ಮುಂತಾದ ಶರಣ ಸಂಕುಲವನ್ನು ನೆನೆಯುವುದಲ್ಲದೆ ಮೈಸೂರಿನ ಚಾಮರಾಜ, ಚನ್ನಪಟ್ಟಣದ ಜಗದೇವರಾಯ, ಯಳಂದೂರಿನ ರಾಯರಾವುತ ರಾಮರಾಯ ಖಾನರಾಯ, ಯಳಂದೂರಿನ ಚನ್ನ ಒಡೆಯ ಎನ್ನುವವರನ್ನು ಹೆಸರಿಸಿದ್ದಾನೆ. ವಿಜಾಪುರದ ಅಲಿ ಆದಿಲ್‌ಷಹನ ಪತ್ನಿ ಚಂದಬೀಬಿಯನ್ನು ನೆನೆದಿರುವುದು ಒಂದು ವಿಶೇಷ.

ಸ್ವರವಚನಗಳು ಮತ್ತು ಹರಿದಾಸರ ಕೀರ್ತನೆಗಳ ನಡುವೆ ಕೊಡುಕೊಳೆಗಳು ನಡೆದಿವೆ. ಇದಕ್ಕೆ ಕಾರಣ ಅವು ಚರಸಾಹಿತ್ಯಗಳು. ಹಾಡುವವರಿಗೆ ಪದ ಮುಖ್ಯವೇ ವಿನಃ ಅದು ಯಾರದು, ಎಲ್ಲಿಯದು ಎನ್ನುವ ಪರಿವೆ ಇರುವುದಿಲ್ಲ. ಶಿವಪರವಾದದ್ದನ್ನು ವಿಷ್ಣುಪರವಾಗಿ ಮಾಡುವುದು, ವಿಷ್ಣುಪರವಾಗಿದ್ದುದನ್ನು ಶಿವಪರವಾಗಿ ಮಾಡುವುದು ನಡೆದುಕೊಂಡೇ ಬಂದಿದೆ. ಅಂತಹ ಒಂದು ರಚನೆ ಹಾಗಲ್ವಾಡಿ ಮುದ್ವೀರಸ್ವಾಮಿಗಳ 'ಯಾಕೆ ಕಳವಳಿಸುವೆ ಕಕುಲಾತಿ ಪಡುತಿ ಎಲೆ ಮರುಳೆ ಮೂರುಲೋಕವನು ಸಲಹುವಂಥ ಸಂಗಮೇಶ್ವರ ನಮ್ಮ ಸಾಕಲಾರದೆ ಬಿಡುವನೆ' (೯೪) ಎನ್ನುವ ಸ್ವರವಚನದಲ್ಲಿ 'ಅನಗ್ಯೆದುಮಣಿವಿನ ಆಹಾರವನ್ನು ಅಲ್ಲಿ ತಾವೆ ತಂದಿರ್ಪರಾರು, ಕಲ್ಲ ಒಳಗೆ ಕಪ್ಪೆಗೆ ಆಹಾರವನು ಅಲ್ಲಿ ತಂದಿರ್ಪರಾರು,

ಉದರದೊಳಗಿನ ಶಿಶುವಿಗೆ ಪಾಲು ಬೆಣ್ಣೆ ಮುದದಿ ನಡೆಸುವರದಾರು, ಅಡವಿಯೊಳಗಿನ ಮೃಗಜಾತಿಗೆ ಪಡಿನಡೆಸುವವರು ಯಾರು' ಎಂದು ಮುಂದುವರೆದು 'ಸಂಗಮೇಶ್ವರ ನಮ್ಮ ಸಾಕಲಾರದೆ ಬಿಡುವನೆ ಕಂಡವರ ಕಾಲಿಗೆರಗಬೇಕ' ಎಂದು ತಿಳಿಸುತ್ತದೆ.

ಸ್ವರವಚನಗಳ ಸಾಹಿತ್ಯ ಉತ್ಕೃಷ್ಟವಾದುದಾಗಿದೆ. ಉಪಮೆಗಳು, ರೂಪಕಗಳಿಂದ ಈ ಕಾಲದ ಸ್ವರವಚನಗಳು ಸಮೃದ್ಧವಾಗಿವೆ. ಕಸ್ತೂರದೇವರ ಸ್ವರವಚನವೊಂದರಲ್ಲಿ, 'ಈದ ಹುಲಿಯ ಮೆಳೆಯ ಹೊದರೊಳು ಹುಲ್ಲಿರೆ ಮೇದು ಜೀವಿಸಿದೆರಳೆಗಳುಂಟೆ? ಕಡಜನಿರುವ ಗೂಡನು ಸೋಂಕಿ ದಶವು ಕಡಿಯದೆ ಬಿಡವೆ? ಆದುದರಿಂದ ಕೆಡುಕರ ಸಹವಾಸವನ್ನು ಬಿಡು' ಎನ್ನುವಲ್ಲಿ ಬರುವ ಈ ಉಪಮೆಗಳು ನಿತ್ಯ ರೂಢಿಯಲ್ಲಿರುವವಾದರೂ ಸಮರ್ಥವಾಗಿ ಬಳಕೆಯಾಗಿವೆ. ಡೊಂಬನು ಮೇಲು ಗುಲಾವಿಯನಿಕ್ಕಲು ಕುಂಭಿನಿಯಾಳ್ವಡೆಯರಸಹನೆ, ಪಣ್ಯಾಂಗನೆ ಎಷ್ಟೊಳ್ಳೆವಳಾದಡೆ ಪುಣ್ಯಾಂಗನೆಗವಳ್ಸರಿಯಹಳೆ, ಕೋಗಿಲ ಧ್ವನಿ ಚೆನ್ನಾದಡೆ ಹಾಡುವ ರಾಗವ ಬಲ್ಲುದೆ ಅದು ತಾನು, ಬಿಂಗಾರವು ಬಂಗಾರಕೆ ಸರಿಯೆ, ಹೊಂಗೆಯ ಮರನದು ತೆಂಗಿಗೆ ಸರಿಯೆ ಎಂದು ಒಂದಾದ ಮೇಲೆ ಒಂದು ಉಪಮೆಯನ್ನು ಬೆಳೆಸಿಕೊಂಡು ಬಂದು ಕಡೆಯದಾಗಿ ಅಂಗದ ಮಲಭಾಂಡೆಯು ಗುರುಸಿದ್ಧಲಿಂಗನ ಸರಿಯಹುದೆ? ಎನ್ನುವಲ್ಲಿ ಉಪಮೆಗಳಿಗೆ ಸಾರ್ಥಕ್ಯವನ್ನು ತಂದು ತಮ್ಮ ಗುರಿಯನ್ನು ಸಾಧಿಸಿದ್ದಾರೆ.

ಸಪ್ಪಣ್ಣನವರ ಸ್ವರವಚನಗಳಲ್ಲಿ ರೂಪಕ ಸಾಮ್ರಾಜ್ಯವನ್ನು ಕಾಣಬಹುದು. ಕಾಯಕಾಂತಾರವ ಹೊಕ್ಕು ಬೇಂಟೆಯನಾಡಿ(೧೭), ಶರೀರವೆಂದೆಂಬುವ ಹೊಲನ ಹಸನ ಮಾಡಿ(೨೨), ತನುವೆ ಪಂಪಾಕ್ಷೇತ್ರ, ಮನವೆ ದೇವಸ್ಥಾನ(೫) ಮುಂತಾದ ಸ್ವರವಚನಗಳು ಸಾಧಕನಿಗೆ ಮುಂದಿನ ಸಾಧನೆಗೆ ತೋರುಗಂಬಗಳಾಗಿವೆ.

ಬೆಡಗನ್ನು ಶರಣರು ತಮ್ಮ ಅನುಭಾವವನ್ನು ವರ್ಣಿಸುವಲ್ಲಿ ಆಧರಿಸುತ್ತಾರೆ. ಅಲ್ಲಮ ಪ್ರಭುದೇವರ ವಚನಗಳು ಇದಕ್ಕೆ ಸಾಕ್ಷಿ. ಆ ಪರಂಪರೆ ಬೆಳೆದು ಬಂದು ಬೆಡಗಿನ ವಚನಗಳು ಸೃಷ್ಟಿಯಾದುವು. ಸ್ವರವಚನಗಳಲ್ಲಿ ಕೂಡ ಬೆಡಗಿನ ಬಳಕೆ, ಮುಂಡಿಗೆಗಳ ಬಳಕೆ ಸಾಕಷ್ಟಾಗಿದೆ. ಮೈಲಾರ ಬಸವ 'ಲಿಂಗ ಶರಣರ ಕೋಣನ ಕೊಂಬಿಲಿ ನೇಣು ಕಾಣಸುತಿದೆ ಕೇಳಿ ಕೇಳಿ' ಸೋಮೇಕಟ್ಟೆ ಕರಿವೃಷಭೇಂದ್ರರ 'ಹಾದರವ ನಾನರಿಯದಿದ್ದೆ ಸಿದ್ಧ ಪುರುಷರ ಕಣ್ಣಲ್ಲಿ ನೋಡದಿದ್ದೆ' (೩೧ ಪಲ್ಲವಿ), ಕಡಕೋಳ ಮಡಿವಾಳಪ್ಪನವರ 'ಕೋಡಗನ ಕೋಳಿ ನುಂಗಿತ್ತ' (೮೧) ಮುಂತಾದ ಬೆಡಗಿನ ಸ್ವರವಚನಗಳು ಈ ಕಾಲದಲ್ಲಿ ಸೃಷ್ಟಿಯಾಗಿವೆ.

ಜನಸಾಮಾನ್ಯರನ್ನು ತಲಪುವ ಉದ್ದೇಶದಿಂದ ರಚಿತವಾದ ಸ್ವರವಚನಗಳಲ್ಲಿ, ಶಿಷ್ಟ ಭಾಷೆಯ ಜೊತೆಗೆ, ವೀರಶೈವದ ತಾಂತ್ರಿಕ ಭಾಷೆ ಮಿಳಿತವಾಗಿದೆ. ಕೆಲವೆಡೆ ಬೆಡಗಿನ ಭಾಷೆ ವಿಜೃಂಭಿಸುತ್ತದೆ. 'ಒಲ್ಲೆನಪ್ಪೋ ಹೆಂಡಿರನೊಲ್ಲೆನಪ್ಪೋ' ಎನ್ನುವಂಥ ಜನಸಾಮಾನ್ಯರ ಭಾಷೆಯೂ ಇದೆ. ಉತ್ತರ ಕರ್ನಾಟಕದ ಸ್ವರವಚನಗಳಲ್ಲಿ ಅಲ್ಲಿ ಈ ಕಾಲದಲ್ಲಿ ಪ್ರಚಲಿತವಿದ್ದ ಪಾರಸಿ, ದಖನಿ, ಉರ್ದು ಶಬ್ದಗಳು ಸೇರಿಕೊಂಡಿವೆ. ಕಡಕೋಳ ಮಡಿವಾಳಪ್ಪ 'ಥೋಡಿ ದಿನದ ಸಂತಿ' ಎನ್ನುವ ಸ್ವರವಚನದಲ್ಲಿ ಧಥೋಡಿ, ಖೋಡಿ

ಶಬ್ದಗಳನ್ನು ಬಳಸಿರುವುದನ್ನು ಈ ಸಂದರ್ಭದಲ್ಲಿ ಗಮನಿಸಬಹುದಾಗಿದೆ. ಗರ್ಜು, ಪರ್ಜು, ಅರ್ಜಿ, ಮರ್ಜಿ ಮುಂತಾದ ಶಬ್ದಗಳು ಅಲ್ಲಿ ಸಾಕಷ್ಟು ಸಲ ಬಳಕೆಯಾಗಿವೆ.

ವಚನ ಸಾಹಿತ್ಯ ಪ್ರಕಾರವನ್ನು ಕುವೆಂಪು, ಎಸ್. ವಿ. ರಂಗಣ್ಣ, ಸಿದ್ಧಯ್ಯ ಪುರಾಣಿಕರು ಆಧುನಿಕ ಯುಗದ ಅನುಭವಗಳ ಅಭಿವ್ಯಕ್ತಿಗೆ ಬಳಸಿಕೊಂಡರು. ಅದರಲ್ಲಿ ಅದ್ಭುತವಾದ ಯಶಸ್ಸನ್ನು ಸಾಧಿಸಿದರು. ಸ್ವರವಚನ ಸಾಹಿತ್ಯ ಪ್ರಕಾರ ಕೂಡ ಮುಂದೆ ಈ ಬಗೆಯ ಸಾಧ್ಯತೆಗಳಿಗೆ ತೆರೆದುಕೊಳ್ಳುವ ಸಾಧ್ಯತೆಯಿದೆ.



# ಹೈದ್ರಾಬಾದ ಕರ್ನಾಟಕದ ಮೌಖಿಕ ಸ್ವರವಚನಗಳು

*ವೀರಣ್ಣ ದಂಡೆ*

ನಾವೀಗ ಕನ್ನಡ ಸಾಹಿತ್ಯದ ಕಲ್ಪನೆಯನ್ನು ತಪ್ಪಾಗಿ ಗ್ರಹಿಸಿದಂತೆ ತೋರುತ್ತದೆ. ನಮ್ಮ ಈಗಿನ ಗ್ರಹಿಕೆಯಂತೆ ಕನ್ನಡ ಸಾಹಿತ್ಯವೆಂದರೆ 'ಕೇವಲ ಅಕ್ಷರಮಾಧ್ಯಮದಲ್ಲಿ ಹುಟ್ಟಿಕೊಂಡ ಶಿಷ್ಟಸಾಹಿತ್ಯ' ಎಂಬಷ್ಟಕ್ಕೆ ನಾವು ಸೀಮಿತರಾಗಿದ್ದೇವೆ. ಕನ್ನಡ ಸಾಹಿತ್ಯವನ್ನು ಬೆಳೆಸಿದ, ಪೋಷಿಸಿದ; ಶಿಷ್ಟಸಾಹಿತ್ಯ ಹುಟ್ಟಲು, ಸಮೃದ್ಧವಾಗಿ ಬೆಳೆಯಲು ಕಾರಣವಾದ ಮತ್ತು ಶಿಷ್ಟಸಾಹಿತ್ಯ ಹುಟ್ಟುವುದಕ್ಕಿಂತ ಮುಂಚಿನಿಂದಲೂ ಕನ್ನಡಕ್ಕೊಂದು ಸಾಹಿತ್ಯ ಕ್ಷೇತ್ರವನ್ನು ಒದಗಿಸಿಕೊಟ್ಟ ಕೀರ್ತಿ ಜನಪದ ಸಾಹಿತ್ಯಕ್ಕೆ ಸಲ್ಲುತ್ತದೆ.

ಜನಪದ ಸಾಹಿತ್ಯ ಮತ್ತು ಶಿಷ್ಟಸಾಹಿತ್ಯಕ್ಕಿಂತ ಭಿನ್ನವಾದ ಕನ್ನಡ ಸಾಹಿತ್ಯದ ಇನ್ನೊಂದು ಪ್ರಕಾರ ಅನುಭವ ಸಾಹಿತ್ಯ ಅಥವಾ ಸ್ವರವಚನ ಸಾಹಿತ್ಯವನ್ನು ಕೂಡ ನಾವು ಇನ್ನೂ ಗಂಭೀರವಾಗಿ ಪರಿಗಣಿಸುತ್ತಿಲ್ಲ.

ಈ ರೀತಿ ಜನಪದ ಸಾಹಿತ್ಯ, ಅನುಭವ ಸಾಹಿತ್ಯ ಅಥವಾ ಸ್ವರವಚನ ಸಾಹಿತ್ಯ ಮತ್ತು ಶಿಷ್ಟಸಾಹಿತ್ಯ ಇವು ಮೂರೂ ಕನ್ನಡ ಸಾಹಿತ್ಯದ ಪ್ರಮುಖ ವಾಹಿನಿಗಳಾಗಿವೆ.

ವಿಶೇಷವಾಗಿ ಹೈದ್ರಾಬಾದ್ ಕರ್ನಾಟರದಲ್ಲಿ ನಾವು ಅನುಭವಿಸಿದ ಪಾರತಂತ್ರ್ಯದ ಅವಧಿಯಲ್ಲಿ (ಕ್ರಿ. ಶ. ೧೩೪೭ ರಿಂದ ೧೯೪೮) ಶಿಷ್ಟಸಾಹಿತ್ಯದ ಕೃಷಿ ಲೆಕ್ಕಕ್ಕೆ ಹಿಡಿಯುವಷ್ಟು ಆಗಲೇ ಇಲ್ಲ. ಆ ಅವಧಿಯಲ್ಲಿ ಸೃಷ್ಟಿಯಾದವು ಜನಪದ ಸಾಹಿತ್ಯ ಮತ್ತುಸ್ವರವಚನ ಸಾಹಿತ್ಯ(ಅನುಭವ ಸಾಹಿತ್ಯ) ಈ ಎರಡು ಸಾಹಿತ್ಯ ವಾಹಿನಿಗಳು ಮಾತ್ರ. ಹೀಗಾಗಿ ಶಿಷ್ಟ ಸಾಹಿತ್ಯ ಸೋಲುವ ಸ್ಥಳಗಳಲ್ಲೂ ಜನಪದ ಸಾಹಿತ್ಯ ಮತ್ತು ಅನುಭವ ಸಾಹಿತ್ಯಗಳು ಒಂದು ಭಾಷೆಯನ್ನು ಕ್ರಿಯಾಶೀಲವಾಗಿ, ಜೀವಂತವಾಗಿ ಉಳಿಸುತ್ತವೆ ಎಂಬುದು ಮುಖ್ಯ ಸಂಗತಿ. ಈ ಸಂದರ್ಭದಲ್ಲಿ ಒಂದು ಮಾತು ಹೇಳಬೇಕೆನಿಸುತ್ತದೆ. ಈಗಿರುವ ನಮ್ಮ ಸಾಹಿತ್ಯದ ಮೇಲಿನ ಇಂಗ್ಲೀಷಿನ ಕಪಿಮುಷ್ಠಿ ಹಿಡಿತದಿಂದ ಕಡೆಗಾಗಲು ಮತ್ತು ಉತ್ತಮ ಸಾಹಿತ್ಯ ನಿರ್ಮಾಣಮಾಡಲು ನಾವು ಪರ್ಯಾಯ ಮಾರ್ಗವನ್ನು ಕಂಡುಕೊಳ್ಳಬೇಕಾಗಿದೆ. ಅದು ಜನಪದ ಸಾಹಿತ್ಯ ಮತ್ತು ಅನುಭವ ಸಾಹಿತ್ಯವನ್ನು ಇಂಗ್ಲೀಷಿಗೆ ಬದಲಾಗಿ ಅಭ್ಯಾಸದಲ್ಲಿ ಅಳವಡಿಸಿಕೊಂಡರೆ ಖಂಡಿತ ಹೊಸಗನ್ನಡ ಸಾಹಿತ್ಯ ಹೊಸ ಜೀವ ಪಡೆಯಲು ಸಾಧ್ಯವಿದೆ.

*

ಮಾಡೊ ಮಾಡೊ ನೀ ಶಿವಧ್ಯಾನ
ಮಾಡೊ ಮಾಡೊ ನೀ ಗುರುಧ್ಯಾನ
ಭಕ್ತಿಯಲಿಂದ ಭಜನ ಮಾಡಿದರೆ
ದೇವರು ನಿಮಗೊಲಿತಾನೋ!

ಭಕ್ತಿ ಮತ್ತು ಭಜನ(ಸ್ತುತಿ) ಈ ಎರಡು ಅಂಶಗಳು ಮೌಖಿಕ ಪರಂಪರೆಯ ಸ್ವರವಚನಗಳ ಮುಖ್ಯ ಆಶಯಗಳು.

ಹೈದ್ರಾಬಾದ್ ಕರ್ನಾಟಕದ ಸ್ವರವಚನಗಳ ಪ್ರದರ್ಶನಸಾಧ್ಯತೆಯನ್ನು ಗಮನಿಸಿ ಅವುಗಳನ್ನು ಹೀಗೆ ಗುರುತಿಸಬಹುದು :

ಅ. ಪ್ರಮುಖ ಸಂದರ್ಭಗಳು
೧. ಏಕತಾರಿಯ ಜೊತೆ ಒಬ್ಬನೇ ಹಾಡುವುದು
೨. ಭಜನಾಮೇಳ

ಬ. ಪ್ರಾಸಂಗಿಕ ಸಂದರ್ಭಗಳು
೩. ಲಾವಣಿ- ಗಿಗೀ ಸಂದರ್ಭ
೪. ಹೆಣ್ಣುಮಕ್ಕಳ ಶುಭಕಾರ್ಯದ ಸಂದರ್ಭಗಳು

### ೧. ಏಕತಾರಿಯ ಜೊತೆ ಒಬ್ಬನೇ ಹಾಡುವುದು

ಏಕತಾರಿಯೊಂದಿಗೆ ಹಾಡುವ ಹಾಡುಗಳನ್ನು ತತ್ತ್ವಪದಗಳೆಂದು ಕರೆಯಬಹುದು. ಇವನ್ನು ಒಬ್ಬನೇ ಬಹುಮಟ್ಟಿಗೆ ಏಕಾಂತದಲ್ಲಿ, ಕೆಲವೊಮ್ಮೆ ಜನಸಮ್ಮುಖದಲ್ಲಿ ಹಾಡಿಕೊಳ್ಳುತ್ತಾನೆ. ಹೀಗಾಗಿ ಇವು ಒಂದು ರೀತಿಯಲ್ಲಿ ಆತ್ಮನಿವೇದನೆಗಳೆನಿಸಿಕೊಳ್ಳುತ್ತವೆ. ಸಂಸಾರ ಶಾಶ್ವತವಲ್ಲ. ಮನುಷ್ಯನಿಗೆ ಇದೊಂದು ಬಂಧನ. ಇಲ್ಲಿಂದ ಮುಕ್ತಿ ಪಡೆಯಬೇಕಾದುದು ಅವಶ್ಯ. ಅದಕ್ಕಾಗಿ ನಮಗೊಬ್ಬ ಮಾರ್ಗದರ್ಶಕ ಗುರು ಅವಶ್ಯ ಎಂಬಂತಹ ಚಿಂತನೆಗಳನ್ನು ಈ ಹಾಡುಗಳು ಹೆಚ್ಚು ತಾತ್ತ್ವಿಕ ನೆಲೆಯಲ್ಲಿ ಬಿತ್ತರಿಸುತ್ತವೆ.

### ೨. ಭಜನಾಮೇಳ

ಹೈದ್ರಾಬಾದ್ ಕರ್ನಾಟಕದ ಭಜನಾಮೇಳಗಳಲ್ಲಿ ಎರಡು ಪ್ರಕಾರಗಳು ಬಹುಪ್ರಮುಖವಾಗಿ ಕಂಡುಬರುತ್ತವೆ. ೧. ಶಿವಭಜನೆ ಅಥವಾ ಸಂಗೀತ ಭಜನೆ, ೨. ಪಾರಿಜಾತ ಭಜನೆ.

ಶಿವಭಜನೆಯಲ್ಲಿ ಸಾಕಷ್ಟು ಜನರಿರಬಹುದು. ಭಜನೆಯ ಸಂದರ್ಭದಲ್ಲಿ ಎಲ್ಲರ ಕೈಯಲ್ಲೂ ತಾಳಗಳಿರುತ್ತವೆ. ದಮ್ಮಡಿ, ದಗ್ಗಾ, ಮೃದಂಗ, ಹಾರ್ಮೋನಿಯಂ, ಪಿಟೀಲು,

ಜಾಗಟೆ ಮುಂತಾದವುಗಳು ಇಲ್ಲಿ ಬಳಕೆಯಾಗುತ್ತವೆ. ಇಲ್ಲಿ ಮುಮ್ಮೇಳದಲ್ಲಿ ಒಬ್ಬ ಅಥವಾ ಇಬ್ಬರು ಹಾಡಬಹುದು. ಹಿಮ್ಮೇಳದಲ್ಲಿ ಇಡೀ ಭಜನೆಗೆ ನಿಂತ ಎಲ್ಲರೂ ಹಾಡುತ್ತಾರೆ.

ಏಕತಾರಿ ಹಾಡುಗಳು ಅಥವಾ ತತ್ತ್ವಪದಗಳೂ ಇಲ್ಲಿ ಬಳಕೆಯಾಗುತ್ತವೆ. ಇವುಗಳ ಜೊತೆ ವ್ಯಾಪಕವಾಗಿ ಪ್ರಾಪಂಚಿಕ ಜೀವನಕ್ಕೆ ಸಂಬಂಧಿಸಿದ ಅನೇಕ ಸಂಗತಿಗಳು ಜೀವನದ ಪ್ರಮುಖ ಘಟನೆಗಳು, ಸ್ಥಳೀಯ ಮಹಾತ್ಮರ ಮತ್ತು ಐತಿಹಾಸಿಕ ವ್ಯಕ್ತಿಗಳ ಚರಿತ್ರೆಗಳು, ದೇವ ದೇವತೆಗಳಿಗೆ ಸಂಬಂಧಿಸಿದ ಸಂಗತಿಗಳು ಈ ಭಜನೆಯಲ್ಲಿ ಕಥೆಮಾಡಿ ಹಾಡಲಾಗುತ್ತದೆ. ಈ ಭಜನಾ ಮೇಳಗಳು ಸ್ಪರ್ಧೆಗೂ ಇಳಿಯುವುದರಿಂದ ಹರದೇಶಿ-ನಾಗೇಶಿ ಪಂಗಡಗಳಂತೆ ವಾದಿ ಪ್ರತಿವಾದಿ ಹಾಡುಗಳೂ ಇಲ್ಲಿ ಬಳಕೆಯಾಗುತ್ತವೆ.

ಪಾರಿಜಾತ ಭಜನಾ ಮೇಳದಲ್ಲಿ ದಮ್ಮಡಿ ಪ್ರಮುಖ ವಾದ್ಯ. ಎರಡು-ಮೂರು ಜೊತೆ ತಾಳಗಳು, ಏಕತಾರಿ ಇಲ್ಲವೆ ಹಾರ್ಮೋನಿಯಂ ಇಲ್ಲಿ ಬಳಕೆಯಾಗುವ ವಾದ್ಯಗಳು. ಮುಂದೆ ಒಬ್ಬ ಹಾಡುತ್ತಿದ್ದು ಇನ್ನೊಬ್ಬ ದನಿಗೂಡಿಸುತ್ತಲೂ ಇರಬಹುದು. ಹಿಂದೆ ಇಬ್ಬರು ಅಥವಾ ಮೂವರು ತಾಳಹಾಕುತ್ತ ದನಿಗೂಡಿಸುತ್ತಾರೆ. ಹೀಗೆ ಈ ಭಜನಾ ಮೇಳದ ಸಂಖ್ಯೆ ಐದಾರು ಜನರದಾಗಿರುತ್ತದೆ. ಇಲ್ಲಿ ಬಳಕೆಯಾಗುವ ಹಾಡುಗಳು ಕೇವಲ ತತ್ತ್ವಪದಗಳು. ಅಂದರೆ ಏಕ್ತಾರಿ ಹಿಡಿದು ಒಬ್ಬನೇ ಹಾಡಿಕೊಳ್ಳುವ ಹಾಡುಗಳನ್ನು ಇಲ್ಲಿ ಹಾಡಲಾಗುತ್ತದೆ. ಶಿವಭಜನೆಯಲ್ಲಿ ಹಾಡುವ ಚರಿತ್ರಾತ್ಮಕ, ಘಟನಾತ್ಮಕ ಹಾಡುಗಳು ಇಲ್ಲಿ ಬಳಕೆಯಾಗುವುದಿಲ್ಲ.

## ೩. ಲಾವಣಿ-ಗೀಗೀ ಸಂದರ್ಭ

ಈಗಿನ ಲಾವಣಿ ಅಥವಾ ಗೀಗೀ ಹಾಡುಗಳ ಹಾಡುಗಾರಿಕೆಯನ್ನು ಗಮನಿಸಿದರೆ ಅಲ್ಲಿ ಪ್ರತಿ ಪದ್ಯದ ಮೊದಲಿಗೊಂದು ಸಖಿ, ಹಾಡು ಮುಂದುವರೆದ ನಂತರ ಒಂದು ಖ್ಯಾಲಿ ಪ್ರಯೋಗಗೊಳ್ಳುವುದನ್ನು ಕಾಣುತ್ತೇವೆ. ಈ ಸಖಿ ಹಾಗೂ ಖ್ಯಾಲಿಗಳ ರೂಪದಲ್ಲಿ ಆಗಾಗ ತತ್ತ್ವಪದಗಳು ಉಪಯೋಗವಾಗುತ್ತವೆ. ಹೀಗೆ ಸ್ವರವಚನ ಸಾಹಿತ್ಯ ಲಾವಣಿ ಹಾಡಿನ ಪ್ರಸಂಗದಲ್ಲಿ ಬಳಕೆಯಾಗಲು ಕಾರಣವೆಂದರೆ ಬಹಳಷ್ಟು ಲಾವಣಿಕಾರರು ಸ್ವರವಚನ ಸಾಹಿತ್ಯ ಅಥವಾ ಅನುಭವ ಹಾಡುಗಳನ್ನು ರಚಿಸಿರುವುದು. ದೇಗಾಯಿಯ ಮಹಾಲಿಂಗ, ಗುಂಡಪ್ಪ ಪ್ರಸಿದ್ಧ ಲಾವಣಿಕಾರರಾಗಿದ್ದು, ಅವರು ರಚಿಸಿದ ಸಖೀ ಖ್ಯಾಲಿಗಳು ತತ್ತ್ವಪದಗಳೇ ಆಗಿರುತ್ತವೆ.

**ಸಖಿ**

ಶಿವಶಿವ ಶಿವ ಶಿವನ ಸ್ಮರಣಿ। ಮಾಡತಿ ನಿ ಭಜನಿ।
ನೀನೆ ಮರತೆಕ ಧನಿ। ನಿನ್ನ ಹೊಗತ ಇನ್ನ್ಯಾರಿಲ್ಲ ಶಿವನೆ। |೧|
ನೀನೆ ಅರಸ ಪ್ರಧಾನಿ।

ನೀ ಇರುವಲ್ಲದ ಜಾಗ ಎಲ್ಲಿ ಇಲ್ಲಾ।ಬಿಟ್ಟಿಲ್ಲ ಮುಳ್ಳಿನ ಕೊನಿ
ಅಲ್ಲೇ ಅಮೃತ ಧನಿ। ಸವಿ ಸವಿ ಮಾಡಿ ನಾ ಸುಟಗೊಂಡು ತಿತ್ತಿನಿ
ನೀನೆ ಬಿಳಿಜೋಳದ ತೆನಿ ।೨।

ಕಣ್ಣ ಮೂಗ ಕಿಂವಿ ಹಲ್ಲ ನಾಲಗಿ
ಎಲವ ತೊಗಲ ಬಾರದಾನಿ। ಜೀವಶಿವ ಅನುಭವ
ಅಲ್ಲೆ ನಿನ್ನ ಅರಮನಿ ।೩।

ಕಾಡೊ ಕಂಟಕ ಬಂದೊ ಹಿಡಿದಿತೊ ಕೈಕಾಲ ನನ್ನ ಗಾರ್ಧನಿ
ಮಾಡಿಕೆರಿ ಗಾಯನಿ। ಕಾಡೊ ಕಂಟಕ ಕಡಿಗ ನೂಕಿನಿ
ಅಲ್ಲೆ ನಿಂತಿದೆನು ಸನಿ ।೪।

ಕವಿ ಮಹಲಿಂಗಪ್ಪ ಸಖಿ ಹೇಳಿದನು। ಸಹಸ್ರನಾಮ ಸಾರಧನಿ।
ಮಾಡಿಕೆರಿ ಗಾಯನಿ। ಪಾಪಪುಣ್ಯ ಪಡತಳಸಿ ನೋಡಿ
ಹಿಡಿ ನೆಟ್ಟಗ ತಕ್ಕಡಿ ಧನಿ ।೫।

(ಮಹಲಿಂಗ ದೇಗಾಯಿ)

ಖ್ಯಾಲಿ

ಬೆಳಗಾಗಿತ ತಂಗಿ ಕಸ ತಗಿ ಉಡಗಿ
ಕರ್ಮ ಎಂಬೊ ಕಸವನು ಉಡಗಿ
ಪಂಚತತ್ತ್ವದು ಹಿಡಿಯ ಭಾರಿಗಿ
ಧರ್ಮ ಎಂಬೊ ಬುಟ್ಟ್ಯಾಗ ತುಂಬಿ। ಚಿಲ್ಲರ ಗುಣವೆಲ್ಲ ಚೆಲ್ಲ ತಿಪ್ಪಿಗಿ ।೧।

ಗರ್ವ ಎಂಬೊ ಗಂಗಾಳ ಚರಗಿ
ಸೂಚಿರ್ಭೂತ ಬೂದಿಲಿ ಬೆಳಗಿ
ಪತ್ತಿಲಿಂದ ಪತಡಿ ಹಾಕಿ। ನಿಷ್ಠೆಲಿಂದ ಪುಟುಮಾಡು ವಲಿಗಿ ।೨।

ನಿರಾಳ ಗುಣ ಎಂಬೊ ಕಾಸ ನೀರಿಗಿ
ಅನುಭವದ ಅಟ್ಟದ ಅಡಗಿ
ಮರ್ಮ ತಿಳಿದು ಗದ್ದಗಿ ಹಾಸಿ। ಮುಟ್ಟಿಸು ವಯ್ದು ಗುರುವಿನ ಅಡಿಗಿ ।೩।

ದೇಶದೊಳು ದ್ಯಾಗಾಯಿ ಮೆಟ್ಟಗಿ
ಆನಂದರಾಯನ ಗೋರಿ ಪಟ್ಟಿಗಿ
ಭಾವದಿಂದ ಧಾವ ಮಾಡಿದರ ಹಜರತ ಕವಿ ಬಂದ ಭೆಟ್ಟಿಗಿ ।೪।

(ಆನಂದರಾಯ ದೇಸಾಯಿ)

## ೪. ಹೆಣ್ಣು ಮಕ್ಕಳ ಶುಭಕಾರ್ಯ ಸಂದರ್ಭಗಳು

ಹೆಣ್ಣು ಮಕ್ಕಳ ಶುಭಕಾರ್ಯದ ಸಂದರ್ಭಗಳಾದ ಮೈನೆರೆದ, ಸೋಬಾನ ಹಾಗೂ ಕುಪ್ಪಸದ ಸಂದರ್ಭಗಳಲ್ಲಿ ಆಗಾಗ ಅನುಭವಪದಗಳೆಂದು ಈ ಸ್ವರವಚನಗಳನ್ನು ಹಾಡುವರು. ಇವು ತತ್ತ್ವಪದಗಳೇ ಆಗಿರುತ್ತವೆ.

ಬೀಸನು ಗೋದಿ ಹಸನಾಗಿ ಹಾಡಿ
ಹಾದಿಯೊಳಗ ಮೂರು ಬೀದಿ ಕಲತಾವ ಗೆಳದಿ। ಬೀಸಾನು ಗೋದಿ ।೧।

ಹಾದಿಯ ನಟ್ಟ ನಡುವ ಗುಡಿಯದ ಗೆಳದಿ
ಗುಡಿಯಮುಂದ ದೇವರನ್ನ ಕೊಯ್ಯಾರೆ ಗೆಳದಿ।ಬೀಸಾನು ಗೋದಿ ।೨।

ಕೊಯ್ದು ಮಾಡ್ಯಾರ ಅಡಗಿ ಅಡಗ್ಯಾಗ ಹಾಕ್ಯಾರ ಗಡಿಗಿ
ಅಡಗಿ ಬಿಟ್ಟು ಗಡಗೀಲೆ ಉಂಡಾರೆ ಗೆಳದಿ ।ಬೀಸಾನು ಗೋದಿ ।೩।

ದೇಶಕಧಿಕವಾದ ವಾಸುಳ್ಳ ರಾಮಪೂರ
ಖಾಸ ಚಿಕ್ಕಪ್ಪಯ್ಯ ಹೀಂಗ ಹೇಳ್ಯಾನ ಗೆಳದಿ ।ಬೀಸಾನು ಗೋದಿ ।೪।

ಸ್ವರವಚನಗಳ ವೈವಿಧ್ಯತೆ ಕಾಣುವುದು ಅವುಗಳನ್ನು ರಚಿಸುವವರನ್ನು ಗಮನಿಸಿದಾಗ. ನಮಗೆ ಮೂರು ಬಗೆಯ ಸ್ವರವಚನಕಾರರು ಕಾಣಿಸುತ್ತಾರೆ. ಈ ಮೂರೂ ಗುಂಪಿನ ಜನ ರಚಿಸಿದ ಸ್ವರವಚನಗಳು ವಸ್ತು ಮತ್ತು ತಂತ್ರಗಳ ದೃಷ್ಟಿಯಿಂದ ಭಿನ್ನವೆನಿಸುತ್ತವೆ. ಆದಕ್ಕಾಗಿ ಆ ಗುಂಪುಗಳನ್ನಾಗಿಸಿಕೊಂಡೇ ಸ್ವರವಚನಕಾರರ ಸ್ವಭಾವ ಮತ್ತು ಅವರು ರಚಿಸಿದ ಸ್ವರವಚನಗಳ ವಸ್ತುವೈವಿಧ್ಯತೆಗಳ ಬಗ್ಗೆ ಈ ಮುಂದೆ ವಿಚಾರ ಮಾಡಲಾಗುವುದು.

### ಸ್ವರವಚನಕಾರರನ್ನು ಹೀಗೆ ಗಮನಿಸಬಹುದು

೧. ಬ್ರಹ್ಮಚಾರಿ ಶಿವಯೋಗಿಗಳು
೨. ಸಂಸಾರದಿಂದ ವಿಮುಖರಾದವರು
೩. ಸಂಸಾರಿಗಳು

### ೧. ಬ್ರಹ್ಮಚಾರಿ-ಶಿವಯೋಗಿಗಳು

ಇವರು ಬ್ರಹ್ಮಚಾರಿಗಳಾಗಿದ್ದು ಸನ್ಯಾಸಿ ಜೀವನ ನಡೆಸಿದ ಶಿವಯೋಗಿಗಳು. ರಾಯಚೂರು ಜಿಲ್ಲೆಯ ಸಂತೆ ಕೆಲ್ಲೂರಿನ ಶ್ರೀ ನಾಗಭೂಷಣ ಶಿವಯೋಗಿ (ಘನಮಠೇಶ) ಅಂತಹರು ಈ ವಿಭಾಗದಲ್ಲಿ ಬರುತ್ತಾರೆ. ಈಗಾಗಲೇ ಪ್ರಸಿದ್ಧರಾದ ನಿಜಗುಣ ಶಿವಯೋಗಿ, ಸರ್ಪಭೂಷಣ ಶಿವಯೋಗಿ, ಮುಪ್ಪಿನ ಷಡಕ್ಷರಿ, ಬಾಲಲೀಲಾ ಮಹಾಂತ ಶಿವಯೋಗಿ ಈ ಮುಂತಾದವರನ್ನು ಈ ಗುಂಪಿಗೆ ಸೇರಿಸಬಹುದು.

ಇವರು ಯೌಗಿಕ ಜೀವನ ನಡೆಸಿದವರು. ಆಧ್ಯಾತ್ಮದ ಗಾಢವಾದ ಅನುಭವ ಪಡೆದವರು. ಮುಕ್ತಿಯನ್ನು ಬಯಸುವವರು. ತಕ್ಕಮಟ್ಟಿಗೆ ಓದಿಕೊಂಡವರು. ೧೨ನೇ ಶತಮಾನದ ಶಿವಶರಣರ ಜೀವನ ಮತ್ತು ತತ್ತ್ವಗಳ ಪ್ರಭಾವ ಇವರ ಮೇಲೆ ಸಾಕಷ್ಟಾಗಿರುತ್ತದೆ. ಇವರೆಲ್ಲ ವಿರಕ್ತರಾಗಿದ್ದು, ಸಾಧನೆಯ ಮಾರ್ಗ ಹಿಡಿದವರಾದುದರಿಂದ ಹೆಚ್ಚು ಧಾರ್ಮಿಕ ಭಾವನೆವುಳ್ಳವರು. ಈ ಎಲ್ಲ ಅಂಶಗಳು ಈ ವರ್ಗದ ಜನ ಸೃಷ್ಟಿಸುವ ಕಾವ್ಯವನ್ನು ಸಹಜವಾಗಿಯೇ ನಿಯಂತ್ರಿಸುತ್ತವೆ.

ಶರಣರು ರಚಿಸಿದ ವಚನಗಳ ಹೆಚ್ಚಿನಾಂಶಗಳನ್ನೆ ಇವರು ಸ್ವರವಚನಗಳಲ್ಲಿ ಹೇಳಿಕೊಂಡಿರುವುದು ಕಂಡುಬರುತ್ತದೆ. ಈ ಗುಂಪಿನ ಹೆಚ್ಚಿನ ಜನ ಕೈವಲ್ಯ ಸಾಹಿತ್ಯವನ್ನು ಸೃಷ್ಟಿಮಾಡಿದವರು. ಶಿವನನ್ನು, ಶಿವಭಕ್ತರನ್ನು ಸ್ಮರಿಸುವ, ಅವರ ಮಹಿಮೆಯನ್ನು ಕೊಂಡಾಡುವ ಹಾಡುಗಳನ್ನು ರಚಿಸಿರುವುದೂ ಕಾಣುತ್ತದೆ.

ಹೈದ್ರಾಬಾದ ಕರ್ನಾಟಕಕ್ಕ ಸಂಬಂಧಿಸಿದ ಘನಮಠೇಶ ಅವರ ಹೆಚ್ಚಿನ ಹಾಡುಗಳಲ್ಲಿ ಶಿವ ಮತ್ತು ಬಸವಣ್ಣನವರ ಸ್ತುತಿ, ಪ್ರಾರ್ಥನೆ ಮತ್ತು ಮಹಿಮೆ ಕೊಂಡಾಡುವುದನ್ನು ಕಾಣುತ್ತೇವೆ. ಜೊತೆಗೆ ವೀರಶೈವ ಧಾರ್ಮಿಕ ಮತ್ತು ಆಧ್ಯಾತ್ಮಿಕ ಸಂಗತಿಗಳು ಹಾಸುಹೊಕ್ಕಾಗಿ ಬರುತ್ತವೆ. ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳ ಕುರಿತು, ಗುರು ಮತ್ತು ಜಂಗಮಾರ್ಚನೆಗಳ ಕುರಿತು ಹಾಡುಗಳಿರುವುದನ್ನು ಗಮನಿಸುತ್ತೇವೆ.

ಉದಾ:

೧. ಶಿವನ ಭಜಿಸಿ ನೀ ಬಾಳೊ
ಪರಶಿವನ ಭಜಿಸಿ ನೀ ಬಾಳೊ ।ಪ।

ಕ್ಷಣಿಕವಾದ ತನು ಕರಣೇಂದ್ರಿಯ ಸುಖ
ಕನಿಕರಿಸದೆ ಸದ್ಗುಣಿಯಾಗುತೆ ನೀ ಬಾಳೊ ।೧।

ಪರಮಶರಣರ ಚರಣ ಸೇವೆಯನು
ಮರಿಯದೆ ಮಾಡುತಲುರುಭಾವದಿ ನೀ ಬಾಳೋ ।೨।

೨. ಬೇಗದಿ ಕರುಣಿಸೊ ಭೋ ಗುರುಬಸವ ।ಪ।

ಮಾರಮಥನ ನವತಾರ ಸುಗುಣಮಣ
ಹಾರ ನಿಮ್ಮನುಭವ ಸಾರ ಸುಖಿಸುವನೆ ।೧।

ಕ್ರೂರವದನ ಸಂಚಾರವಳಿದು ಭವ
ದೂರನೆನಿಸಿ ತವ ಚಾರು ಪದವನೆ ।೨।

ಸಾಮಾಜಿಕ ಸಂಗತಿಗಳಿಗೆ ಈ ವರ್ಗದ ಸ್ವರವಚನಕಾರರು ಸ್ಪಂದಿಸಿದ್ದು ಕಡಿಮೆ. ಮನುಷ್ಯನ ನಡತೆಯ ಬಗ್ಗೆ, ಇಹಜೀವನದ ಬಗ್ಗೆ ಆಗಾಗ ಪ್ರಸ್ತಾಪಿಸುತ್ತಾರೆ. ಆದರೆ ಇವರೆಲ್ಲ ಬ್ರಹ್ಮಚಾರಿಗಳೂ, ಶಿವಯೋಗಿಗಳೂ ಆಗಿದ್ದು, ಹೆಚ್ಚಾಗಿ ಮಠಮಾನ್ಯಗಳ

ಜವಾಬ್ದಾರಿ ಹೊತ್ತ ಈ ಜನ, ಸಹಜವಾಗಿಯೇ ಧರ್ಮನಿಷ್ಠ ಸ್ವರವಚನಗಳನ್ನು ಅಧಿಕವಾಗಿ ಬರೆದಿರುವುದು ಸಹಜವೆನಿಸುತ್ತದೆ. ಈ ಹಾಡುಗಳು ಒಬ್ಬನೇ ಏಕ್ತಾರಿಯ ಸಹಾಯದೊಂದಿಗೆ ಹಾಡಿಕೊಳ್ಳುವ ಸಂದರ್ಭದಲ್ಲಿ ಬಹುವಾಗಿ ಬಳಕೆಯಾಗುವಂತಹವು. ಕೆಲವೊಂದು ಜನಪ್ರಿಯ ಹಾಡುಗಳೂ ಇದ್ದು, ಅವುಗಳನ್ನು ಜನಸಾಮಾನ್ಯರು ಭಜನೆಯ ಸಂದರ್ಭದಲ್ಲಿ ಬಳಸಿಕೊಳ್ಳುತ್ತಾರೆ.

## ೨. ಸಂಸಾರದಿಂದ ವಿಮುಖರಾದವರು

ಹೆಚ್ಚಿನ ಪ್ರಸಿದ್ಧ ಕವಿಗಳು ಈ ಗುಂಪಿಗೆ ಸೇರುತ್ತಾರೆ. ಕರ್ನಾಟಕದ ಅನುಭಾವಿ ಕವಿಗಳಲ್ಲಿ ಅತ್ಯಂತ ಹಿರಿಯನಾದ ಕಡಕೋಳದ ಮಡಿವಾಳಪ್ಪ, ರಾಮಪುರದ ಬಕ್ಕಪ್ಪ, ಕೂಡಲೂರು ಬಸವಲಿಂಗ ಶರಣರು,ಸಿರಗಾಪುರ ಬಂಡೆಪ್ಪ, ಮುಂತಾದವರು ಈ ಗುಂಪಿಗೆ ಸೇರುತ್ತಾರೆ. ಕೂಡಲೂರು ಬಸವಲಿಂಗ ಶರಣರ ಹೊರತಾಗಿ ಇವರೆಲ್ಲ ಪ್ರಾರಂಭದಲ್ಲಿ ಸಂಸಾರಸ್ಥರೇ ಆಗಿದ್ದು, ನಂತರ ಬಡತನ ಇಲ್ಲವೇ ಸಾಂಸಾರಿಕ ಬಿರುಕುಗಳಿಂದಾಗಿ ಬೇಸತ್ತು ವೈರಾಗ್ಯ ತಾಳಿ, ಮನೆಬಿಟ್ಟು ಹೊರಟವರು. ಕೆಲವರು ಸನ್ಯಾಸಿಗಳಂತೆ ವೇಷಭೂಷಣ ಹಾಕಿಕೊಳ್ಳುತ್ತಾರೆ. ತಮಗೊಬ್ಬ ಮಾರ್ಗದರ್ಶಕ ಗುರು ಮುಖ್ಯವೆಂಬುದು ಈ ವರ್ಗದ ಕವಿಗಳಲ್ಲಿ ಎದ್ದುಕಾಣುವ ಅಂಶ. ಈ ಗುರುವು ಕವಿ ಜೀವಿಸಿರುವ ಭಾಗದ ಯಾವುದೇ ಒಬ್ಬ ಮಹಾತ್ಮನಾಗಬಹುದು. ಅಥವಾ ತನ್ನೂರ ಆರಾಧ್ಯ ದೈವವೇ ಆಗಬಹುದು. ಹೀಗೆ ಗುರು ಅಥವಾ ಆರಾಧ್ಯ ದೈವದ ಮೂಲಕ ಶಿವನನ್ನು ಕಾಣುವ, ಮುಕ್ತಿ ಅರಸುವ ಭಾವವನ್ನು ಇವರ ಹಾಡುಗಳಲ್ಲಿ ಕಾಣುತ್ತೇವೆ.

ಇಷ್ಟೆಲ್ಲ ಆದರೂ ಇವರು ಸಂಪೂರ್ಣವಾಗಿ ಸಮಾಜದಿಂದ ದೂರ ಸರಿದವರಲ್ಲ. ಮೊದಲವರ್ಗದ ಜನರಿಗಿರುವಂತೆ ಇವರಿಗೆ ಮಠಮಾನ್ಯಗಳ ಆಸ್ತಿಪಾಸ್ತಿ ಇರುವುದಿಲ್ಲವಾದ ಕಾರಣ ತಿರುಗಾಟ ಇವರಿಗೆ ಅನಿವಾರ್ಯವಾಗುತ್ತದೆ. ತಮ್ಮ ಉಪಜೀವನಕ್ಕಾಗಿ ಇನ್ನೊಬ್ಬರ ಮೇಲೆ ಅವಲಂಬಿಸಬೇಕಾಗುತ್ತದೆ. ಇವರೆಲ್ಲ ಸಂಪೂರ್ಣವಾಗಿ ಪ್ರಾಪಂಚಿಕ ವ್ಯಾಮೋಹದಿಂದ ದೂರಾದವರಲ್ಲ. ಕೆಲವರು ಕೊನೆಗೆ ಹೊರಳಿ ಮನೆಗೆ ಬಂದದ್ದೂ ಉಂಟು.

ಹೀಗೆ ಒಂದು ಕಡೆ ಸಂಸಾರದ ಕಹಿ ಅನುಭವ, ಇನ್ನೊಂದು ಕಡೆ ಈ ಜೀವನದ ಬಗ್ಗೆ ಜಿಗುಪ್ಸೆ ತಾಳಿದ ವೈರಾಗ್ಯ, ಇವೆರಡರ ನಡುವೆ ಹೊಯ್ದಾಡುವ ಮನಸ್ಸು, ಇಂಥ ಸ್ಥಿತಿಯಲ್ಲಿ ಹುಟ್ಟಿಕೊಂಡ ಈ ಕಾವ್ಯ ತೀರ ವೈವಿಧ್ಯವೆನಿಸುತ್ತದೆ. ಅನಿವಾರ್ಯವಾಗಿ ಕೈಗೆ ಬಂದ ಏಕ್ತಾರಿಯ ಜೊತೆಗೆ ಈ ಸಂಸಾರದ ಕಹಿ ಅನುಭವವುಂಡ ಅವರು ಈ ಜೀವನದ ನಶ್ವರತೆಯನ್ನು ಮುಖ್ಯವಾಗಿ ಸಾರುತ್ತಾರೆ. ಈ ಜೀವನ 'ಮೂರು ದಿನದ ಸಂತಿ' ಯಾದುದರಿಂದ 'ಗುರುವಿನ ಪಡಕೊಂಡು ಗುರುವಾಗಿರಬೇಕು' ಎಂಬ ನಿಲುವಿಗೆ ಬರುತ್ತಾರೆ. ಇದ್ದಷ್ಟು ದಿನ ಶಿವನನ್ನು ಧ್ಯಾನಿಸುತ್ತ ಮುಕ್ತಿಗಾಗಿ ಹಂಬಲಿಸಬೇಕೆಂಬುದು ಇವರ ಒಟ್ಟು ಕಾವ್ಯದ ಮುಖ್ಯ ಆಶಯವಾಗಿರುತ್ತದೆ.

ಏಕ್ತಾರಿ ಕಾಯಿ ಹಿಡಿಬಾರದಣ್ಣಾ
ಹಿಡಿದರ ಹಿಡಿರೆಣ್ಣ
ಗುರುವಿನ ಮುಟ್ಟಿ ಗುರವಾಗಿ ಹಿಡಿರೆಣ್ಣ।
ಏಕ್ತಾರಿ ಎಂಬೋ ಮಾತ
ಏಕಾಂತ ಏಕೋಚಿತ್ತ। (ಬಂಡೆಪ್ಪ ಕವಿ)

ಹೀಗೆ ಕೈಯಲ್ಲಿ ಏಕ್ತಾರಿಕಾಯಿ ಹಿಡಿದು ಹೊರಡುತ್ತಾರೆ. ಎಲ್ಲ ಸ್ವರವಚನಕಾರರಂತೆ ಇವರಿಗೂ ಸ್ವಂತಹಾಡಲು ಬರುತ್ತದೆ. ಒಮ್ಮೊಮ್ಮೆ ಆತ್ಮನಿವೇದನೆಗಳಂತೆ, ಒಮ್ಮೊಮ್ಮೆ ಸಾಮಾನ್ಯ ನೀತಿಯಂತೆ ಕಾಣುವ ಈ ಹಾಡುಗಳು ಒಂದು ರೀತಿಯಲ್ಲಿ ಜೀವನ ಶೋಧಗಳಂತೆ ಕಾಣುತ್ತವೆ. ಜನ ಇವುಗಳನ್ನು ತತ್ತ್ವಪದಗಳೆಂದು ಕರೆಯುತ್ತಾರೆ. ಆದಕ್ಕಾಗಿ ಇವರೇ ತತ್ವಪದಕಾರರು.

ನಮ್ಮ ಸಂಸಾರ ಜೀವನವು ಬಹುಮುಖ್ಯವಾದ ಎರಡು ವಾಸ್ತವ ಅಥವಾ ಸತ್ಯಗಳನ್ನು ಒಳಗೊಂಡಿದೆ:

೧. ಜೀವನ ವಾಸ್ತವ ಅಥವಾ ಜೀವನ ಸತ್ಯ.
೨. ದೇಹ ವಾಸ್ತವ ಅಥವಾ ದೇಹ ಸತ್ಯ.

ಈ ತತ್ವಪದಕಾರರು ಜೀವನಸತ್ಯದಿಂದ ದೂರಸರಿದು, ದೇಹಸತ್ಯವನ್ನು ಒಪ್ಪಿಕೊಂಡವರು. ಆದಕ್ಕಾಗಿ ಇವರ ಸಾಹಿತ್ಯ ದೇಹಸತ್ಯದ ಕಣ್ಣಿನಿಂದ ಜೀವನ ಸತ್ಯವನ್ನು ಕಂಡುದಾಗಿರುವುದು ಎದ್ದುಕಾಣುತ್ತದೆ.

ಎಚ್ಚರಲಿಂದ ಯಾಪಾರ ಮಾಡಣ್ಣ ಖೂ
ಯಾಪಾರದೋಳು ಇಹಪರವೆಂಬ ಖೂನವ ತಿಳಿಯಣ್ಣ।

ಎಂಬ ಮಾತಿನಲ್ಲಿ ಈ ಜೀವನ ಸತ್ಯವನ್ನು ಒಂದು ವ್ಯಾಪಾರವೆಂದೂ ಅದನ್ನು ಅತ್ಯಂತ ಎಚ್ಚರಿಕೆಯಿಂದಲೇ ಮಾಡಬೇಕೆಂದೂ ಹೇಳುತ್ತಾರೆ. ಸಂಸಾರದಲ್ಲಿ 'ಇಹ' ಎಂದರೆ ಜೀವನ ಸತ್ಯ 'ಪರ' ಎಂದರೆ ದೇಹಸತ್ಯಗಳನ್ನು ತಿಳಿದಿರಬೇಕೆನ್ನುತ್ತಾರೆ.

ನಮ್ಮ ಎಲ್ಲ ಆಧ್ಯಾತ್ಮ ವಿಚಾರಗಳು ಅವಲಂಬಿಸಿರುವುದೇ 'ದೇಹಸತ್ಯ'ವನ್ನು. ಈ ಮಾತಿನ ಹಿನ್ನೆಲೆಯಲ್ಲಿಯೇ ದೇಹ ಇವರಿಗೊಂದು ಒಗಟಾಗಿ ಕಾಣುವುದು. ಇವರು ಸಂಸಾರ ಆತಂಕದಿಂದಾಗಿ ಆದರಿಂದ ವಿಮುಖರಾದವರು. ಆದರೆ ಕೆಲದಿನ. ಅದನ್ನು ಅನುಭವಿಸಿದವರು, ಇಲ್ಲವೆ ಸಂಸಾರಿಗಳ ಮೇಲೆ ಅವಲಂಬನೆಯಾದವರು. ಹೀಗಾಗಿ ಆದರಿಂದಲೂ ಸಂಪೂರ್ಣ ಬಿಡುಗಡೆ ಸಾಧ್ಯವಾಗಿಲ್ಲ. ಹೀಗಾಗಿ ಜೀವನಸತ್ಯ ಮತ್ತು ದೇಹ ಸತ್ಯಗಳ ತೊಳಲಾಟದಲ್ಲಿಯೇ ಅವರು ಉಸಿರಾಡುವುದನ್ನು ಅವರ ಹಾಡುಗಳು ನಮಗೆ ನಿದರ್ಶನ ಒದಗಿಸುತ್ತವೆ.

ಇದೊಂದು ಮಾಯಾಸಂಸಾರ, ಈ ದೇಹ ಹೆಂಡರು ಮಕ್ಕಳಿಗಾಗಿ ದಂಡಿಸಬೇಕಾಗುವುದು. ದಂಡಧರರು ಬಂದು ಈ ಸಂಸಾರವನ್ನೇನೂ ಎಳೆಯುವುದಿಲ್ಲ. ಅದಕ್ಕಾಗಿ ಇದು ಕೇವಲ ಮೂರುದಿನಗಳ ಸಂತಿ ಎಂದು ಹೇಳುವ ಇವರ ತತ್ತ್ವ ಸಂಪೂರ್ಣ ಸತ್ಯವಲ್ಲದಿದ್ದರೂ, ಈ ಜೀವನವೇ ಶಾಶ್ವತವಲ್ಲದ ಒಂದು ಮಗ್ಗುಲಿನ ಸತ್ಯವನ್ನು ಖಂಡಿತವಾಗಿ ನಿಜವೆನಿಸುತ್ತದೆ.

ತಮಗೆ ಒಗಟಾಗಿ ಕಂಡ ಈ ದೇಹವನ್ನು ಅವರು ನಾನಾ ಬಗೆಯಾಗಿ ತಾತ್ತ್ವಿಕ ವಿವೇಚನೆಗೆ ಒಳಗುಮಾಡುತ್ತಾರೆ. ಈ ದೇಹ ಒಂದು ಅಂಗಿ ಎಂದೂ, ಹೊಲವೆಂದೂ, ಬ್ರಹ್ಮ ಮಾಡಿದ ಗಡಿಗೆಯೆಂದೂ, ಮನವೆಂಬುದು ಮರ್ಕಟವೆಂದೂ, ಈ ಪ್ರಾಪಂಚಿಕ ಜೀವನ ವ್ಯಾಪಾರವೆಂದೂ ನಾನಾಪರಿಯಾಗಿ ದೇಹವನ್ನೂ, ಜೀವನವನ್ನೂ ವರ್ಣಿಸುವುದನ್ನು ಕಾಣುತ್ತೇವೆ. ಇಂತಹ ಅಂಗದೊಳಗೆ ಶಿವಲಿಂಗ ಮೂರ್ತಿ ಇರುವ ಕಲ್ಪನೆ ಅವರದು ಉದಾ:

ಹೊಲ: ಹೊಂದಿಕಿಲಿಂದ ಹೊಲವನು ಮಾಡಣ್ಣ
ಹೊಲದಭಿಮಾನಿಟ್ಟು।
ಹೊಲಬನರಿದು ಹೊಲದೊಳು ದುಡಿಯಣ್ಣ ।ಪ।
(ಬಂಡೆಪ್ಪ)

ಅಂಗಿ: ಶಿಸ್ತಿನಂಗಿ ಶಿವರಾಯ ಬೆಳೆಸಿದನು
ಬೆಲೆಯಿಲ್ಲ ಅಂಗೀಗೆ। ಬರಲಾರದು ಸಿಂಪಿಗ್ಯಾಗ।
ತೊಗಲಿನಂಗಿ ಹಗಲಿರುಳು ಬೆಳಸಿದಾನೊ
ಹರಿದರ ಹೊಲಿಯದಂಗ।
ಅನ್ನ ನೀರಿನ ಆಧಾರ ಮಾಡಿದಾನೊ
ದಾರ ಸೂಜಿ ಹಂಗ।
ಆಯುಷ್ಯ ಮುಗಿದರಾಯಿತೊ ಕಡಿಗಾ
ಅನುಮಾನ ಮನಸಿಗಾ।
ಅನುಮಾನದ ಮನಸೀಗ। ।೧।
(ಬಂಡೆಪ್ಪ)

ಗಡಗಿ: ಶಂಭೋನಗರದಲ್ಲಿ ಕುಂಬಾರನಿರುವನು
ನಂಬಿಗಿ ನಾವೊಂದು ಬ್ರಹ್ಮ
ನಿತ್ಯ ಗಡಗಿ ಮಾಡೋದವನ ನೇಮ।
. . . . . . . . . . . . . .
ತಿಗರಿ ಗೂಟಕ ತಿರುವಿ ಕೆಸರೊಯ್ದು ಬಡದಿದ್ದ
ಹೆಸರಿಲ್ಲದೆ ಮಾಡ್ಯಾನೊ ಗಡಗಿ ಮಾಡಿಲ್ಲ ಅಡಗಿ।। (ಬಂಡೆಪ್ಪ)

ಈ ಬದುಕಿನ ಅಸಂಗತತೆಯನ್ನು ಸಮರ್ಥವಾಗಿ ಹಿಡಿದಿಟ್ಟವರು ಈ ತತ್ತ್ವ ಪದಕಾರರು. ರಾಂಪುರದ ಬಕ್ಕಪ್ಪನ ಒಂದು ಹಾಡನ್ನು ಇಲ್ಲಿ ಉದಾಹರಿಸಲಾಗುತ್ತದೆ:

ಹಳ್ಳದ ದಂಡಿಲಿಗಿ ಮೆಯ್ತಾವ ಮೂರು ಎಮ್ಮೆಗಳು
ಒಂದು ಗೊಡ್ಡ ಆದ ಎರಡು ಈದೆ ಇಲ್ಲ |ಪ|

ಈಲಾರ್ದ ಎಮ್ಮೆಗೆ ಬಂದಾರ ಮೂವರು ಕಳ್ಳರು
ಒಬ್ಬ ಕುರುಡ ಹಾನ ಇಬ್ಬರ್‍ಗಿ ಕಣ್ಣೆ ಇಲ್ಲ |ಪ|

ಕಣ್ಣಿಲ್ದ ಕುರಡರು ತಂದಾರ ಮೂರು ರೂಪಾಯಿ
ಒಂದು ಖೊಟ್ಟಿ ಆದ ಎರಡು ನಡದೇ ಇಲ್ಲ |೧|

ನಡಿಲಾರ್ದ ರೂಪಾಯಿಗೆ ಬಂದಾರ ಮೂವರು ಕಳ್ಳರು
ಒಬ್ಬ ಕುಂಟ ಹಾನ ಇಬ್ಬರ್‍ಗಿ ಕಾಲೇ ಇಲ್ಲ |೨|

ಕಾಲಿಲ್ಲದ ಕುಂಟರಿಗೆ ಇದ್ದರು ಮೂವರು ಹೆಂಡರು
ಒಬ್ಬಕಿ ಸುಗುಣ ಇಬ್ಬರು ಹಡದೇಯಿಲ್ಲ |೩|

ಹಡಿಲಾರ್ದ ಸುಗುಣೇರು ತಂದರ ಮೂರು ಗಡಗಿಗಳ
ಒಂದು ಹಸಿದೇ ಆದ ಎರಡು ಸುಟ್ಟೇ ಇಲ್ಲ |೪|

ಸುಡಲಾದನ ಗಡಿಗ್ಯಾಗ ಮಾಡ್ಯಾರ ಮೂರು ಕಡಬುಗಳ
ಒಂದು ಹಸಿದೇ ಆದ ಎರಡು ಕುದ್ದೆ ಇಲ್ಲ |೫|

ಕುದಿಲಾರ್ದ ಕಡಬೀಗೆ ಬಂದರ ಮೂವರು ಬೀಗರ
ಒಬ್ಯಾಂವ ಬೊಚ್ಚ ಹಾನ ಇಬ್ಬರ್‍ಗಿ ಹಲ್ಲೇ ಇಲ್ಲ |೬|

ಹಲ್ಲಿಲ್ಲದ ಬೊಚ್ಚ ತಿಂದರ ಮೂರು ಕಡಬುಗಳ
ಒಬ್ಬ ಸತ್ತಹ್ವಾದ ಇಬ್ಬರು ಉಳಿದೇ ಇಲ್ಲ |೭|

ರಾಮಪುರದ ಬೊಕ್ಕ ಹೇಳಿದ ಮೂರು ಮಾತುಗಳ
ಒಂದು ಸುಳ್ಳ ಆದ ಎರಡು ನಿಜವೇ ಇಲ್ಲ |೮|

## ೩. ಸಂಸಾರಿಗಳು

ಭಜನಾ ಮೇಳಗಳಿರುವ ಬಹುತೇಕ ಊರುಗಳಲ್ಲಿ ಒಬ್ಬ ಕವಿ ಕಾಣುತ್ತಾನೆ. ಇವರು ಉತ್ತಮ ಸಂಸಾರಿಗಳು; ಉತ್ತಮ ಕವಿಗಳು. ಮೊದಲನೇ ಪಂಗಡದವರಂತೆ ಉನ್ನತ ವ್ಯಾಸಂಗದ, ಜ್ಞಾನದ ಬಲವಾಗಲಿ, ಎರಡನೆಯವರಂತೆ ಸಂಸಾರದ ಬಗೆಗೆ ಹೇಸಿಗೆಯಾಗಲಿ ಇವರಿಗಿಲ್ಲ. ಹೀಗಾಗಿ ಇವರು ಪ್ರಪಂಚವನ್ನು ಪ್ರೀತಿಸುವವರು. ಆದರೆ ಈ ಜೀವನ ಶಾಶ್ವತವಲ್ಲವೆಂದು ತಿಳಿದವರು. ಆಧ್ಯಾತ್ಮದ ಬಗ್ಗೆ ಆಸಕ್ತಿವುಳ್ಳವರು. ಇವೆಲ್ಲ ಮೀರಿ ಪ್ರಸ್ತುತ ಬದುಕಿನ ಸಮಸ್ಯೆಗಳು, ಮಹಾಪುರುಷರು, ಐತಿಹಾಸಿಕ ಪುರುಷರು, ದೇವ ದೇವತೆಗಳು, ಸಂಸಾರದ ಅಂಕು ಡೊಂಕುಗಳು ಇವರ ಕಾವ್ಯಕ್ಕೆ ವಸ್ತುಗಳಾಗುತ್ತವೆ. ಮೇಲಿನ ಎರಡು ಗುಂಪಿನವರು ಬರೆಯಲಾರದ ಅನೇಕ ಘಟನೆಗಳನ್ನು ಕಥೆ ಮಾಡಿ ಹಾಡುತ್ತಾರೆ. ಶಿವ

ಶರಣರ ಚರಿತ್ರೆ, ಸ್ಥಳೀಯ ಮಹತ್ವದ ವ್ಯಕ್ತಿಗಳ ಚರಿತ್ರೆ, ಮಹತ್ವದ ಘಟನೆಗಳನ್ನು ಕಥೆ ಮಾಡಿ ಹಾಡುತ್ತಾರೆ.

ಈ ಭಾಗಕ್ಕೆ ಸೇರಿದ ಕವಿಗಳು ಶಿವಭಜನೆ ಅಥವಾ ಸಂಗೀತ ಭಜನೆಗೆ ಸಂಬಂಧಪಟ್ಟವರು. ಮೇಲಿನ ಎರಡು ನಮೂನೆಯ ಜನ ಬರೆದ ಹಾಡುಗಳ ತೆಳುವಾದ ವಸ್ತುವೂ ಇವರ ಹಾಡುಗಳಲ್ಲಿ ಕಾಣುತ್ತದೆ. ಕರಿಹರಿಯ ಶರಣಪ್ಪ ಈ ದೇಹವನ್ನು ಬಸ್ಸಿಗೆ ಹೋಲಿಸಿ ಬರೆಯುತ್ತಾನೆ.

ನೋಡವ್ವ ತಂಗಿ ಸರಕಾರಿ ಬಸ್ಸ
ಗಾಡಿ ಬರತಾದ ರೋಡಿನ ಮ್ಯಾಲ
ಮಾಡಿದವ ಮಿಗಿಲ ಜಗಕ್ಕೆ ಶೇಲ।

ಇದೇ ಕವಿ ಜೀವಾತ್ಮವನ್ನು ಹಕ್ಕಿಗೆ ಹೋಲಿಸಿ ತೆಳುವಾದ ಆಧ್ಯಾತ್ಮಿಕ ವಿಚಾರವನ್ನು ಹೀಗೆ ತೇಲಿಸಿ ಬರೆಯುತ್ತಾನೆ:

ಹಾರಿ ಹೋಗ್ತಾದೋ ಹಕ್ಕಿ ಬಿಡಬ್ಯಾಡ ಮಾಡ ಜ್ವಾಕಿ ॥ಪ॥

ಆಳತಿಲ್ಲದೆ ಅನ್ನವ ಹಾಕಿ ಘೌಳಕಿ ಇಲ್ಲ, ಈ ಹಕ್ಕಿ ಸಾಕಿ
ಕಳ್ಳನದೋಳು ಆಯಿತ ಸೇರ್ಕಿ ಸುಳ್ಳನದಲ್ಲಿ ಸುಳಿಯುವ ಹಕ್ಕಿ ॥೧॥

ಲಕ್ಷಾ ತೇರಾ ಅಂಶಿ ಹಾಕಿತು ಫಿರಕಿ, ಭಿಕ್ಷಾ ಬೇಡಿ ತಿನ್ನುವ ಹಕ್ಕಿ।
ಸಾಕ್ಷಿ ಭೂತಗೆ ಸಿಲ್ಕಿದ ಹಕ್ಕಿ ಮೋಕ್ಷಕೆ ಮೀರಿದ ಹಕ್ಕಿ ॥೨॥

ಬ್ರಹ್ಮಗಿದ್ದಿದ್ದಿಲ್ಲ, ಬ್ಯಾಸರಕಿ ಮೂವತ್ತೆರಡು ತಾರಿನ ಹೆಳಾಕಿ।
ಏನ ಛಂದ ಆವ ಒಂಬತ್ತ ಖಿಡಕಿ ಕೊಟ್ಟು ಹೊಡದ ಹೇಗಾದ ಧಕ್ಕಿ ॥೩॥

ಪಿಂಟಂಧಿನ ಪಕ್ಷಿ, ಮಾಬೆರಕಿ ನೀತಿಗಳು ಇಲ್ಲ, ಒಂದ ಎಣಕಿ
ಭಕ್ತಿ ಎಂಬ ಸೂಲ ತಂತಿಗಿ ಧಾರೆ ಕರಲಿಗಿಯಲ್ಲಿ ಏಕ್ಯಾದ ಹಕ್ಕಿ ॥೪॥

ಕವಿ ಯಾರೆಂಬುದು ಗೊತ್ತಿಲ್ಲದ ಕೆಲ ಉದಾಹರಣೆಗಳನ್ನು, ಬಾಲ್ಯದ ಅನುಭವದಿಂದ ಸ್ಮರಣೆಯಲ್ಲಿ ಉಳಿದ ಕೆಲ ಹಾಡಿನ ತುಕಡಿಗಳನ್ನು, ವಿಷಯದ ವೈವಿಧ್ಯತೆಯ ಉದಾಹರಣೆಗೆ ಇಲ್ಲಿ ಉಲ್ಲೇಖಿಸಿದ್ದೇನೆ:

**ಐತಿಹಾಸಿಕ ರಾಜಕೀಯ**

ರಜಕಾರ ಪಾರ್ಟಿಯೊ ಸುತ್ತ ಮುಚಳಂಬಿ ಗೋರ್ಟಿಯೋ।
ಮುಚಳಂಬಿ ಗೋರ್ಟಿಮ್ಯಾಲ ರಜಕಾರ ಪಾರ್ಟಿಯೊ।
ದೂರಿದ್ದ ಕೂಸಿನ ಹಿಡಿದು ತಂದಾರೊ
ಹೊಟ್ಯಾಗ ಬಲಾಮ ಚುಚ್ಚಿ ಕಡಿ ನಿಂದಸ್ಯಾರೊ॥

**ಚಾರಿತ್ರಿಕ**

ಬಾಗೇವಾಡಿಯಲ್ಲಿ ಬ್ರಹ್ಮನ ಮಠದಲ್ಲಿ
ಹುಟ್ಟಿದ ಬಸವಣ್ಣ। ಸೃಷ್ಟಿಯೊಳಗೇ ಶರಣಾಪು।
. . . . . . . . . . . .
ಸತ್ಯ ಸತ್ಯ ನಿನಗಾರು ನೂಕಿದರು ನೀಯರೆ ಹೇಳಣ್ಣ।
ಸತ್ತಹೆಣ ಎದ್ದು ನಿಂತು ಹೇಳತಿತ್ತೊ ನೀ ನೂಕಿಲ್ಲ ಬಸವಣ್ಣ।
ಚೆಂಡಿನ ಸಲುವಾಗಿ ನೀರ ಕುಡಿಕುಡಿದು ಬಿಟ್ಟದ್ದ ನಾನೇ ಪ್ರಾಣ॥

**ಸಾಂಕೇತಿಕ**

ಇರಲಾರೆ ಕಾಂತ ನಿನ್ನಗಲಿ
ಭಾಳ ಪ್ರೀತಿ ಮನಸು ನಿನ್ನ ಮ್ಯಾಲೆ।
ಎಂಟ ಕಾಲಿನ ಕುದರಿಯೋ ಕುಂತ
ನಾನು ಹೊಂಟೆನದರ ಮ್ಯಾಲೆ ಕುಂತ।
ಊರಿನಗೆಳದೇರು ಕಳುಹೂತೆ ಹೊರಟರು
ಎನ್ನವಾರಿಗಿ ಗೆಳದಿರಿಗಾದೊ ನಾ ಎರವತಿ।ನಾನು ಎರವ।
ನಿನ್ನ ಬಿಟ್ಟನ್ಯಾಂಗ ಇರಲೋ
ನಿನ್ನ ಪ್ರೀತಿಯ ಮಾತ್ಯಾಂಗ ಮರಿಲೋ। ನಾನು ಮರಿಲೋ॥

ಹೀಗೆ ಸಮಾಜದ ಎಲ್ಲ ಬಗೆಯ ಸಂಗತಿಗಳನ್ನು ಕುರಿತು ಇವರು ಹಾಡು ರಚಿಸಿ ಹಾಡುತ್ತಾರೆ. ಪ್ರಸ್ತುತ ಪ್ರಶ್ನೆ ಎಂಬುದು ಇವರ ಹಾಡುಗಳಲ್ಲಿ ಕಾಣಬಹುದಾಗಿದೆ. ಆದುದರಿಂದ ಅನುಭಾವ ಸಾಹಿತ್ಯ ಅಥವಾ ಸ್ವರವಚನಸಾಹಿತ್ಯದ ಹರಹನ್ನು ಈ ಮೂರು ಪ್ರಕಾರದ ಹಾಡುಗಾರರನ್ನು ಗಮನದಲ್ಲಿಟ್ಟುಕೊಂಡು ವಿಚಾರಮಾಡಿದರೆ, ಅದನ್ನು ಸಮಗ್ರವಾಗಿ ಗಮನಿಸಿದಂತಾಗುತ್ತದೆ.



# ಮುಂಬಯಿ ಕರ್ನಾಟಕದ ಮೌಖಿಕ ಸ್ವರವಚನಗಳು

ಶ್ರೀರಾಮ ಇಟ್ಟಣ್ಣವರ

೧

ಭಾರತದ ಎಲ್ಲ ಕಾಲದ ಸಾಂಸ್ಕೃತಿಕ ಸಂದರ್ಭದಲ್ಲಿ ಆಧ್ಯಾತ್ಮಿಕ ಅಭೀಪ್ಸೆಯೆಂಬುದು ಈ ಜನಜೀವನದೊಂದಿಗೆ ಹರಿದುಬಂದಿರುವ ಪ್ರಮುಖವಾಹಿನಿ. ಈ ದೇಶದ ಮೌಲ್ಯನಿಷ್ಠೆ ಆಧ್ಯಾತ್ಮ ರೂಪದಲ್ಲಿ ಸಾಗಿಬಂದಿರುವುದನ್ನು ಚರಿತ್ರೆಯುದ್ದಕ್ಕೂ ನೋಡುತ್ತೇವೆ. ನಮ್ಮ ಪುರಾಣ, ದಾರ್ಶನಿಕ ಗ್ರಂಥಗಳು ಈ ಆಧ್ಯಾತ್ಮದ ಅನುಸಂಧಾನಕ್ಕೆ ನೆಲೆಯನ್ನೊದಗಿಸಿದವು. ಓದು ಬರಹ ಬಲ್ಲವರು ನೇರವಾಗಿ ಇಂಥ ಪುಸ್ತಕಗಳ ಮೊರೆಹೊಕ್ಕರು. ಗ್ರಾಮೀಣರು ಪುರಾಣಿಕರ, ಕೀರ್ತನಕಾರರ, ಸಾಧು ಸತ್ಪುರುಷರ ಮೊರೆಹೊಕ್ಕು ತಮ್ಮ ಈ ಬಗೆಯ ದಾಹವನ್ನು ತಣಿಸಿಕೊಂಡರು. ಈ ಹುಡುಕಾಟ, ಅನುಭವಗಳಲ್ಲಿ ಈ ಅನೇಕ ಜನಸಾಮಾನ್ಯರೇ ತಮ್ಮನ್ನು ತಾವು ಗಂಭೀರವಾಗಿ ತೊಡಗಿಸಿಕೊಂಡು ತಮ್ಮ ತಮ್ಮ ನೆಲೆಯಲ್ಲೇ ಅನುಭವಗಳನ್ನು ಅನುಭಾವವಾಗಿಸಿಕೊಂಡರು. ಈ ಅನುಭಾವದ ಆನಂದ, ಅಭಿವ್ಯಕ್ತಿಗಳಿಗೆ ಭಜನೆ ಆಸರೆಯಾಗಿರುವುದನ್ನು ಭಾರತದುದ್ದಕ್ಕೂ ಕಾಣುವಂತೆ ಕರ್ನಾಟಕದಲ್ಲಿಯೂ ಕಾಣುತ್ತೇವೆ.

ಕರ್ನಾಟಕದ ತುಂಬ ಇಂಥ ತತ್ವಪದಗಳನ್ನು ತಂಬೂರಿದಾಸರು, ಭಜನಾಮೇಳದವರು ಪ್ರಸಾರಗೊಳಿಸಿದರು. ಇವರು ನಿಜಗುಣ ಶಿವಯೋಗಿ, ಮುಪ್ಪಿನ ಷಡಕ್ಷರಿ, ಮಹಲಿಂಗರಂಗ ಕವಿಗಳಂಥವರ ಗ್ರಂಥಸ್ಥ ಹಾಡುಗಳನ್ನು ಹಾಡುವಂತೆಯೇ ಶಿಶುನಾಳ ಶರೀಫ, ಬಬಲಾದಿ ಸದಾಶಿವಪ್ಪ, ಚಿಕ್ಕಯ್ಯ ಮುಂತಾದವರ ಮೌಖಿಕ ಪರಂಪರೆಯ ಹಾಡುಗಳನ್ನು ಹಾಡುತ್ತಾರೆ. ಪ್ರಸ್ತುತ ಲೇಖನ ಮುಂಬಯಿ ಕರ್ನಾಟಕದ ಮೌಖಿಕ ಸ್ವರವಚನಗಳಿಗೆ ಸೀಮಿತವಾಗಿದೆ. ಅದೂ ವೀರಶೈವ ಪರಂಪರೆಗೆ ಸಂಬಂಧಿಸಿದಂತೆ ಮಾತ್ರ. ಮುಂಬಯಿ ಕರ್ನಾಟಕದ ತುಂಬ ಹರಡಿಕೊಂಡಿರುವ ಮೌಖಿಕ ಪರಂಪರೆಯ ಸ್ವರವಚನಗಳ ಕವಿಗಳ ಸಮೀಕ್ಷೆ, ಇವರ ಹಾಡುಗಳ ಸಂಖ್ಯಾ ನಿರ್ಣಯಗಳೆಲ್ಲ, ಒಂದು ಲೇಖನಕ್ಕೆ ದಕ್ಕುವ ವಿಷಯಗಳಲ್ಲ. ಇವುಗಳ ಸ್ವರೂಪವನ್ನು ಸ್ಥೂಲವಾಗಿ ಹೇಳಿ ಸಂಗ್ರಹದ ಸಮಸ್ಯೆಯನ್ನು ಹೇಳಿಕೊಳ್ಳುವುದಕ್ಕೆ ಈ ಲೇಖನ ಸೀಮಿತವಾಗಿದೆ.

೨

ಈ ಹಾಡುಗಳ ಸ್ವರೂಪವನ್ನು ಅವುಗಳ ಶಿಲ್ಪ ಮತ್ತು ಅಂತರ್ಗತ ವಿಷಯ ಎರಡೂ ದೃಷ್ಟಿಯಿಂದ ನೋಡುವುದೊಳಿತು. ಇವು ಗೇಯರೂಪದ ಪದ್ಯಗಳಾಗಿರುವುದರಿಂದ ಇವುಗಳ ಬಾಹ್ಯ ಶಿಲ್ಪಕ್ಕೆ ವಿಶೇಷವಾದ ಅರ್ಥವಿದೆ. ಪ್ರಾರಂಭದಲ್ಲಿ ಪಲ್ಲವಿದ್ದು ತರುವಾಯ ನುಡಿಗಳು ಬರುತ್ತವೆ. ಈ ನುಡಿಗಳು ನಾಲ್ಕು ಚರಣದವುಗಳಾಗಿರುವುದು ಹೆಚ್ಚು. ಇಂಥ ನುಡಿಗಳು ಸುಮಾರು ೫ ಇರುತ್ತವೆ. ಇದನ್ನು ದಾಟಿ ಕೆಲವು ೮ ನುಡಿಯ ಪದಗಳಿರಬಹುದು, ೧೦ ನುಡಿಯ ಪದಗಳಿರಬಹುದು. ಕೆಲವು ಕಾಲಜ್ಞಾನ ಪದಗಳು ೨೫ ನುಡಿಗಳಿಗೆ ಮೇಲ್ಪಟ್ಟು ಇವೆಯಂತೆ. ಕೊನೆಯಲ್ಲಿ ಕವಿಯ ಅಂಕಿತ ಇರುತ್ತದೆ. ಈ ಅಂಕಿತ ಕವಿಯ ಹೆಸರಾಗಿರಬಹುದು, ಕವಿಯ ಇಷ್ಟದೇವತೆಯದಾಗಿರಬಹುದು. ಯಾವುದಿದ್ದರೂ ಅದು ಬಹಳಷ್ಟು ಸಲ ಊರ ಹೆಸರನ್ನು ತಳಕುಹಾಕಿಕೊಂಡೇ ಬಂದಿರುತ್ತದೆ.

ಲಗುಮಾಡಿ ಬಬಲಾದಿಗ್ಹೋಗುದಕ
ಸದಾಶಿವನ ಪಾದಪೂಜೆ ಮಾಡುದಕ
. . . . . . . . . . . . . . . .
ಇದ್ದಲ್ಲಿ ಪೂಜಿಗೊನ್ನಿ ಗಡಪೂರ ಇಟ್ಟಲನ
ಗಟ್ಟಿಗೊಂಡ ಪೂಜಿಗೊನ್ನಿ ಕಾಯುವ

ಎಂಬಂತಹ ಉದಾಹರಣೆಗಳಲ್ಲಿ ಊರು, ಕವಿಯ ಹೆಸರು ಎರಡೂ ಕೂಡಿಯೇ ಉಲ್ಲೇಖಗೊಂಡಿರುವುದನ್ನು ಕಾಣಬಹುದು.

ಸ್ವರವಚನಗಳ ಆದಿಯಲ್ಲಿ ಪಲ್ಲಕ್ಕೆ ಮೊದಲು ರಾಗ ಮತ್ತು ತಾಳಗಳು ಕವಿಯಿಂದ ಉಲ್ಲೇಖಿಸಲ್ಪಡುವುದು ಸಾಮಾನ್ಯ. ಆದರೆ ಮೌಖಿಕ ಪರಂಪರೆಯಲ್ಲಿ ಸಾಗಿ ಬಂದಿರುವ ಈ ಭಾಗದ ಸ್ವರವಚನಗಳೆಲ್ಲ ರಾಗ-ತಾಳಗಳನ್ನು ಕಳೆದುಕೊಂಡಿವೆ. ಈ ಹಾಡುಗಳನ್ನು ಹಾಡುವವರು ಜನಸಾಮಾನ್ಯರು. ಇವರಲ್ಲಿ ಬಹುಪಾಲು ನಿರಕ್ಷರಿಗಳು. ಇವರು ಹಾಡುಗಳನ್ನು ಇನ್ನೊಬ್ಬರಿಂದ ಹಾಳೆಯಲ್ಲಿ ಬರೆಯಿಸಿಕೊಂಡು ಬಾಯಿಪಾಠ ಮಾಡುವುದೇ ಸಾಹಸದ ಮಾತು. ಅಂಥದರಲ್ಲಿ ರಾಗ-ತಾಳಗಳನ್ನು ಯಾರು ಕೇಳಬೇಕು? ಇವರ ಲಕ್ಷ್ಯವೆಲ್ಲ ಇರುತ್ತಿದ್ದುದು ಹಾಡಿನ ಅರ್ಥದ ಕಡೆಗೆ ಹೊರತು ರಾಗ-ತಾಳಗಳ ಕಡೆಗಲ್ಲ. ಇವನ್ನು ತಾವೇ ಹೊಂದಿಸಿಕೊಳ್ಳಬಹುದಲ್ಲ ಎಂಬ ತಿಳುವಳಿಕೆಯ ಹಿನ್ನೆಲೆಯಲ್ಲಿ ಇವನ್ನು ಗಂಭೀರವಾಗಿ ಪರಿಗಣಿಸದೇ ಹೋದರು.

ಮೂಲ ಕವಿಗಳೇ ಕೆಲವರು ಎಷ್ಟರಮಟ್ಟಿಗೆ ಈ ರಾಗ-ತಾಳಗಳನ್ನು ನಿರ್ದೇಶಿಸಿದ್ದಾರೆ ಹೇಳುವುದು ಕಷ್ಟ.

೩

ಈ ತತ್ವಪದಗಳಲ್ಲಿ ಸಾಕಷ್ಟು ವೈವಿಧ್ಯತೆಯಿದೆ. ಇಲ್ಲಿಯ ಬಹಳಷ್ಟು ಪದಗಳು ಅನುಭಾವವನ್ನೇ ಬಿಂಬಿಸುತ್ತವೆ. ನೇರವಾಗಿ ಅನುಭಾವವನ್ನು ಹೇಳುವವು ಕೆಲವು ಪದಗಳಾದರೆ ಇನ್ನು ಕೆಲವು ಪ್ರತಿಮಾ ವಿಧಾನದಲ್ಲಿ ಮಾತನಾಡುತ್ತವೆ. ಭಕ್ತಿಯ ಮಹಿಮೆ, ಜೀವನ ನಶ್ವರತೆ ಸತಿಪತಿ ಭಾವ ಮುಂತಾಗಿ ಈ ಹಾಡುಗಳು ಹಲವಾರು ಭಾವಗಳನ್ನು ಬಿಂಬಿಸುತ್ತವೆ. ಕಾಲಜ್ಞಾನದ ವಚನಗಳೂ, ಮಂಗಳಾರತಿ ಪದಗಳೂ ಮುಂಬಯಿ ಕರ್ನಾಟಕದಲ್ಲಿ ಹೇರಳವಾಗಿ ದೊರೆಯುತ್ತವೆ. ಇಲ್ಲಿಯ ಸ್ವರವಚನಕಾರರಿಗೆ ಅನ್ಯ ಕವಿಗಳ ಕಾವ್ಯಾಭ್ಯಾಸ ಇದ್ದಿರಬಹುದು. ಆದರೆ ಕಾವ್ಯಶಿಕ್ಷಣ ಎಷ್ಟರ ಮಟ್ಟಿಗೆ ದೊರೆಯುತ್ತಿತ್ತೋ ಹೇಳುವುದು ಕಷ್ಟ. ಆದರೆ ಹಿಂದಿನ ಕಾಲದಲ್ಲಿ ಮಠಗಳಲ್ಲಿ ನಡೆಯುತ್ತಿದ್ದ ಆಧ್ಯಾತ್ಮಿಕ ಚರ್ಚೆ ಇವರ ಕಾವ್ಯಕ್ರಿಯೆಗೆ ಚಾಲನೆಯನ್ನು ಒದಗಿಸುತ್ತಿತ್ತು. ಜೀವ-ದೇಹ, ಹರಿ-ಹರ, ಶಿವ-ಶಕ್ತಿಯರ ಪಕ್ಷ ವಹಿಸಿ ಅನೇಕ ಆಧ್ಯಾತ್ಮವಾದಿಗಳು ಸ್ಪರ್ಧೆಗಿಳಿಯುತ್ತಿದ್ದ ಹೊತ್ತಿನಲ್ಲಿ ಪುರಾಣ-ಇತಿಹಾಸಗ್ಗಳನ್ನೆಲ್ಲ ಜಾಲಾಡಿಸುತ್ತಿದ್ದರು. ಇವರು ಕೇವಲ ಚರ್ಚೆಗೆ, ಹಟಕ್ಕೆ ಎನ್ನುವಂತೆ ಮಾತ್ರ ಚರ್ಚೆಯನ್ನು ಮುಂದುವರಿಸುತ್ತಿರಲಿಲ್ಲ. ಅವರು ಮಾಡುತ್ತಿದ್ದ ವಾದವೆಲ್ಲ ಅವರ ನಂಬಿಕೆಯಾಗಿತ್ತು. ಇಂಥ ಚರ್ಚೆಯಲ್ಲಿ ಭಾಗವಹಿಸುತ್ತಿದ್ದ ಕವಿಮನೋಧರ್ಮದ ಕೆಲವರಾದರೂ ಈ ಚರ್ಚೆಯ ಫಲಶೃತಿಯನ್ನು ಕಾವ್ಯವಾಗಿಸುತ್ತಿದ್ದರು. ಇಂಥವರ ಕಾವ್ಯದಲ್ಲಿ ಕ್ರೋಢೀಕರಣಗೊಂಡ ವಿಷಯ ಕೇವಲ ಕವಿಕಲ್ಪನೆಯ ಕೂಸೆನ್ನಿಸದೆ ಬುದ್ಧಿಶಕ್ತಿಯ ಪ್ರಖರತೆಯನ್ನು ಒಳಗೊಂಡಿರುತ್ತಿತ್ತು. ಇದಕ್ಕೆ ಆಧಾರವಾಗಿ ಆಧ್ಯಾತ್ಮವಾದಿಗಳ ವಿಷಯ ಮಂಥನ ಇರುತ್ತಿತ್ತು. ಈ ಬಗೆಯ ಕಾವ್ಯ ಕಟ್ಟುತ್ತಿದ್ದ ಎಲ್ಲರೂ ಇಂಥ ಆಧ್ಯಾತ್ಮ ಗೋಷ್ಠಿಯಲ್ಲಿ ಭಾಗವಹಿಸುತ್ತಿದ್ದರೆಂಬುದೇನಿಲ್ಲ, ಅದೊಂದು ನೇಮವಲ್ಲ. ಕೆಲವರು ಇಂಥ ಗೋಷ್ಠಿಗಳನ್ನು ದೂರದಿಂದಲೇ ಅನುಭವಿಸಿರಬಹುದು, ಅಥವಾ ಆಧ್ಯಾತ್ಮದ ಅಧ್ಯಯನವೂ ಇವರಿಗೆ ಪೂರಕವಾಗಿದ್ದಿರಬಹುದು. ಇಷ್ಟು ಮಾತ್ರ ನಿಜ, ಕೇವಲ ಲೋಕಜ್ಞಾನ ಮಾತ್ರ ಸ್ವರವಚನಗಳನ್ನು ಸೃಷ್ಟಿಸಲಾರದು. ಅದಕ್ಕೆ ಆಧ್ಯಾತ್ಮವೆಂಬುದು ಸ್ವಾನುಭವವಾಗಿಯೋ, ಅನ್ಯಮೂಲದಿಂದೊಗಿದ ಅನುಭವವಾಗಿಯೋ ಒದಗಿ ಅಂತಃಕರಣವನ್ನು ತಟ್ಟಬೇಕು. ಅಂದಾಗ ಮಾತ್ರ ಇವರ ಕಾವ್ಯದ ಮಗ್ಗಕ್ಕೆ ಆಧ್ಯಾತ್ಮದ ಎಳೆಗಳು ಸೇರಿಕೊಳ್ಳುತ್ತವೆ. ಈ ಭಾವಸಂಪತ್ತು ಕಾವ್ಯಕ್ರಿಯೆಗೆ ಒಳಪಟ್ಟಾಗ ಶಬ್ದಾರ್ಥಗಳ ಸಂಬಂಧ, ಅಲಂಕಾರಗಳ ಬಳಕೆ, ವಿಡಂಬನೆ ಮುಂತಾಗಿ ಅನ್ಯಮಗ್ಗಲುಗಳು ಹಿಗ್ಗುತ್ತವೆ.

೪

ಸ್ವರವಚನಗಳು ಹೆಚ್ಚು ಪ್ರಸಿದ್ಧಗೊಂಡುದು ಅವುಗಳ ಪ್ರತಿಮಾ ವಿಧಾನದಿಂದ. ತಾತ್ವಿಕ ವಿಷಯವನ್ನು ನೇರವಾಗಿ ಹೇಳದೆ ಗ್ರಾಮೀಣ ಪರಿಸರದಲ್ಲಿ. ಹೆಚ್ಚು

ಪ್ರಚಲಿತವಾಗಿರುವ ಒಂದೊಂದು ವಿಷಯಕ್ಕೆ ಅನ್ವಯಿಸಿ ಹೇಳುವುದು ಈ ಕವ್ವಿಗಳಿಗೆ ಹೆಚ್ಚು ಪ್ರಿಯವಾದ ವಿಷಯ. ಉದಾಹರಣೆಗಳ ಮುಖಾಂತರ ಈ ಮಾತನ್ನು ವಿಶ್ಲೇಷಿಸಬಹುದು.

ಗಂಡ ಬರತಾನ ತಂಗಿ ನಿನ್ನ ಕರಿಲಾಕ
ಕರಕೊಂಡ ತಮ್ಮೂರಿಗ್ಹೋಗಲಾಕ
ಗಂಡ ಬಂದರ ನಿನಗ ಸಿಟ್ಯಾಕೆ
ಸಿಟ್ಟಿಗೆದ್ದ ಶಿವನಿಗೆ ಬೆವ್ವತಿಯಾಕ
ಆರಮಂದಿ ಕೂಡಿ ತಾಳಿ ಕಟ್ಟಿದ್ದಕ
ಉಡಿ ತುಂಬಿ ನಿನ್ನ ಕರಕೊಂಡ ಹೋಗುದಕ
ಲಗುಮಾಡಿ ಬಬಲಾದಿಗ್ಹೋಗುದಕ
ಸದಾಶಿವನ ಪಾದ ಪೂಜಿ ಮಾಡುದಕ

ಜೀವಕ್ಕೆ ಪರಮಾತ್ಮನೇ ಒಡೆಯ. ಅವನ ಆಜ್ಞೆಯಿಂದಲೇ ಇದರ ಚಲನವಲನಗಳೆಲ್ಲ ನಿರ್ಧರಿಸಲ್ಪಡುತ್ತವೆ. ಜೀವ ಪ್ರಪಂಚಕ್ಕೆ ಬರುವುದೂ ಅವನಿಚ್ಛೆಯಂತೆ. ದೇವಸಾನಿಧ್ಯ ಶ್ರೇಷ್ಠ ನಿಜ, ಆದರ ಪ್ರಾಪ್ತಿಗಾಗಿ ಈ ಐಹಿಕ ಬದುಕನ್ನು ಬಾಳಬೇಕು. ಪರಮಾತ್ಮ ಗಂಡನಾಗಿ ಆಣತಿಗೈದು ಜೀವವನ್ನೇನೋ ಇಲ್ಲಿಗೆ ತರುತ್ತಾನೆ. ಆದರೆ ಇಲ್ಲಿ ಶಕ್ತಿಯುತವಾದ ಆಕರ್ಷಣೆ ಪಂಚೇಂದ್ರಿಯಗಳ ಮೂಲಕ ಜೀವಕ್ಕೆ ಅಂಟಿಕೊಳ್ಳುತ್ತದೆ. ಇದು ಎಷ್ಟೊಂದು ಪ್ರಬಲಗೊಳ್ಳುತ್ತದೆಂದರೆ ಪರಮಾತ್ಮ ಹಿಂದೆ ಉಳಿದು ಅರಿಷಡ್ವರ್ಗಗಳೇ ತಾಳಿಕಟ್ಟಿದ ಗಂಡರಂತೆ ನಿಯಂತ್ರಿಸುತ್ತವೆ. ಇವುಗಳ ಅಧೀನದಲ್ಲೇ ಜೀವ ಬಾಳಬೇಕು. ಇದರಿಂದ ಪಾರಾಗಲು ಒಂದೇ ದಾರಿ ಭಕ್ತಿ. ದೇವನಲ್ಲಿ ನಂಬಿಕೆಯಿಟ್ಟು ಪಾದಪೂಜೆಗೈದರೆ ಇಲ್ಲಿಂದ ಪಾರಾಗಬಹುದು. ಇಲ್ಲಿ ಅರಿಷಡ್ವರ್ಗಗಳನ್ನು ಬೈಯ್ಯುವುದಿಲ್ಲ. ಸಾಮಾನ್ಯ ಜೀವ ಎತ್ತರಗೊಳ್ಳಲು ಇವು ಅವಶ್ಯಕ. ಇವುಗಳ ಮಧ್ಯದಲ್ಲಿ ಬೆಂದು ಬೆಂದು ಪರಿಶುದ್ಧಗೊಳ್ಳಬೇಕು. ಅಂತು ಇವು ಮನುಷ್ಯ ಗಟ್ಟಿಗೊಳ್ಳಲು ಇರುವ ಮಾಧ್ಯಮಗಳು. ಗ್ರಾಮೀಣ ಪರಿಸರದಲ್ಲಿ ಗಂಡ ಹೆಂಡಿರ ಸಂಬಂಧ ಸಮಾನಮಟ್ಟದ್ದಲ್ಲ. ಅವನ ಇಚ್ಛೆಯಂತೆ ಅವನ ಅಧೀನದಲ್ಲೇ ಇವಳ ಬದುಕು. ಇದಿಲ್ಲಿ ಅನುಭಾವವಾಗಿ ಮಾಗಿ ಸುಲಭಗ್ರಾಹ್ಯವೆನಿಸುತ್ತದೆ.

ಯಾವ ಊರವರು ಎಲ್ಲಿಗ್ಹೊರಟೀರಿ
ನಮ್ಮ ಊರ ಶಿವಪುರ
ಕರ್ಮ ಎಂಬುದ್ದೈತ್ಹೋ ದಾರಿ
ಕರ್ಮ ಎಂಬೋ ಕಂಟಿಯ ಒಳಗ ಅಡಗೈತೋ ದಾರಿ
ಅಡ್ಡತಿಡ್ಡ ಹೋಗ್ಯಾವ ದಾರಿ
ಅಲ್ಲಿಗ್ಹ್ಯಾಂದೀರಿ

೧. ಇಲ್ಲಿಯ ವಿಶ್ಲೇಷಣೆಗೆ ಹೆಚ್ಚಾಗಿ ಬಬಲಾದಿ ಚಿಕ್ಕಯ್ಯನವರ ಪದಗಳನ್ನು ಆಧಾರವಾಗಿ ಇರಿಸಿಕೊಳ್ಳಲಾಗಿದೆ. ಆನುಷಂಗಿಕವಾಗಿ ಅನ್ಯ ಪದಗಳೂ ಸೇರಿವೆ.

ದೊಡ್ಡರ್‍ಯಾಣ ಹೋಗತಿ ಎಲ್ಲಿ
ಗುರತಾ ಹಿಡದು ನಡಿರಿ
ಕರ್ಮ ಮಾಡಿ ಮಾಡಿ ನಿಮ್ಮ
ತಲಗಿಂಬ ಇಟ್ಟೀರಿ
ಧರ್ಮ ಎಲ್ಲ ಹಾಸಿಗಿ ಬಿಟ್ಟಿ
ದೂರ ಮಲಗೀರಿ
ಹಿರಿಹೊಳಿ ದಂಡಿಲಿ
ಮೆರೆಯುವ ಬಬಲಾದಿ
ತಂದಿ ಸದಾಶಿವ
ಹೇಳತಾನ ತಿಳಿರಿ

ಮರ್ತ್ಯಲೋಕದ ಸಂಸಾರಿಗಳೆಲ್ಲ ಇಲ್ಲಿ ಪಯಣಿಗರಾಗಿದ್ದಾರೆ. ಕರ್ಮದ ದಾರಿ ಸವೆಸಿ ಶಿವಪುರವನ್ನು ಸೇರುವ ಗುರಿ ನಮ್ಮದಾಗಿರಬೇಕು. ಈ ದಾರಿ ಸ್ಪಷ್ಟವಾಗಿಲ್ಲ, ಮುಳ್ಳು ಕಂಟಿಗಳಲ್ಲಿ ಅದು ಅಡಗಿದೆ. ಸಂಸಾರದ ದಾರಿಯಲ್ಲಿ ಎದುರಾಗುವ ನೂರೊಂದು ಸಮಸ್ಯೆಗಳು ಮುಳ್ಳುಗಳಾಗಿ ನಮ್ಮನ್ನು ಚುಚ್ಚುತ್ತಲೇ ಇರುತ್ತವೆ. ಇವನ್ನೆಲ್ಲ ಸಹಿಸಿಕೊಂಡೋ ನಿವಾರಿಸಿಕೊಂಡೋ ನಮ್ಮ ಸತ್ಪಥವನ್ನು ಹುಡುಕಿಕೊಂಡು ಕ್ರಮಿಸಬೇಕು. ಕವಿ, ಮಾರ್ಗದರ್ಶಕನಂತೆ ಪ್ರಯಾಣಿಕರಿಗೆ ಸಲಹೆ ಸೂಚನೆಗಳನ್ನು ಕೊಡುತ್ತ ಹೋಗುತ್ತಾನೆ; ದಾರಿ ನೇರವಾಗಿಲ್ಲ, ಅಡ್ಡ ತಿಡ್ಡ ಹೋಗುತ್ತದೆ. ಅದು ಒಮ್ಮೊಮ್ಮೆ ದೊಡ್ಡ ಅರಣ್ಯಕ್ಕೆ ನಮ್ಮನ್ನು ಕರೆದೊಯ್ದು ಶಾಶ್ವತವಾಗಿ ದಿಕ್ಕು ತಪ್ಪಿಸಬಹುದು. ಆದ್ದರಿಂದ ಸವೆಸುತ್ತಿರುವ ದಾರಿ ಸರಿಯಾಗಿದೆಯೋ ಎಂದು ಗುರುತಿಸುತ್ತಿರಬೇಕು. ಆಗೀಗ ಪಡೆಯುವ ವಿಶ್ರಾಂತಿಯ ಸಂದರ್ಭದಲ್ಲೂ ನಾವು ಎಚ್ಚರವನ್ನು ಕಳೆದುಕೊಳ್ಳಬಾರದು. ಕರ್ಮವನ್ನೇ ತಲೆದಿಂಬಿನಂತೆ ಸಮೀಪಕ್ಕೆ ಎಳೆದುಕೊಂಡು ಧರ್ಮದ ಹಾಸಿಗೆಯನ್ನು ದೂರ ತಳ್ಳಿದರೆ ಹೇಗೆ? ಒಟ್ಟಾರೆ ತನ್ನ ಪಯಣ ತನಗೆ ಅರ್ಥವಾಗದ ರೀತಿಯಲ್ಲಿರಬಾರದು. ತಿಳುವಳಿಕೆಯನ್ನು ದೇವರಿಂದಲೋ ಹಿರಿಯರಿಂದಲೋ ಈ ವಿಷಯದಲ್ಲಿ ಪಡೆಯುತ್ತಲೇ ಇರಬೇಕು. ಅವರು ತೋರುವ ಬೆಳಕು, ಹಿಡಿಯುವ ಪಂಜು ಪಯಣವನ್ನು ಸುಲಭವಾಗಿಸುತ್ತದೆ.

ಬದುಕಿನ ನಶ್ವರತೆ ಮನುಷ್ಯನನ್ನು ಕಂಗೆಡಿಸುತ್ತದೆ. ತಾನು ನಂಬಿದ ಐಹಿಕ ಭೋಗಗಳೆಲ್ಲ ಮರಣಕಾಲ ಸನ್ನಿಹಿತವಾದಾಗ ಅರ್ಥಹೀನವೆನಿಸುತ್ತವೆ.

ಬೆಲ್ಲದ ಹೇರಿನಾಂಗ ಬೇಕಾದಷ್ಟು ಮಂದಿ ಬಳಗ ||ಪ||
ನಿಲ್ಲಗೊಡದ ಹೋಗತಿತ್ತ ಜೀವವ

ನಿಲ್ಲಗೊಡದ ನನ್ನ ಯಮದೂತರೊಯ್ಯುವಾಗ ||೧||
ಬೆಲ್ಲ ಬೆಂವ್ವಾದೀತಲ್ಲ ಕಾಯವ

ಸಕ್ಕರಿ ಹೇರಿನಾಂಗ ಸೀವುಂಡ ಪಾಯಸ
ಜಕ್ಕುನ ಜರದೆಲ್ಲ ಜೀವವ

ಜಕ್ಕ ಬಡದ ನನ್ನ ಯಮದ್ಯೆತರೊಯ್ಯುವಾಗ ||೨||
ಸಕ್ಕರಿ ಇಸವನಾದ್ಯಾ ಕಾಯವ

ನೀರಿನ ಮ್ಯಾಲಿನ ಗುರಳಿ ಹಾರಿ ತೋರಿ ಬೀಳುವಂತೆ
ಹಾರಿ ಹಾರಿ ಹೋಗುತ್ತಿತ್ತ ಜೀಂವವ
ಹಾರಗೊಡದ ನನ್ನ ಯಮದ್ಯೆತರೊಯ್ಯುವಾಗ ||೩||
ಯಾರಿಗಿ ಯಾರಿಲ್ಲ ಕಾಯವ

ಚಂದುಳ್ಳ ಪಲ್ಲಕ್ಕಿ ದುಂಡುಳ್ಳ ಅಕ್ಷರ
ಗಂದ ಗಮನ್ಯಾರ್‍ಯಾರ ಜೀವವ
ಗಂದ ಗಮನ್ಯಾರ್‍ಯಾರ ಮಡದಿ ಮಕ್ಕಳ್ಯಾರ
ಯಾರಿಗಿ ಯಾರಿಲ್ಲ ಕಾಯವ ||೪||

ಹುಟ್ಟುದೊಂದ್ಹೊಲಿವೂರ ಬೆಳವೂತ ಮಲಿವೂರ
ಇದ್ದಲ್ಲಿ ಪೂಜಿಗೊನ್ನಿ ಗಡಪೂರ
ಇದ್ದಲ್ಲಿ ಪೂಜಿಗೊನ್ನಿ ಗಡಪೂರ ಇಟ್ಟಲನ ||೫||
ಗಟ್ಟಿಗೊಂಡ ಪೂಜಿಗೊನ್ನಿ ಕಾಯವ

ಇಡೀ ಹಾಡು ಬದುಕಿನ ನಶ್ವರತೆಯನ್ನು ಪರಿಣಾಮಕಾರಿಯಾಗಿ ಹಿಡಿದಿಟ್ಟಿದೆ. ಬದುಕಿರುವಾಗ ಕಳ್ಳುಬಳ್ಳಿಯೊಂದಿಗೆ ಸರಸವಾಡುತ್ತ ಸುಖದಿಂದಿದ್ದ ಜೀವಕ್ಕೆ ಮರಣಬಂದಾಗ ತಳಮಳವುಂಟಾಗುತ್ತದೆ. ಮರಣ ಸನ್ನಿಹತವಾದಾಗ ಬೆಲ್ಲ, ಸಕ್ಕರಿ ಕಹಿಯಾಗುತ್ತವೆ. ಜೀವ ನೀರ ಮೇಲಿನ ಗುರುಳಿಯಂತೆ ಒಡೆದು ಹೋಗುವಾಗ ಯಾರು ತಡೆಯಬೇಕು, ಯಾರಿಗೆ ಯಾರು? ಮಡದಿ, ಮಕ್ಕಳು ಗಂಧಗಮನೆಯರು ಎಲ್ಲವೂ ಸುಳ್ಳು. ಈ ಅಶಾಶ್ವತ ಪ್ರಪಂಚವನ್ನೇ ನಂಬಿ ಬದುಕಿದ ಜೀವ ಕೊನೆಗಳಿಗೆಯಲ್ಲಿ ದೇವರನ್ನು ನಂಬಿ ಪೂಜಿಸುತ್ತದೆ.

ಸ್ವರವಚನಗಳ ಬಹುದೊಡ್ಡ ಗುರಿ ಸಾಮಾಜಿಕ ಸ್ವಾಸ್ಥ್ಯ. ಆದ್ದರಿಂದ ಕೇವಲ ತಾತ್ವಿಕ ವಿಷಯಗಳನ್ನು ಉಪದೇಶಪರವಾಗಿ ಹೇಳುತ್ತ ಹೋಗುವುದಿಲ್ಲ. ಸಾಮಾಜಿಕ ಎಲ್ಲ ಅವಸ್ಥೆಗಳನ್ನು ಕಣ್ಣುಬಿಟ್ಟು ನೋಡುವ ಕವಿ ಇವರ ಡಾಂಭಿಕತನವನ್ನು ಬಯಲಿಗೆಳೆಯುತ್ತಾನೆ.

ದಾನಧರಮ ಗುಣವೊಂದ ನೀಡಿ
ಹರುಷದಿಂದ ನಲಿದಾಡಿ
ಜಂಗಮ ಬಂದಾನ ನೋಡಿ
ಇದ್ದಿಲ್ಲ ಅನಬ್ಯಾಡ ಖೋಡಿ
ಕಲ್ಲದೇವರ ಜಗಲಿಯ ಮಾಡಿ
ಹೋಳಿಗಿ ತುಪ್ಪ ಎಡಿಯ ಮಾಡಿ। ಜಂಗಮ . . . . . . .

ಭಿಕ್ಷುಕ ಬಂದ ಸಾಧುನ ನೋಡಿ
ಕದಾಹಾಕಿ ಹ್ವಾದೆಲ್ಲ ಓಡಿ। ಜಂಗಮ . . . . .

ವರಿಗ್ಹಚ್ಚಿ ಭಿಕ್ಷವ ಬೇಡಿ
ಸೆರಿ ಅಂಬಲಿ ಸಿಗಲಿಲ್ಲ ಖೋಡಿ! ಜಂಗಮ . . . . .
ಗುರುಮಠ ಬಬಲಾದಿ
ಸದಾಶಿವ ಚಿಕ್ಕೈನವರು! ಜಂಗಮ . . . . . . .

ನಮ್ಮ ಡಾಂಭಿಕ ಭಕ್ತಿಯನ್ನು ಕವಿಯಿಲ್ಲಿ ಖಾರವಾಗಿಯೇ ವಿಡಂಬಿಸಿದ್ದಾನೆ. ನಾವು ಉಣಲಾರದ ಕಲ್ಲುದೇವರಿಗೆ ಜಗುಲಿ ಮಾಡುತ್ತೇವೆ, ಹೋಳಿಗಿ ತುಪ್ಪದ ನೈವೇದ್ಯ ಹಿಡಿಯುತ್ತೇವೆ. ಆದರೆ ಉಣ್ಣುವ ಜಂಗಮ ಬಂದರೆ ಮನೆಯ ಕದ ಹಾಕಿಕೊಳ್ಳುತ್ತೇವೆ. ಈ ಅನುಚಿತ ದ್ವಂದ್ವವನ್ನು ಖಂಡಿಸುತ್ತ ಕವಿ ದಾನಧರ್ಮಕ್ಕೆ ಅವಕಾಶ ಕೊಡು, ಇಗ್ಲೂ ಇಲ್ಲೆನಬೇಡ ಎಂದು ಹೇಳುತ್ತಾನೆ.

ಅನುಭಾವ ನಮ್ಮ ತಾತ್ವಿಕರ, ಸಾಮಾಜಿಕರ ಜೀವದುಸಿರು, ಪ್ರೀತಿಯ ವಿಷಯ. ಅಂತೆಯೇ ಸ್ವರವಚನಗಳಲ್ಲಿ ಸಿಂಹಪಾಲು ಈ ಬಗೆಯ ಹಾಡುಗಳಿಗೇ ಹೋಗುತ್ತದೆ. ನೇರವಾಗಿಯೋ ಪ್ರತಿಮಾ ವಿಧಾನದಲ್ಲೋ ಹರಿದು ಬರುವ ಈ ಹಾಡುಗಳು ಒಂದು ಕಾಲಕ್ಕೆ ಜನಸಾಮಾನ್ಯರ ಆಧ್ಯಾತ್ಮ ಅಭೀಪ್ಸೆಯನ್ನು ತಣಿಸಿದವು. ಈ ಹಾಡುಗಳಲ್ಲಿ ಅಲ್ಲಲ್ಲಿ ತೋರುವ ಗೂಢಾರ್ಥಗಳು ಜನಪದರಿಗೆ ಅರ್ಥವಾಗಲಿಕ್ಕಿಲ್ಲ. ಆದರೆ ಹಾಡಿನ ಒಪ್ಪಂದ ಭಾವಗ್ರಹಿಕೆಗೆ ತೊಂದರೆಯಾಗದ ರೀತಿಯಲ್ಲಿ ಈ ಹಾಡುಗಳ ರಚನೆಯಿರುತ್ತದೆ.

ಮುಂಬಯಿ ಕರ್ನಾಟಕದಲ್ಲಿ ಪ್ರಸಾರಗೊಂಡಿರುವ ಕಾಲಜ್ಞಾನ ವಚನಗಳು ತಮ್ಮದೇ ಆದ ವೈಶಿಷ್ಟ್ಯ ಪಡೆದುಕೊಂಡಿದೆ. ಕಾಲಜ್ಞಾನ ವಚನಗಳ ಸತ್ಯಾಸತ್ಯಗಳ ಬಗೆಗೆ ಜನಸಾಮಾನ್ಯರು ತಲೆಕೆಡಿಸಿಕೊಂಡವರಲ್ಲ. ಇವು ಜ್ಞಾನಿ-ಸತ್ಪುರುಷರಿಂದ ಬಂದವುಗಳೆಂಬ ಪವಿತ್ರ ಭಾವನೆಯಿಂದ ಸ್ವೀಕರಿಸಿದ್ದಾರೆ. ಎಲ್ಲ ಕಾಲಜ್ಞಾನ ವಚನಗಳನ್ನು ಭಜನೆಯಲ್ಲಿ ತಾಳಿಗೆ ಹಚ್ಚಿ ಹಾಡುವುದಿಲ್ಲ. ಕೇವಲ ರಾಗವಾಗಿ ವಾಚಿಸುವುದು ರೂಢಿ.

ಮುಂಬಯಿ ಕರ್ನಾಟಕದಲ್ಲಿ ಹೆಚ್ಚು ಪ್ರಚಲಿತವಿರುವ ಕಾಲಜ್ಞಾನ ವಚನಗಳೆಂದರೆ ಬಬಲಾದಿಯವರವು. ಈ ವಚನಗಳನ್ನು ಭಜನೆಯವರು ಹಾಡುವುದಕ್ಕಿಂತ ಸಾರುವ ಅಯ್ಯನವರೇ ಅಧಿಕ ಪ್ರಮಾಣದಲ್ಲಿ ವಾಚಿಸುತ್ತಾರೆ. ಕಾಲಜ್ಞಾನ ವಚನಗಳಲ್ಲಿ ಹಲವಾರು ವಿಷಯಗಳು ಸೇರುತ್ತವೆ. ಜಗತ್ತಿನ ಭವಿಷ್ಯಕ್ಕೆ ಸೇರಿದ ಹಲವಾರು ವಿಷಯಗಳು ಇಲ್ಲಿ ನಿರೂಪಿಸಲ್ಪಡುತ್ತವೆ. ಬಬಲಾದಿ ಚಿಕ್ಕಯ್ಯನವರ ಈ ಬಗೆಯ ಹಾಡೊಂದು ೬೨ ನುಡಿಗಳನ್ನು ಹೊಂದಿದೆ. ಎರಡು ಪದ್ಯಗಳನ್ನಿಲ್ಲಿ ಉದಾಹರಣೆಯಾಗಿ ನೋಡಬಹುದು:

ಹಗರ ನೋಡಲಿ ಜಗದ ಆಟಣ್ಣ
ಸುಳ್ಳಲ್ಲೊ ಯಣ್ಣಾ
ಇನ್ನ ನೋಡರಿ ಲೋಕದಾಟಣ್ಣ
ಕಲ್ಲುಕೋಳಿಯು ಕೂಗುತಾವಣ್ಣ
ಬಲ್ಲಿದ ಶರಣರು
ಉಳವಿ ಬಿಟ್ಟು ಸಾಗುತಾರಣ್ಣ

ಮಂಗಳಾರತಿ ಪದಗಳೂ ಹಲವಾರು ಈ ಭಾಗದಲ್ಲಿ ದೊರೆಯುತ್ತವೆ. ಬಹಳಷ್ಟು ಹಾಡುಗಳು ಕವಿಗಳ ಇಷ್ಟದೈವದ ಅಂಕಿತದಲ್ಲಿ ದೊರೆಯುತ್ತವೆ. ಸೊನ್ನಲಾಪುರ ಸಿದ್ಧರಾಮೇಶ್ವರನ ಅಂಕಿತದಲ್ಲಿ ಬರುವ ಮಂಗಳಾರತಿ ಪದವನ್ನಿಲ್ಲಿ ಉಲ್ಲೇಖಿಸಬಹುದು.

ಕರ್ಪೂರಾರುತಿ ಬೆಳಗಿರೆ
ಕಾರುಣ್ಯ ಮೃಡಹರ ದೇವಗೆ
ನೀಲಕಂಧರ ನಿಗಮಗೋಚರ
ಬಾಲಚಂದ್ರ ಭರಣಗೆ
ವಾರಿಜೋದ್ಭವ ಶಿರವ ಹರಿದನು
ಮಾರಹರ ಮಾದೇವಗೆ
ಘೋರ ದುರಿತವ ದೂರ ಮಾಡುವ
ಶೂರ ಷಣ್ಮುಖನಯ್ಯಗೆ
ಶರಣು ಜನರಿಗೆ ವರವನಿತ್ತನು
ಪರಮ ಪಾರ್ವತಿ ಅರಸಗೆ
ಧರೆಯೊಳಧಿಕವಾದ ಸೊನ್ನಲಾಪುರ
ಸಿದ್ಧರಾಮೇಶ್ವರನಿಗೆ

೫

ಭಕ್ತಿ-ತತ್ವ-ವಿಡಂಬನೆ ಮುಂತಾಗಿ ವಿವಿಧ ಭಾವಗಳಿಂದ ಕೂಡಿದ ಈ ಸ್ವರವಚನಗಳ ಭಾಷೆ ಆಡುನುಡಿ, ಗ್ರಾಂಥಿಕ ಎರಡೂ ಬಗೆಯದಾಗಿದೆ. ಕೆಲವು ಹಾಡುಗಳಲ್ಲಿ ಎರಡೂ ಮೇಳೈಸುತ್ತವೆ. ಈ ಹಾಡುಗಳಿಗೊದಗಿದ ಗ್ರಾಮೀಣ ಭಾವ-ಭಾಷೆಗಳಿಂದಾಗಿ ಒಂದು ಬಗೆಯ ಸಹಜತೆ ಇಲ್ಲಿದೆ. 'ಹೋಳಿಗಿ ತುಪ್ಪ ಎಡಿಯ ಮಾಡಿ', 'ಗಂಡ ಬರತಾನ ನಿನ್ನ ಕರಿಲಾಕ' ಎಂಬ ಮಾತುಗಳಲ್ಲಿ ಜನಪದ ಭಾವ ಆತ್ಮೀಯವೆನಿಸುತ್ತದೆ. 'ಚಿಕ್ಕಯ್ಯನವರ ವಾಕ್ಯವು ಸುಳ್ಳಂದವರಿಗೆ ಮೂರೇಣಿನ ಗೂಟೈತಿ' ಎಂಬ ಮಾತು ಬಿರುಸಾಯಿತೆನಿಸಿದರೂ ಗ್ರಾಮೀಣ ಅಭಿವ್ಯಕ್ತಿಯ ಬಗೆಯನ್ನು ನಿಚ್ಚಳವಾಗಿಸುತ್ತದೆ. ದೇಸೀಯ ಶಬ್ದಗಳೂ ತುಂಬ ಸಹಜವೆಂಬಂತೆ ಅಧಿಕ ಪ್ರಮಾಣದಲ್ಲಿ ತೋರುತ್ತವೆ. ತಲೆಗಿಂಬು, ಜೋಡಿ, ಎಡಿ, ಅಡ್ಡತಿಡ್ಡ, ಹಿಂಹೊಳಿ, ಉಡಿತುಂಬಿ ಮುಂತಾದ ಶಬ್ದವಿಶೇಷಗಳು, ನುಡಿಗಟ್ಟುಗಳು ಗಮನ ಸೆಳೆಯುತ್ತವೆ.

ಇಂದಿಗೂ ಸ್ವರವಚನಗಳ ರಚನೆ ನಿಂತಿಲ್ಲ. ವಿಶೇಷವಾಗಿ ತಾವು ನಂಬಿದ ದೈವಶಕ್ತಿಯ ಅಥವಾ ಅವಧೂತವರ್ಗದ ವ್ಯಕ್ತಿಗಳನ್ನು ಕುರಿತು ಇಂದಿಗೂ ಇಂಥ ಹಾಡುಗಳು ಹುಟ್ಟಿಕೊಳ್ಳುತ್ತಿವೆ. ಬಬಲಾದಿ ಸದಾಶಿವಯ್ಯ, ಚಿಕ್ಕಯ್ಯ, ಮುಗಳಖೋಡ ಮಹಾರಾಜ, ಲಡ್ಡುಮುತ್ಯಾ ಮುಂತಾದವರನ್ನು ಕುರಿತ ಹಾಡುಗಳು ಸಾಕಷ್ಟು ಪ್ರಮಾಣದಲ್ಲಿ ದೊರೆಯುತ್ತವೆ.

೬

ಈ ಹಾಡುಗಳನೇಕ ವೈಯಕ್ತಿಕ ನೆಲೆಯಲ್ಲಿಯೂ ಹುಟ್ಟಿಕೊಂಡಿವೆ. 'ಇಲ್ಲಿ ಮುಳಿಗಿತೋ ಹಡಗ' ಎಂಬ ಪದ್ಯ ಬಬಲಾದಿ ಚಿಕ್ಕಯ್ಯನವರ ಅಂತಿಮ ಕಾಲದಲ್ಲಿ ರಚನೆಗೊಂಡಿದ್ದೆಂಬ ಐತಿಹ್ಯವಿದೆ. ಬಬಲಾದಿ ಚಿಕ್ಕಯ್ಯನವರ ಖ್ಯಾತಿಯನ್ನು ಕೇಳಿದ ದುರಗವ್ವ "ನುಂಗುತ್ತೇನೆ" ಎನ್ನುತ್ತಿದ್ದಳಂತೆ. ಚಿಕ್ಕಯ್ಯನವರು "ನನ್ನಂಥವನನ್ನು (ಸಾಧಕನನ್ನು) ನುಂಗುವುದು ನಿನಗೇನಾಗುತ್ತದೆ" ಎನ್ನುತ್ತಿದ್ದರಂತೆ. ದುರಗವ್ವ "ನಿನ್ನನೊಂದು ದಿನ ಮೂರು ದಾರಿ ಕೂಡುವಲ್ಲಿ ತಿನ್ನುತ್ತೇನೆ" ಎನ್ನುತ್ತಿದ್ದಳಂತೆ. ಚಿಕ್ಕಯ್ಯನವರು ದಿನಾಲು ಯೋಗಾಭ್ಯಾಸ ಮಾಡುತ್ತಿದ್ದರು.

ಒಂದು ದಿನ ವಿಜಾಪುರ ಕಡೆಗೆ ಮುಖಮಾಡಿ ಹೊರಟವರು ಸಾರವಾಡದ ಸಮೀಪ ಮೂರುದಾರಿ ಕೂಡುವಲ್ಲಿಗೆ ಬಂದರು. ಅಂದು ಅವರು ಮರೆತೋ ಏನೋ ಯೋಗಾಭ್ಯಾಸ ಮಾಡಿರಲಿಲ್ಲ. ಮೂರು ದಾರಿ ಕೂಡುವಲ್ಲಿಗೆ ಬರುವ ಹೊತ್ತಿಗೆ ದುರಗವ್ವ ಎದುರಿಗೆ ಬಂದು "ನಿನ್ನನ್ನಿಂದು ನುಂಗುತ್ತೇನೆ" ಎಂದಳು. ಚಿಕ್ಕಯ್ಯನವರು "ನುಂಗುಬಹುದು, ಆದರೆ ಮೂರು ತಾಸು ಅವಕಾಶ ಕೊಡು" ಎಂದರು. ದುರಗವ್ವ "ಆಗಲಿ" ಎಂದಳು.

ಮರಣಕ್ಕೆ ಮುಂಚಿನ ಮೂರು ತಾಸುಗಳ ಅವಧಿಯಲ್ಲಿ ಚಿಕ್ಕಯ್ಯನವರು ಎಕ್ಕೆ ಎಲೆ ಮೇಲೆ ಅನೇಕ ಪದ್ಯಗಳನ್ನು ಬರೆದರಂತೆ. ಅದರಲ್ಲಿ ಮುಖ್ಯ ಹಾಡು ಈ ಕೆಳಗಿನಂತಿದೆ:

ಇಲ್ಲಿ ಮುಣಗಿತೋ ಹಡಗಾ
ಇಲ್ಲಿ ಮುಣಗಿತೋ
ಅಲ್ಲೆ ಇಲ್ಲೆ ಹುಡುಕಿದರ ಎಲ್ಲಿ ನೆಲಿ ಹತ್ತಲಿಲ್ಲ
ಇಲ್ಲಿ ಮುಣಗಿತೊ

ಎಕ್ಕೆ ಎಲೆಯ ಮೇಲೆ ಬರೆದರು ಎಂಬ ಅತಿಶಯೋಕ್ತಿಯನ್ನು ಬದಿಗಿಂಸಬಹುದು. ಚಿಕ್ಕಯ್ಯನವರು ಹೇರಳ ಸಾಹಿತ್ಯಸೃಷ್ಟಿ ಮಾಡಿದರು ಎಂಬ ಮಾತು ಸುಳ್ಳಲ್ಲ. ಇದಕ್ಕೆ ಪದ್ಯವೊಂದರ ಆಧಾರವೂ ಇದೆ:

ಆದರೆ ಇಂಥವುಗಳ ಸಂಗ್ರಹಣೆಗೆ ತುಂಬ ಕಷ್ಟಪಡಬೇಕಾಗಿದೆ. ಇದು ಒಂದು ಬಗೆಯಾದರೆ ಮೌಖಿಕ ಪರಂಪರೆಯಿಂದಾಗಿ ಅನೇಕ ಹಾಡುಗಳ ಕರ್ತೃಗಳು ಮರೆಯಲ್ಲಿಯೇ ಉಳಿದಿರುವುದು ಇನ್ನೊಂದು ಬಗೆ. ಕೇವಲ ಅಂಕಿತದಿಂದ ಕವಿಯನ್ನು ಗುರುತಿಸಲಾಗುವುದಿಲ್ಲ. ಉದಾಹರಣೆಗೆ ಈ ಹಿಂದೆ ಇದೇ ಲೇಖನದಲ್ಲಿ ಉಲ್ಲೇಖಿಸಲ್ಪಟ್ಟಿರುವ 'ಬೆಲ್ಲದ ಹೇರಿನ್ಹಾಂಗ' ಎಂಬ ಹಾಡು ಗಡಪೂರ ಇಟ್ಟಲನ ಅಂಕಿತ ಹೊಂದಿದ್ದು ಇದರ ಕರ್ತೃವಾರೋ ತಿಳಿಯುವುದಿಲ್ಲ.

೩. ನೂರಾರು ಸಾವಿರಾರು ಪದಗಳ ಮಾಡಿದ ಜ್ಞಾನಿಯು ಜಗನ್ನತಿ ವಿಚಾರಿಸಿ ನೋಡಿದರ ಎಲ್ಲವೂ ಅರ್ಥ ಒಂದೇ ಅಲ್ಲೈತಿ

೭

ಮುಂಬಯಿ ಕರ್ನಾಟಕದಲ್ಲಿ ಮೌಖಿಕ ಪರಂಪರೆಯಲ್ಲಿ ನೂರಾರು ಸಾವಿರಾರು ತತ್ವಪದಗಳಿವೆ. ಅವಿನ್ನೂ ಸಂಗ್ರಹಗೊಂಡು ಪ್ರಕಟಗೊಳ್ಳಬೇಕಿದೆ. ಇಂಥ ಪದಗಳು ಇದುವರೆಗೆ ಸಂಗ್ರಹಗೊಳ್ಳದಿರುವುದಕ್ಕೆ ಮುಖ್ಯವಾಗಿ ಎರಡು ಕಾರಣಗಳನ್ನು ನಾವಿಲ್ಲಿ ಉಲ್ಲೇಖಿಸಬಹುದು.

೧. ವಿದ್ಯಾವಂತರ ನಿರ್ಲಕ್ಷ್ಯ ಅಥವಾ ಅಸಹಾಯಕತೆ.

೨. ಇವು ಮುದ್ರಣಗೊಳ್ಳಬಾರದೆಂಬ ಜನಸಾಮಾನ್ಯರ ನಂಬಿಕೆ.

ಸ್ವರವಚನಗಳು ಜಾನಪದರ ಬದುಕಿನಲ್ಲಿ ಹಾಸುಹೊಕ್ಕಾಗಿವೆ. ಇವು ಜನಪದ ಸಾಹಿತ್ಯದ ಒಂದು ಭಾಗವೇ ಆಗಿವೆಯೆಂಬ ತಿಳುವಳಿಕೆಯ ಕೊರತೆಯಿಂದಾಗಿ ವಿದ್ವಾಂಸರು ಇವುಗಳಿಂದ ದೂರ ಉಳಿದರೆಂದು ತೋರುತ್ತದೆ.[೩] ಬಹುಶಃ ನಿಜಗುಣ ಶಿವಯೋಗಿ, ಮುಪ್ಪಿನ ಷಡಕ್ಷರಿಗಳೆಲ್ಲ ಶಿಷ್ಟಕವಿಗಳೆನಿಸಿ ಇವರೆಲ್ಲ ಜಾನಪದ ಅಭ್ಯಾಸ ವಲಯಕ್ಕೆ ಸಂಬಂಧಪಟ್ಟವರಲ್ಲ ಎಂದಾಯಿತು. ಈ ಕಾರಣವಾಗಿಯೇ ತತ್ವಪದಗಳ ರಚನಾಕಾರರು, ಅವುಗಳನ್ನು ಹಾಡುವ ಭಜನಾ ಮೇಳದವರು ಇಂದಿಗೂ ಜಾನಪದ ಅಭ್ಯಾಸಿಗಳಿಂದ ದೂರ ಉಳಿದರು. ಸಾಹಿತ್ಯಿಕವಾಗಿ ನಿಜಗುಣ ಶಿವಯೋಗಿಯಂಥ ಕವಿಗಳು ಶಿಷ್ಟರೆನಿಸಬಹುದು. ಆದರೆ ಜನಪದ ಭಾಷೆಯಲ್ಲಿ ಜನಸಾಮಾನ್ಯರಿಗೆ ತಿಳಿಯುವ ರೀತಿಯಲ್ಲಿ ತತ್ವಪದಗಳನ್ನು ಸೃಷ್ಟಿಸಿದ ಬಬಲಾದಿ ಸದಾಶಿವಯ್ಯ, ಚಿಕ್ಕಯ್ಯನಂಥವರ ಪದಗಳು ಇದುವರೆಗೆ ಸಂಗ್ರಹಗೊಳ್ಳದಿರುವುದು ದುರ್ದೈವದ ಸಂಗತಿ.

ಕ್ರಿ. ಶ. ೧೮೭೧ರಲ್ಲಿ ಚಾರ್ಲ್ಸ್ ಇ. ಗ್ರೋವರ್ ದಾಸರ ಪದಗಳನ್ನು ಜನಪದ ಸಾಹಿತ್ಯವೆಂದೇ ಭಾವಿಸಿ ಸಂಗ್ರಹಿಸಿ The folk songs of Southern India ಎಂಬ ಕೃತಿ ಪ್ರಕಟಿಸಿದ. ಈ ಸಂಬಂಧದಲ್ಲಿ ಅವನ ದೃಷ್ಟಿ ಜಾನಪದರಿಂದಲೇ ಹುಟ್ಟುಹಾಕಲ್ಪಟ್ಟ ಭಜನಾ ಮೇಳಗಳನ್ನು ಅನುಲಕ್ಷಿಸಿದ್ದು ಸ್ಪಷ್ಟವಾಗಿ ತೋರುತ್ತದೆ. ಅವನನ್ನು ಅನುಸರಿಸಿ ನಾವೂ ಮುಂದುವರಿದಿದ್ದರೆ ಮುಂಬಯಿ ಕರ್ನಾಟಕದ ಮೌಖಿಕ ಸ್ವರವಚನಗಳಿಗೆ ಈ ಪರಿಸ್ಥಿತಿ ಬರುತ್ತಿರಲಿಲ್ಲ.

ಇತ್ತಿತ್ತಲಾಗಿ ಸಂಗ್ರಹದಲ್ಲಿ ಆಸಕ್ತಿಯುಳ್ಳ ಕೆಲವು ವಿದ್ಯಾವಂತರ ಸ್ಥಿತಿಯೇನಾಗಿದೆಯೆಂದರೆ ಕೈಯಿಂದ ಹಣಹಾಕಿ ಕ್ಷೇತ್ರಕಾರ್ಯ ಮಾಡಿ ಕೇವಲ ಸಂಗ್ರಹಿಸಿಡುವುದಾಗಿದೆ. ಆರ್ಥಿಕ ಮುಗ್ಗಟ್ಟಿನಿಂದ ಅವುಗಳನ್ನು ಪ್ರಕಟಿಸುವುದಿಲ್ಲ. ಕ್ಷೇತ್ರಕಾರ್ಯಕ್ಕೂ ಹಣ ಒದಗಿಸಿ, ಸಂಗ್ರಹಗೊಂಡ ಇಂಥ ಸ್ವರವಚನಗಳನ್ನು ಪ್ರಕಟಿಸಲು

೩. ಅಪವಾದವೆನ್ನುವಂತೆ ಕೆಲವರು ಈ ಕೆಲಸಕ್ಕೆ ಕೈ ಹಾಕಿದರು. ಡಾ. ಎಂ. ಎಸ್. ಲಠ್ಠೆಯವರು ಹೈದರಾಬಾದ ಕರ್ನಾಟಕದಲ್ಲಿ ಪ್ರಚಾರದಲ್ಲಿರುವ ಕಡಕೋಳ ಮಡಿವಾಳಪ್ಪನವರ ಸ್ವರವಚನಗಳನ್ನು ಸಂಪಾದಿಸಿ ಕೊಟ್ಟಿದ್ದಾರೆ. ಗದುಗಿನ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆಯು ಈ ಗ್ರಂಥವನ್ನು ಪ್ರಕಾಶಿಸಿದೆ.

ವಿಶ್ವವಿದ್ಯಾಲಯಗಳು, ಮಠಮಾನ್ಯಗಳು ಮುಂದಾಗಬೇಕಿದೆ. ಈ ದಿಸೆಯಲ್ಲಿ ಗದುಗಿನ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆ, ಮೈಸೂರಿನ ಶಿವರಾತ್ರೀಶ್ವರ ದತ್ತಿನಿಧಿ ಸಂಸ್ಥೆ ಕೆಲಸ ಮಾಡುತ್ತಿರುವುದು ಸ್ವಾಗತಾರ್ಹವೆನಿಸಿದೆ.

ಮುಂಬೈ ಕರ್ನಾಟಕದ ಕೆಲವು ಭಾಗಗಳಲ್ಲಿ ಇಂಥ ಸ್ವರವಚನಗಳನ್ನು ಮೌಖಿಕ ರೀತಿಯಲ್ಲಿ ಕಲಿತುಕೊಳ್ಳಬಹುದು, ಹೆಚ್ಚೆಂದರೆ ಬರೆದುಕೊಂಡು ಕಲಿಯಬಹುದು. ಆದರೆ ಅವನ್ನು ಮುದ್ರಿಸಕೂಡದೆಂಬ ಭಾವುಕ ನಂಬಿಕೆಯಿದೆ. ಇದರಿಂದ ಆಳವಾದ ತಾತ್ವಿಕ ಹಿನ್ನೆಲೆ ಪಡೆದುಕೊಂಡಿರುವ ಅನುಭಾವಿಗಳ ಹಾಡುಗಳು ಸೀಮಿತ ಪ್ರದೇಶದಲ್ಲಿ ಉಳಿಯುವಂತಾಗಿದೆ. ಇಂಥ ಸ್ವರವಚನಗಳು ಒಂದೊಂದು ಮಠದ ಪರಂಪರೆಯಲ್ಲಿಯೇ ಬಂದಿರುವುದರಿಂದ ಆ ಮಠದಲ್ಲಿಯ ಹಸ್ತಪ್ರತಿಗಳನ್ನು ಸಂಗ್ರಹಿಸಿಕೊಂಡು ಪ್ರಕಟಿಸಲು ಆನ್ಯಮಠಾಧೀಶ್ವರರೇ ಮುಂದಾಗಬೇಕಿದೆ. ಇದರಿಂದ ಮುಂಬೈ ಕರ್ನಾಟಕದ ಸಾವಿರಾರು ಹಾಡುಗಳು ಬೆಳಕಿಗೆ ಬಂದು ಹರವಾದ ಪ್ರಚಾರ ದೊರೆತಂತಾಗುತ್ತದೆ.

ಮೌಖಿಕ ಸಂಪ್ರದಾಯದ ಈ ಸ್ವರವಚನಗಳನ್ನು ಸಂಗ್ರಹಿಸುವಲ್ಲಿ ಸಂಗ್ರಹಕಾರರು ಕೆಲವು ಜಾಗರೂಕ ಅಂಶಗಳನ್ನು ಗಮನಿಸಬೇಕಾಗುತ್ತದೆ. ಮುಂಬೈ ಕರ್ನಾಟಕದ ಮೌಖಿಕ ಪರಂಪರೆಯ ಸ್ವರವಚನಗಳನ್ನು ಸಂಗ್ರಹಿಸುವಾಗ ಪ್ರಸ್ತುತ ಲೇಖಕ ಎದುರಿಸಿದ ಕೆಲವು ಸಮಸ್ಯೆಗಳನ್ನು ಮನದಂದು ಈ ಕೆಲವು ಅಂಶಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

೧. ಹಾಡಿನ ಅಂಕಿತ ಬದಲಾಗಬಹುದು. ಕೆಲವು ಹಾಡುಗರು ತಮ್ಮ ಇಚ್ಛೆಯ ಕವಿಯ ಅಂಕಿತವನ್ನೋ ತಮ್ಮ ಗ್ರಾಮದೇವತೆಯ ಅಂಕಿತವನ್ನೋ ಮೂಲ ಅಂಕಿತದ ಬಲದಾಗಿ ಸೇರಿಸಿಬಿಡಬಹುದು. ಕೆಲವರು ತಾವೇ ಹಾಡನ್ನು ಬರೆದು ಪ್ರಸಿದ್ಧ ಕವಿಯ ಅಂಕಿತ ಇಡುವುದೂ ಉಂಟು. ಈ ದೋಷವನ್ನು ಗುರುತಿಸಿ ಸಂಗ್ರಹಕಾರ ಎಚ್ಚರಿಕೆಯಿಂದ ನಿರ್ದಿಷ್ಟ ಕವಿಯ ಹಾಡುಗಳನ್ನು ಗುರುತಿಸಿಕೊಳ್ಳಬೇಕಾಗುತ್ತದೆ. ಕವಿಯೊಬ್ಬನ ಹಾಡಿನ ಸ್ವರೂಪಜ್ಞಾನವೇ ಆಯಾ ಕವಿಯ ಅಂಕಿತವನ್ನು ಖಚಿತಪಡಿಸಬಲ್ಲುದು. ಪ್ರಾಚೀನ ಹಸ್ತಪ್ರತಿಗಳು ದೊರೆತರಂತೂ ಈ ಕಾರ್ಯ ಇನ್ನೂ ಸುಲಭವಾಗುತ್ತದೆ.

೨. ಸ್ವರವಚನಗಳನ್ನು ಬರೆಯುವಾಗ ಮೂಲಕವಿ ಹಾಡಿನ ಪ್ರಾರಂಭದಲ್ಲಿ ರಾಗ ಮತ್ತು ತಾಳಗಳನ್ನು ಉಲ್ಲೇಖಿಸಿರುತ್ತಾನೆ. ಆದರೆ ಸಾಮಾನ್ಯವಾಗಿ ಮೌಖಿಕ ಪರಂಪರೆಯಲ್ಲಿ ಈ ರಾಗ-ತಾಳಗಳು ಕಳೆದುಹೋಗುತ್ತವೆ. ಇದು ಒಂದು ಕೊರತೆಯೆಂದು ಭಾವಿಸಿ ಇಂಥ ಹಾಡುಗಳನ್ನು ಸಂಗ್ರಹಿಸದೇ ಬಿಡಬಾರದು.

೩. ಮೌಖಿಕ ಪರಂಪರೆಯಲ್ಲಿ ಕೆಲವು ನುಡಿಗಳು ಮಾಯವಾಗಿರಬಹುದು. ಒಂದೇ ಹಾಡನ್ನು ಎರಡು ಮೂರು ಕಡೆಗಳಲ್ಲಿ ಸಂಗ್ರಹಿಸಿ ಹಾಡನ್ನು ಪೂರ್ಣಗೊಳಿಸಿಕೊಳ್ಳಬಹುದು.

೪. ಮುಂಬೈ ಕರ್ನಾಟಕ ಪ್ರದೇಶದಲ್ಲಿ ಅನುಭಾವ ಲಾವಣಿಗಳನ್ನು ಸ್ವರವಚನಗಳೆಂದೂ ಇಂಥ ಲಾವಣಿಕಾರರನ್ನು ಸ್ವರವಚನಗಳ ಸೃಷ್ಟಿಕರ್ತರೆಂದೂ ತಪ್ಪು ತಿಳಿಯುವ ಸಾಧ್ಯತೆಯಿದೆ. ಏಕೆಂದರೆ ಸ್ವರವಚನ ಮತ್ತು ಲಾವಣಿಗಳ ಭಾಷೆ ಒಂದೇ

ತೆರನಾಗಿರುತ್ತದೆ. ಸಾಮಾನ್ಯವಾಗಿ ಲಾವಣಿಕಾರ ದ್ವೈತ-ಅದ್ವೈತ ಮುಂತಾಗಿ ಯಾವ ಪಂಥಕ್ಕೂ ಅಂಟಿಕೊಳ್ಳದೆ ಕೇವಲ ಅನುಭಾವವನ್ನೇ ಲಾವಣಿಯಲ್ಲಿ ನಿರೂಪಿಸುತ್ತಾನೆ. ಸ್ವರವಚನಗಳು ಒಂದೊಂದು ಶಾಖೆಯ ಅಥವಾ ಮಠದ ಸಾಂಪ್ರದಾಯಿಕ ತತ್ವಗಳನ್ನು ಬಿಂಬಿಸುತ್ತವೆ.

ಈ ಮುಂತಾದ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಸ್ವರವಚನಗಳ ಸಂಗ್ರಹ-ಸಂಪಾದನೆ ಕಾರ್ಯಗಳು ನಡೆದರೆ ಜಾನಪದ ಲೋಕಕ್ಕೆ ಬಹುದೊಡ್ಡ ಆಸ್ತಿಯನ್ನು ನಾವು ಉಳಿಸಿಕೊಟ್ಟಂತಾಗುತ್ತದೆ.

ಕೃತಜ್ಞತೆಗಳು

೧. ಬಸವೇಶ್ವರ ಭಜನಾ ಮಂಡಳ ಬೀಳಗಿ' ಗಣಪತಿ ಬೋರ್ಜಿ ಹಾಗೂ ಸಂಗಡಿಗರು

೨. ಮಲ್ಲಪ್ಪ ಕುಡಕುಂಟಿ ಬೀಳಗಿ.

೩. ಸಂಗಪ್ಪ ಟಿ. ಬೀಳಗಿ.

೪. ಶ್ರೀಮತಿ ಎಲ್ಲವ್ವ ಫಕೀರಪ್ಪ ಕಮತರ ತೊಂಡಿಕಟ್ಟಿ.



೬

# ಮೈಸೂರು ಕರ್ನಾಟಕದ ಮೌಖಿಕ ಸ್ವರವಚನಗಳು

ಡಿ. ಎಂ. ಮಹದೇವಮೂರ್ತಿ

## ಪ್ರಸ್ತಾವನೆ

ಕವಿರಾಜಮಾರ್ಗಕಾರನಿಗಿಂತಲೂ ಹಿಂದಿನಿಂದ ಬೆಳೆದು ಬಂದಿರಬಹುದಾದ 'ಹಾಡುಗಬ್ಬ'ಗಳು ವಿಷಯಾಂತರಗೊಂಡು ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಪ್ರಮಥರ ಕಾಲದಲ್ಲಿ ತತ್ವಪರವಾಗಿ, ಆಧ್ಯಾತ್ಮಿಕ ಮನೋಭಾವವನ್ನು ಮೈಗೂಡಿಸಿಕೊಂಡು ತಾಳ-ರಾಗ ಸಮನ್ವಿತವಾಗಿ 'ಸ್ವರವಚನ', 'ಸ್ವರಪದ', 'ಸ್ವರಸಾಹಿತ್ಯ' ಎಂಬ ಹೊಸ ಸಾಹಿತ್ಯಿಕ ಪರಿಭಾಷೆಯಲ್ಲಿ ಹೊಸ ಸಾಹಿತ್ಯಪ್ರಕಾರವೇ( form) ಸೃಷ್ಟಿಯಾಯಿತು. ವಿದ್ವಾಂಸರೊಬ್ಬರ ಮಾತಿನಂತೆ ಈ ಸ್ವರವಚನಗಳು "ಅದೃಷ್ಟಹೀನರ ಕಣ್ಣಿಗೆ ಬೀಳದೆ ಮಣ್ಣಿನಲ್ಲಿ ಅಡಗಿರುವ ನವನಿಧಿ ನಿಧಾನದಂತೆ-ಅವು ಧೂಳು ಮಸಿ ಮುಚ್ಚಿದ ಓಲೆಯ ಕಟ್ಟುಗಳಲ್ಲಿ ಮೈಗರೆದಿದ್ದವು"[೧]. ಇದುವರೆವಿಗೂ ತೆರೆಯ ಮರೆಯಲ್ಲೇ ಇದ್ದ ಈ ಪ್ರಕಾರಕ್ಕೆ ಕಾಯಕಲ್ಪ ನೀಡಿ ನಾಡಿನ ಉದ್ದಗಲಕ್ಕೂ ಹರಡಿರುವ ಈ ಸ್ವರವಚನಗಳನ್ನು ಸಮಗ್ರವಾಗಿ ಸಂಗ್ರಹಿಸಿ, ಶಾಸ್ತ್ರೀಯವಾಗಿ ಸಂಕಲಿಸಿ, ವಿಶ್ಲೇಷಿಸಿ ವಿಮರ್ಶಿಸುವ ಸ್ವರಸಾಹಿತ್ಯದ ಪುನರುದಯದ ಕಾಲ ಒಗದಿ ಬಂದಿರುವುದು ಕನ್ನಡಿಗರ ಭಾಗ್ಯೋದಯವೇ ಸರಿ.

## ವಚನ- ಸ್ವರವಚನ

"ತಾಳಮಾನ ಸರಿಸವನರಿಯೆ, ಓಜೆ ಬಜಾವಣೆಯ ಲೆಕ್ಕವನರಿಯೆ, ಅಮೃತಗಣ ದೇವಗಣವನರಿಯೆ ಕೂಡಲ ಸಂಗಮದೇವ, ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ" ಎಂಬಂತೆ ಬಸವಾದಿ ಶರಣರು ಮುಕ್ತಮನಸ್ಸಿನಿಂದ ಮುಕ್ತಛಂದದಲ್ಲಿ, ತಾಳ ನಿಯಮಗಳಿಂದ ಹೊರತಾಗಿ ಸರಳ ಸುಂದರ ಶೈಲಿಯಲ್ಲಿ ಮನದುಂಬಿ ಮೈದುಂಬಿ ಕೂಡಲ ಸಂಗಮನಿಗೆ ಕೇಡಿಲ್ಲದಂತೆ ಹಾಡಿದವು ಈ ವಚನಗಳು. ಈ ವಚನಗಳು ಹಾಲು ಇದ್ದ ಹಾಗೆ ಎಲ್ಲ ವರ್ಗದ, ಎಲ್ಲ ಅಂತಸ್ತಿನ ಜನರಿಗೆ ದಕ್ಕುವ ಪುಷ್ಟಿ ನೀಡುವ ಭಾವಗೀತೆಗಳು. ಆದರೆ ಈ ಹಾಲಿನಂತಹ ವಚನಗಳಿಗೆ ರಾಗ-ತಾಳ-ಛಂದಗಳಂತಹ ಕಲ್ಲುಸಕ್ಕರೆ, ಕೇಸರಿ, ಜೇನು

೧. ಶಿವದಾಸ ಗೀತಾಂಜಲಿ ಎಲ್. ಬಸವರಾಜು, ಪುಟ ೭೯.

ಮುಂತಾದ ಸವಿಯಾದ, ಸಿಹಿಯಾದ, ಮಧುರವಾದ ವಸ್ತುಗಳ ಸಂಯೋಜನೆಯಿಂದ ವಚನಗಳು ಮತ್ತೂ ಸವಿಯಾಗಿ, ಮಧುರವಾಗಿ, ಆಪ್ಯಾಯಮಾನವಾಗಿ "ಸ್ವರವಚನ" ಗಳಾದುವು. ಒಂದು ರೀತಿಯಲ್ಲಿ ಭಾಷೆ-ಭಾವಗಳ ವಿದ್ಯುದಾಲಿಂಗನವಾಯ್ತು. ಲಿಂಗದೀಕ್ಷೆಯಿಲ್ಲದೆ ಇದ್ದ ವಡ್ಡರಾಮ ಲಿಂಗದೀಕ್ಷೆಯಿಂದ ಶಿವಯೋಗಿ ಸಿದ್ಧರಾಮನಾದಂತೆ ಭಾಷೆ ಶಿವದೀಕ್ಷೆ ಪಡೆಯಿತು. ಮಾತು ಮಹಾಮಂತ್ರವಾಯಿತು ಈ ಸ್ವರವಚನಗಳ ರಚನೆಯಿಂದ.

ಗೇಯ ಪ್ರಕಾರದ ಸಾಹಿತ್ಯಸೃಷ್ಟಿಗೆ ಶರಣರು ಕಾರಣರಾದರು ಎಂಬುದು ಕರ್ನಾಟಕ ಗೇಯಸಾಹಿತ್ಯದ ಇತಿಹಾಸದಲ್ಲಿ ಮರೆಯಲಾಗದ ಮಾತು. ಶೃಂಗಾರಮಯವಾಗಿದ್ದ 'ಬೆದಂಡೆ'ಯಂತಹ ಹಾಡುಗಬ್ಬಗಳು ಶಿವಶರಣರಿಂದ ಅಂತರಂಗ ಶ್ರೀಮಂತಿಕೆಯನ್ನು ಉದ್ದೀಪನಗೊಳಿಸಿ ಶಿವತೆಯತ್ತಕೊಂಡೊಯ್ಯುವ ಸ್ವರವಚನಗಳಾದದ್ದು ಕನ್ನಡ ಸಾಹಿತ್ಯಕ್ಕೆ ಶರಣರಿತ್ತ ಅಭೂತಪೂರ್ವವಾದ ಕೊಡುಗೆ! ಹೀಗಾಗಿ ಹನ್ನೆರಡನೆಯ ಶತಮಾನ ಸ್ವರಸಾಹಿತ್ಯಸೃಷ್ಟಿಯ ಮೊದಲ ಹಂತವಾಗಿದೆ.

## ಮೈಸೂರು ಸೀಮೆಯಲ್ಲಿ

ಮೈಸೂರು ಸೀಮೆಯ ಚಿಲಕವಾಡಿಯ ಶಂಭುಲಿಂಗನ ಬೆಟ್ಟ, ಆದರ ಸನಿಹದ ಮುಪ್ಪಿನಷಡಕ್ಷರಿಗಳ ಪುಣ್ಯಭೂಮಿ, ಬೆಂಗಳೂರಿನ ಸರ್ಪಭೂಷಣಾರ್ಯರ ತಪೋಭೂಮಿಗಳು ಸ್ವರಸಾಹಿತ್ಯ ನಿರ್ಮಾತೃಗಳ ಆಡುಂಬೊಲವಾಗಿವೆ. ೧೭ನೆಯ ಶತಮಾನದ ನಿಜಗುಣ ಶಿವಯೋಗಿಗಳ ಆಜುಬಾಜಿನ ಕಾಲ ಕೈವಲ್ಯಸಾಹಿತ್ಯದ ಕಾಲ. ಕೈವಲ್ಯ ಸಾಹಿತ್ಯ ಸ್ವರವಚನ ಸಮ್ಮೇಳನದ ಸಾಹಿತ್ಯ. ನಿಜಗುಣರ 'ಕೈವಲ್ಯ ಪದ್ಧತಿ' ಜನಮನವನ್ನು ಸೂರೆಗೊಂಡ ಜನಪ್ರಿಯ ಸ್ವರಸಾಹಿತ್ಯಕೃತಿ. ಇಂದಿಗೂ ನಾಡಿನ ಮಠಮಾನ್ಯಗಳಲ್ಲಿ, ಸಭೆ ಸಮಾರಂಭಗಳಲ್ಲಿ, ಭಜನಾಮೇಳಗಳಲ್ಲಿ ಈ ಹಾಡುಗಳದೆ ಮೇಲುಗೈ. ನಿಜಗುಣರ ಗೀತೆಗಳು ಅವರೇ ಹೇಳುವಂತೆ "ಯೋಗಿ ನಿಜಾನಂದದೊಳು ನುಡಿಸುವ ವೀಣೆ। ರಾಗ ರಸದ ತರಂಗಿಣಿ ನೋಡು ರಮಣಿ।" ಎಂಬಂತೆ ಅವು ರಾಗ-ರಸಗಳ ತರಂಗಿಣಿಗಳಾಗಿವೆ.

ನಿಜಗುಣಶಿವಯೋಗಿಗಳ ಸಮಕಾಲೀನರಾಗಿದ್ದ ಮುಪ್ಪಿನ ಷಡಕ್ಷರರ ಹಾಡುಗಳ ಭಾವವೆಲ್ಲ ಅನುಭಾವ, ರಸವೆಲ್ಲ ಸಮರಸ, ರುಚಿ ಎಲ್ಲ ಶುಚಿ.[೨] ಸರಳ ಸುಂದರ ಶೈಲಿಯ ಇವರ ಹಾಡುಗಳ ಭಾವನಿರ್ಭರತೆ ಎಂತಹವರ ಹೃದಯವನ್ನಾದರೂ ಕಲಕುತ್ತದೆ.

ಕೃಷಿಯಲ್ಲಿ ಮೊದಲ ಬೆಳೆ ಯಾವಾಗಲೂ ಹುಲುಸಾಗೇ ಇರುತ್ತದೆ. ಇಳುವರಿಯೂ ಉತ್ತಮವಾಗಿರುತ್ತದೆ. ಆದರೆ ಮೊದಲ ಬೆಳೆಯ ನಂತರದ ಬೆಳೆ ಮತ್ತು ಬೆಲೆಗಳು ಅಷ್ಟಕ್ಕಷ್ಟೆ. ಕೂಳೆ ಬೆಳೆ-ಜೊಳ್ಳುಕಾಳು. ಅಂತೆಯೇ ನಿಜಗುಣಶಿವಯೋಗಿ ಮತ್ತು ಷಡಕ್ಷರಿಗಳ ತರುವಾಯದ ಸ್ವರಸಾಹಿತ್ಯ ಸತ್ವದಲ್ಲಿ ಜೊಳ್ಳು ಹೆಚ್ಚು. ಹೇಗೆ ದೊಡ್ಡದಾಗಿ ಬೆಳೆದ ಮರದ

೨. ಸುಬೋಧಸಾರ ಮುನ್ನುಡಿ.

ತಳಭಾಗದಲ್ಲಿ ಮತ್ತೇನೂ ಬೆಳೆಯುವುದಿಲ್ಲವೊ ಹಾಗೆ ಈ ಹಳೆಯ ಮೈಸೂರು ಪ್ರಾಂತ್ಯದಲ್ಲಿನ ಸ್ವರವಚನಸಾಹಿತ್ಯ ಈ ಇಬ್ಬರ ತರುವಾಯ ಕನ್ನಡಗೀತಾ ಸಾಹಿತ್ಯಾಕಾಶದಲ್ಲಿ ಹಗಲಿನ ನಕ್ಷತ್ರದಂತೆ ಮಂಕಾದುವು ಎಂದು ಭಾಸವಾಗುತ್ತದೆ.

ಮೈಸೂರು ಕರ್ನಾಟಕದ ಈ ಭಾಗದಲ್ಲಿ ಹದಿನೇಳನೇ ಶತಮಾನದ ತರುವಾಯ ಸ್ವರವಚನಗಳ ಸೃಷ್ಟಿಗಿಂತಲೂ ತಮ್ಮ ಹಿಂದಿನ ಸ್ವರಗೀತಾಕಾರರ ಹಾಡುಗಳನ್ನು ಆತ್ಮಾನಂದಪರವಶರಾಗಿ ಹಾಡುವವರ ಸಂಖ್ಯೆ ಹೆಚ್ಚಾಗಿ ಬೆಳೆದುದನ್ನು ನಾವು ಗಮನಿಸಬಹುದು. ಇದು ಒಂದು ರೀತಿಯಲ್ಲಿ ಶುಭಸೂಚನೆಯೇ ಸರಿ. ಈ ಹಿಂದಿನ ಸ್ವರವಚನಗಳ ರಸಮಾಧುರ್ಯ, ಭಾವಬೆಡಗುಗಳು ನಾಡಿನ ಮಠಮಾನ್ಯ, ದೇವಾಲಯ ಮತ್ತಿತರ ಗೋಷ್ಠಿಗಳಲ್ಲಿ ಕಂಪುಸೂಸುವಂತೆ ಮತ್ತು ನಿಜಗುಣಾದಿ ಸ್ವರವಚನಕಾರರನ್ನು ಮತ್ತು ಈ ಹಿಂದಿನ ಬಸವಾದಿಶರಣರನ್ನು ಸಾಮಾನ್ಯ ಜನರ ಮನೋಭೂಮಿಕೆಯಲ್ಲಿ ಜೀವಂತವಾಗುಳಿಸುವಂತೆ ಮಾಡಿದವರು ಈ ಹಾಡುಗಾರರು. ಸ್ವರವಚನಗಳು ಪುಸ್ತಕಗಳಲ್ಲಿ ಓದುವುದಕ್ಕಲ್ಲ; ಹಾಡುಗಾರರಿಂದ ಕೇಳುವುದಕ್ಕೆ. ಈ ಸಾಹಿತ್ಯ ವಿಮರ್ಶಕನಿಗಲ್ಲ: ಕೇಳುಗನಿಗೆ ಮಾತ್ರ. ಸ್ವರವಚನಗಳನ್ನು ಹಾಡುವುದರಿಂದ, ಕೇಳುವುದರಿಂದ ಲಭ್ಯವಾಗುವ ಸುಖವನ್ನು ಸ್ವರವಚನವೊಂದರಿಂದಲೆ ಕೇಳಬಹುದು.

ಭಜನೆ ಬ್ರಹ್ಮಾನಂದ। ರಸವೋ ಸೋಹಂ॥
ಭಜನೆ ಬ್ರಹ್ಮಾನಂದ। ಸುಖವೊ॥ ಪಲ್ಲವಿ॥
. . . . . . . . . . . . . . . . .
ಅಜ ಸುರೇಂದ್ರ। ಮುನೀಂದ್ರ ।ಸೇವ್ಯನ
ಭಜನ ಭರಿತನ ।ಭವ್ಯ ಶಿವನಾ। ಭಜನೆ[೩]

ಸ್ವರಗೀತೆಗೆ ಪರ್ಯಾಯವಾಗಿ ಬಳಕೆಯಲ್ಲಿ ಈ ಭಜನೆ ಬ್ರಹ್ಮಾನಂದ ಸುಖವನ್ನು ನೀಡುವ ಅತ್ಯುತ್ತಮ ಸಾಧನ. ಭಜನೆಯ ಮಹತಿಯ ಬಗ್ಗೆ ಮಗದೊಂದು ಗೀತೆ ಹೀಗಿದೆ:

ಶಿವಭಜನೆ ಮಾಡೋ ।ಶಿವಶರಣರ ಕೊಂಡಾಡೋ
ಭವದ ಮಾಲೆ ಕೀಳೋ। ಅಭವನ ಸ್ಮರಣೆಯ ಮರಿಬ್ಯಾಡೋ[೪]

ಭವದ ಬೇರನ್ನು ಕಿತ್ತು ಲಿಂಗಾಂಗಸಾಮರಸ್ಯವನ್ನು ಸಾಧಿಸಲು ಶಿವನ ಹಾಗೂ ಶಿವಶರಣರ ಭಜನೆ ಅತ್ಯಂತ ಸುಲಭದ ಮಾರ್ಗವಾಗಿದೆ.

ಮತ್ತೊಬ್ಬ ಸ್ವರವಚನಕಾರನ ಉಕ್ತಿ ಹೀಗಿದೆ:

ಮಾಡಬೇಕೆಲೊ ।ಭಜನೆ ।ಮಾಡಬೇಕೆಲೊ
ಮಾಡಬೇಕು ಭಜನೆಯನ್ನು ।ಕೂಡಬೇಕು ಶರಣರನ್ನು

---

೩. ಶ್ರೀ ಮಹಲಿಂಗರ ಸ್ವರವಚನ.
೪. ಈ ಗೀತೆಯ ಕರ್ತೃ ತಿಳಿಯದು.

. . . . . . . . . . .
ನಾದ ಬಿಂದು ಸಂಧಾನಗಳ ।ಸಾಧಿಸುವ ಸಂಜ್ಞೆವೆರಸಿ
ಮೇದಿನಿಯೊಳಷ್ಟಾಂಗ ಸ್ವರದಿ। ಬೋಧೆಯಾಗುವಂತೆ ನುಡಿಸಿ
. . . . . . . . . . . .
ಚಿಂತೆ ಹರಿಪ ಸ್ವಾಂತಸುಖವ । ನಾಂತು ಮಧುಪುರೇಶನಂಘ್ರಿ
ಯಂತರದೊಳು ಧ್ಯಾನಿಪ। ಗುಣವಾಂತು ಮುಕ್ತಿಪಡೆವ ಭಜನೆ . . . [೫]

ಹೀಗೆ ಚಿಂತೆಹರಿಸಿ, ಸ್ವಾಂತ ಸುಖವನ್ನು ನೀಡಬಲ್ಲ ಇಂತಹ ಸ್ವರವಚನಗಳನ್ನು ಹಾಡುತ್ತಾ ಹಾಡುತ್ತಾ ಕುಣಿಯುವ ಪರಿಪಾಠ ಇಂದಿಗೂ ಇದೆ. ಏಕನಾದ, ಚಿಟುಕುದಾಳ, ದಮ್ಮಡಿ, ತಾಳ ಇತ್ಯಾದಿ ಸಾಂಪ್ರದಾಯಿಕ ಸಂಗೀತೋಪಕರಣಗಳನ್ನು ಹಿಡಿದು ಭಾವಪರವಶರಾಗಿ, ಅರ್ಥಪೂರ್ಣವಾಗಿ ಕುಣಿಯುವ ಭಕ್ತರ ಉನ್ಮಾದ ಸ್ವರಸಾಹಿತ್ಯ ಹಾಕುವ ಮೋಡಿಗೆ ಹಿಡಿದ ಕನ್ನಡಿಯಾಗಿದೆ.

## ಸ್ವರವಚನ ಸಂವಾಹಕರು

ನಾಡಿನ ಮನೆಮನೆಗೂ ಹೋಗಿ ಸ್ವರಗೀತೆಗಳನ್ನು ಅರ್ಥಾತ್ ತತ್ವಪದಗಳನ್ನು ಹಾಡುವ ಕಾಯಕನಿರತ ಜಂಗಮರು ಶತಶತಮಾನಗಳಿಂದಲೂ ಇದ್ದರು. ಅನೇಕ ಜಂಗಮರು ಭಿಕ್ಷಾಕಾಯಕ ನಿರತರಾಗಿ ಏಕನಾದ, ತಂಬೂರಿ, ತಾಳ, ದಮ್ಮಡಿಗಳನ್ನು ಹಿಡಿದುಕೊಂಡು ಸ್ವರವಚನಗಳನ್ನು ಹಾಡುತ್ತ ಜನಮನದ ಕಾಳಿಕೆಯನ್ನು ನೀಗಿಸಿ ತತ್ವಪರರಾಗುವಂತೆ ಮಾಡುತ್ತಿದ್ದರು. ಇವರ ಹಾಡು ಪದಗಳಲ್ಲಿ ನೀತಿ ಇದೆ, ವ್ಯಂಗ್ಯವಿದೆ, ಬೆಡಗಿದೆ, ಸ್ತುತಿ ಇದೆ, ಆತ್ಮ ನಿವೇದನೆ ಇದೆ, ವೈರಾಗ್ಯವಿದೆ, ಶಿವಯೋಗ ಸಾಮ್ರಾಜ್ಯವಿದೆ, ಲಾಲಿತ್ಯವಿದೆ, ಮೊನಚಿದೆ, ಲಯಬದ್ಧತೆ ಇದೆ, ನಾಟ್ಯವಿದೆ, ಮೋಹಕತೆ ಭಾವಬಂಧುರತೆಗಳಿವೆ. ಇಂದಿಗೂ ಇಂತಹ ಹಾಡುಗಳನ್ನು ಹಾಡುವ ವೃತ್ತಿಯನ್ನವಲಂಬಿಸಿರುವ ನೂರಾರು ಮಂದಿ ಜಂಗಮರಿದ್ದಾರೆ. ಶಿವಭಕ್ತರಿದ್ದಾರೆ. ಇಂತಹ ಜಂಗಮರ, ಭಕ್ತರ ಬಾಯುಲ್ಲಿ ಸ್ವರವಚನ ಉಳಿದು ಅದು ಮುಂದಿನ ಪೀಳಿಗೆಗೂ ಪ್ರಸಾರವಾಗುತ್ತಿದೆ. ಪರಂಪರೆಯಿಂದಲೂ ಈ ಮೌಖಿಕ ಸ್ವರಸಾಹಿತ್ಯವನ್ನು ಉಳಿಸಿ ಬೆಳಸಿಕೊಂಡು ಬರುತ್ತಿರುವ ಇವರೇ ಸ್ವರಸಾಹಿತ್ಯಸಂವಾಹಕರು. ಇವರನ್ನು ಬಳಸಿಕೊಳ್ಳದೆ ಎಷ್ಟೋ ಸ್ವರವಚನ ಇವರ ಜೊತೆಯಲ್ಲೇ ಲಿಂಗವಾಗಿದೆ. ನನಗೆ ತಿಳಿದ ಮಟ್ಟಿಗೆ ನಂಜನಗೂಡು ತಾಲ್ಲೂಕಿನ ಕೋಣನೂರು ಗ್ರಾಮದ ಸ್ವಾಮಿಗಳೊಬ್ಬರು, ದೇವನೂರು ಮಠದ ಮೈಸೂರು ನಗರದಲ್ಲಿರುವ ಮಹದೇವಸ್ವಾಮಿಗಳೆಂಬುವರು, ಬದನಗುಪ್ಪೆ ಗ್ರಾಮದ (ಚಾಮರಾಜನಗರ ತಾಲ್ಲೂಕು) ಸುಬ್ಬಮ್ಮ ಎಂಬುವರು ನೂರಾರು ಸ್ವರವಚನಗಳನ್ನು ಹಾಡುತ್ತಿದ್ದರು. ಇಂತಹ ವೃತ್ತಿಗಾಯಕರನ್ನು ಬಳಸಿಕೊಳ್ಳದೆ ನೂರಾರು ಸ್ವರವಚನಗಳು ಅವರ ಜೊತೆಯಲ್ಲಿಯೇ

೫. ಮಧುವಿನಹಳ್ಳಿ ನಂಜುಂಡಶಾಸ್ತ್ರಿಗಳ ರಚನೆ.

ಲಿಂಗವಾಗಿಹೋಗಿವೆ. ಈಗ ನಮಗೇನಾದರೂ ಸ್ವರವಚನಗಳು ಅಲ್ಪ ಸ್ವಲ್ಪ ಲಭ್ಯವಿದ್ದರೆ ಅವು ಕೋಳೂರಲಿಂಗ ನುಂಗಿಕೊಂಡು ಅಲ್ಪಸ್ವಲ್ಪ ಬಿಟ್ಟಿರುವ ಜುಟ್ಟುಮಾತ್ರ.

## ಮೈಸೂರು ಸೀಮೆಯ ಕೆಲವು ಸ್ವರವಚನಕಾರರು

ನಿಜಗುಣಶಿವಯೋಗಿ, ಮುಪ್ಪಿನ ಷಡಕ್ಷರಿ, ಸರ್ಪಣ್ಣ, ಬಾಲಲೀಲಾಮಹಂತರು ಮೊದಲಾದವರ ತರುವಾಯ ಸ್ವರವಚನಗಳನ್ನು ರಚಿಸುವವರ ಸಂಖ್ಯೆಗಿಂತಲೂ ಇವುಗಳನ್ನು ಹಾಡುವವರ ಸಂಖ್ಯೆ ಹೆಚ್ಚಾಗಿತ್ತು ಮತ್ತು ಹಾಡುಗಾರಿಕೆಗೆ ಹೆಚ್ಚು ಒತ್ತುಕೊಟ್ಟರು ಎಂಬುದೇ ನನ್ನ ಈವರೆಗಿನ ಅಭಿಪ್ರಾಯ. ಇಷ್ಟಾದರೂ ಕೆಲವು ಮಂದಿ ತಮ್ಮ ಹಿಂದಿನ ಸ್ವರಸಾಹಿತಿಗಳನ್ನು ಅನುಕರಿಸಿ ಸ್ವರವಚನ ರಚನಾಕಾರ್ಯದಲ್ಲಿ ತೊಡಗಿದ್ದು ಕಂಡು ಬರುತ್ತದೆ. ಹೀಗೆ ಬರೆದವರೆಲ್ಲರೂ ನಿಜಗುಣಾದಿಗಳ ಮಟ್ಟಕ್ಕೆ ಏರದಿದ್ದರೂ ಸ್ವರಸಾಹಿತ್ಯ ಬೀಳು ಬೀಳದ ಹಾಗೆ ಮಾಡಿದ ಕೀರ್ತಿಗೆ ಇವರು ಭಾಜನರಾಗಿದ್ದಾರೆ. ಇವರ ಈ ಪ್ರಯತ್ನ ಸ್ವರಸಾಹಿತ್ಯವಾಹಿನಿ ಇಲ್ಲಿಯ ತನಕವೂ ಹರಿಯಲು ಸಾಧ್ಯವಾಗುವಂತಾಗಿದೆ. ಇಂದಿಗೂ ಹೊಸ ಹೊಸ ಸ್ವರಪದ ರಚನೆಯಾಗುತ್ತಿವೆ. ಆದರೆ ಈ ಹೊಸ ರಚನೆಗಳಲ್ಲಿ ಸಿನಿಮಾ ಮಾಧ್ಯಮದ ಪ್ರಭಾವ ಸ್ಪಷ್ಟವಾಗಿ ಗೋಚರವಾಗುತ್ತದೆ.

ಸುಮಾರು ನೂರು ವರ್ಷಗಳಿಂದೀಚೆಗೆ ಈ ಪ್ರಾಂತ್ಯದಲ್ಲಿ ಅನೇಕರು ಸ್ವರವಚನಗಳನ್ನು ರಚಿಸಿದ್ದಾರೆ. ಅವರಲ್ಲಿ ಪ್ರಸ್ತುತ ಲೇಖಕನ ಗಮನಕ್ಕೆ ಬಂದಿರುವ ಕೆಲವರ ಪರಿಚಯ ಮಾಡಲು ಪ್ರಯತ್ನಿಸಿದ್ದೇನೆ. ಅವರುಗಳೆಂದರೆ-

ಸಿಂಹಶಿರೋಮಣಿ ಶಿವಕಥಾಪಂಡಿತ ತಾಯೂರು ಶಿವಯ್ಯಶಾಸ್ತ್ರಿ, ಮಧುವಿನ ಹಳ್ಳಿ ನಂಜುಂಡಶಾಸ್ತ್ರಿ, ಮೈಸೂರು ನಾಟಕದ ಸಂಗಪ್ಪ, ಮೈಸೂರು ಸಂಗೀತದ ರಾಚೋಟಪ್ಪ, ಮೈಸೂರು ಅರಮನೆ ಗುರಿಕಾರ್ ಮಾದಪ್ಪ, ದೇವಲಾಪುರದ ನಂಜುಂಡ, ಮೂಗೂರು ನಾಟಕದ ಸುಬ್ಬಣ್ಣ, ಕೊಳ್ಳೇಗಾಲದ ಹೊಂಡರಬಾಳಿನ ಅರಸು, ಶಾಲ್ಯದ ಕೃಷ್ಣರಾಜೇ ಅರಸು, ಬೆಳ್ಳಾವೆ ರುದ್ರಶಾಸ್ತ್ರಿ, ಪಂಡಿತ ಕರಿಬಸವಶಾಸ್ತ್ರಿ, ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿ, ದೇವನೂರುಮಠದ ಬಸವಣ್ಣ ಸ್ವಾಮಿಗಳು, ಕೊಳ್ಳೇಗಾಲ ತಾಲ್ಲೂಕು ದೊಡ್ಡಿಂದುವಾಡಿ ಮಾಸ್ಟರ್ ಪುಟ್ಟಮಲ್ಲಪ್ಪ, ಹೆಜ್ಜಿಗೆ ಎಂ. ಲಿಂಗಣ್ಣ, ಕವಿಲಿಂಗ(?) ಹಾಗೂ ಕುಮಾರ ನಿಜಗುಣನಾಮಧೇಯದ ಪಿ. ಬಸವಣ್ಣ ಇನ್ನೂ ಮುಂತಾದವರು.

ಹೆಸರು ವಿಳಾಸ ಗೊತ್ತಿಲ್ಲದ ಅಥವಾ ಅಸ್ಪಷ್ಟವಾಗಿರುವ ಕೆಲವು ಸ್ವರವಚನಕಾರರನ್ನು ಅವರ ಸ್ವರಗೀತೆಗಳ ಅಂಕಿತಗಳಿಂದ ಗುರುತಿಸಬಹುದು. ನಿದರ್ಶನಕ್ಕೆ 'ಮಾರನಪುರ' ಎಂಬ ಅಂಕಿತದಲ್ಲಿ ಕೆಲವು ತತ್ವಪದಗಳು ದೊರಕುತ್ತವೆ. ಮಧುವಿನಹಳ್ಳಿಯನ್ನು ಮಾರನಪುರ, ಎಂದು ಕರೆದಿರುವ ಸಂಭವವಿದ್ದರೆ ಈ ಅಂಕಿತದವನು ಮಧುವಿನಹಳ್ಳಿ ನಂಜುಂಡಶಾಸ್ತ್ರಿ ಇರಬೇಕು ಎಂದು ಊಹಿಸಬಹುದು.

ಕರಿಬಸವ, ಕೆರೆಬಸವ, ತುರುವೆಕೆರೆಬಸವ ಎಂಬ ಅಂಕಿತವಿರುವ ಹಾಡುಗಳು ಅಲ್ಲಲ್ಲಿ ಕೇಳಿಬರುತ್ತವೆ. ಈ ಮೂರೂ ಹೆಸರು ಒಬ್ಬನದೆ ಇರಬೇಕೆ? ಅಥವಾ ನಿಜಗುಣ

ಶಿವಯೋಗಿಯ ಶಿಷ್ಯನೊಬ್ಬ ನೀಲವೃಷಭನೆಂಬುವನೊಬ್ಬನಿದ್ದನೆಂದು ಹೇಳುವ ಮಾತಿನ ಆಧಾರದ ಮೇಲೆ ಈ ನೀಲವೃಷಭನೆ ಕರಿಬಸವನೆಂಬ ಹೆಸರಿನಲ್ಲಿ ರಚಿಸಿದ್ದಾನೆಯೋ ತಿಳಿಯದು.

'ವರಗಂಗಾಧರೇಶ್ವರ' ಎಂಬ ಅಂಕಿತದ ಹಾಡುಗಳು ಕೆಲವು ಲಭ್ಯವಿವೆ. ಪ್ರಾಯಶಃ ಗುಂಡ್ಲುಪೇಟೆ ತಾಲ್ಲೂಕಿನ ಸೋಮಹಳ್ಳಿ ಮಠದ ಮೂಲ ಗುರುಗಳಾದ ಗಂಗಾಧರೇಶ್ವರರ ನೆನಪಿನಲ್ಲಿ ಈ ಹಾಡುಗಳನ್ನು ರಚಿಸಿರಬೇಕು.

"ಧರೆಗೆ ದಕ್ಷಿಣಕಾಶಿ। ವಾಸ ನಮ್ಮ ವರ ಗುರು। ನಾಗಲಿಂಗೇಶನ ಅರಿವಿನಿಂದಲಿ ನಂಬಿ. . . " ಎಂಬ ಈ ಅಂತ್ಯಚರಣ "ದುಗ್ಗಾಣಿ ಬಲುಕೆಟ್ಟದಣ್ಣ . . . " ಎಂಬ ಸ್ವರಗೀತೆಗೆ ಸೇರಿದುದು. ಕರಸ್ಥಲದ ನಾಗಲಿಂಗನ ಹೆಸರಿನಲ್ಲಿ ಇವನ ಶಿಷ್ಯನೊಬ್ಬ ಇಂತಹ ರಚನೆಯನ್ನು ಮಾಡಿರಬೇಕು.

ಹಾಗೆಯೇ ಹರಿಹರಪುರವಾಸ ಶಾಂತಮಲ್ಲೇಶ, ಕೂಡಲೂರೇಶ, ಚೆಲ್ವಾಳಾಧೀಶ, ಸಿದ್ಧಲಿಂಗ, ಚಂಡಗಳ್ಳಿ ಗುರುಮಲ್ಲೇಶ, ಕಾವಿಬಸವೇಶ ಎಂಬಿತ್ಯಾದಿ ಅಂಕಿತಗಳನ್ನುಳ್ಳ ಬಿಡಿವಚನಗಳೂ ಅಲ್ಲಲ್ಲಿವೆ. 'ಅಡವೀಶ್ವರ' ಎಂಬ ಹೆಸರಿನಲ್ಲಿರುವ "ಭಜಿಸು ಗುರುವರನಾ. . ." ಎಂಬ ಹಾಡು ಲಭ್ಯವಿದೆ. ಇದು ಗುಂಡ್ಲುಪೇಟೆ ತಾಲ್ಲೂಕು ಪಡುಗೂರು ಶ್ರೀ ಅಡವಿ ಮಠದ ಮೂಲಶರಣ ಮದ್ದಾನೇಶ್ವರನನ್ನು ಕುರಿತದ್ದಿರಬೇಕು. ಹೀಗೆ ಈ ಮೇಲಿನ ಮಾತುಗಳು ಬರೆ ಅಂಬೋಣವೆ ಹೊರತು ಇದೇ ನಿರ್ಣಾಯಕವಲ್ಲ.

ಹೆಸರು, ಅಂಕಿತ ಇತ್ಯಾದಿ ಯಾವುದೂ ಇಲ್ಲದ ಬರೇ ಬೋಳು ಬೋಳಾದ ಸ್ವರಗೀತೆಗಳೂ ದೊರಕುತ್ತವೆ. ಈ ಹಾಡುಗಳು ಹೆಚ್ಚು ಪ್ರಚಾರದಲ್ಲಿರುವ ಪ್ರದೇಶದ ಆಧಾರಗಳ ಮೇಲೇನಾದರೂ ಪತ್ತೆಹಚ್ಚಬಹುದೇನೊ.

## ಪರಿಚಯ

ಸಿಂಹಶಿರೋಮಣಿ, ಆಶುಕವಿತಾಪ್ರವೀಣರೆನಿಸಿದ್ದ ಶಿವಯ್ಯಶಾಸ್ತ್ರಿಗಳು ಮೈಸೂರು ಜಿಲ್ಲೆಯ ತಾಯೂರು ಗ್ರಾಮದವರು. ದೇವನೂರು ಶ್ರೀ ಗುರುಮಲ್ಲೇಶ್ವರರ ಕರಸಂಜಾತರಾಗಿದ್ದ ಇವರು ತಮ್ಮ ಗುರುಗಳನ್ನು ಮತ್ತು ಆ ಪರಂಪರೆಯವರನ್ನು ಕುರಿತು ಅನೇಕ ಹಾಡುಗಳನ್ನು ರಚಿಸಿದ್ದಾರೆ. ಆಳಿದ ಮುಮ್ಮಡಿ ಕೃಷ್ಣರಾಜ ಒಡೆಯರವರಿಂದ ಸಿಂಹ ಶಿರೋಮಣಿ, ಆಶುಕವಿತಾಪ್ರವೀಣರೆಂದು ಸನ್ಮಾನಿತರಾಗಿದ್ದ ಇವರು ಸಿದ್ಧಗಂಗಾಮಠದಲ್ಲೂ ಅನೇಕ ವರ್ಷಗಳು ಇದ್ದರು. ಆಗಿನ ಸಿದ್ಧಗಂಗಾ ಮಠಾಧೀಶರಾದ ಶ್ರೀ ಅಟವೀ ಸ್ವಾಮಿಗಳವರನ್ನು ಮತ್ತು ಆ ಕ್ಷೇತ್ರದ ಶರಣರನ್ನು ಕುರಿತು ಹಲವಾರು ಹಾಡುಗಳನ್ನು ರಚಿಸಿದ್ದರಂತೆ. ಶಿವಯ್ಯ(ಶಿವಕವಿ) ಶಾಸ್ತ್ರಿಗಳು 'ಶ್ರೀ ಶಿವಭಜನಾಮೂಲ' ಎಂಬ ಕೃತಿಯನ್ನು ರಚಿಸಿದ್ದರು. ಇದು ಈಗ ಲಭ್ಯವಿಲ್ಲ. ಈ ಕೃತಿ ದೊರಕಿದರೆ ಭಜನಾ ಮೂಲದ ಬಗ್ಗೆ ಬೆಳಕು ಚೆಲ್ಲಬಹುದು. ಅಲ್ಲದೆ ಇವರ ಸ್ವರಗೀತೆಗಳೂ ಆ ಕೃತಿಯಲ್ಲಿ ದೊರಕಬಹುದು. ಇವರ ಮತ್ತೊಂದು ಲಭ್ಯವಿಲ್ಲದ ಕೃತಿ 'ಬಸವಭಾರತ'. ಪ್ರಾಯಶಃ ಬಸವಾದಿ ಶರಣರುಗಳ ಜೀವನ

ಚಿತ್ರಣ ಸ್ವರಗೀತೋಪಾದಿಯಲ್ಲಿ ರಚಿತವಾಗಿರುವಂತೆ ಕಾಣುತ್ತದೆ. ಗಾತ್ರದಲ್ಲಿ ಮಹಾಭಾರತದ ಹಾಗೆ ದೊಡ್ಡದಿರಬಹುದಾದ್ದರಿಂದಲೇ ಇದನ್ನು ಬಸವಭಾರತ ಎಂದು ಹೆಸರಿಸಿರಬೇಕು. ಈ ಕೃತಿ ದೊರೆತರೆ ಸ್ವರಸಾಹಿತ್ಯದ ಒಂದು ಮಹಾಕಾವ್ಯ ಇದಾಗಬಹುದು. ಮೈಸೂರು ಜಿಲ್ಲೆಯ ಎಲ್ಲಾ ಮಠಗಳಲ್ಲೂ, ಎಲ್ಲಾ ಭಜನಾ ಮಂಡಲಿಗಳಲ್ಲಿಯೂ ಸ್ವರವಚನಗಳ ಹಾಡುಗಾರರು ಶಿವಯ್ಯಶಾಸ್ತ್ರಿಗಳ ಹಾಡನ್ನು ಹಾಡದೇ ಇರುವ ಸಂದರ್ಭಗಳು ಕಮ್ಮಿ. ಇವರ ಹಾಡುಗಳಲ್ಲಿ ಭಕ್ತಿಯೇ ಪ್ರಧಾನ. ಇವರ ಗುರುಭಕ್ತಿ ಅನನ್ಯ ಮತ್ತು ಅನುಪಮವಾದುದು.

ಈಗ ಇವರ ಕೆಲವೇ ಕೆಲವು ಹಾಡುಗಳು ಮಾತ್ರ ಜನರ ಬಾಯಲ್ಲಿ ಉಳಿದಿವೆ. ಕೆಲವರು ಈ ಹಾಡುಗಳನ್ನು ತಮ್ಮ ತಮ್ಮ ಹಸ್ತಪ್ರತಿಗಳಲ್ಲಿ ನೆನಪಿಗೆಂದು ಗುರುತುಮಾಡಿಕೊಂಡಿದ್ದರೆ ಮತ್ತೆ ಕೆಲವರು ಬಿಡಿ ಬಿಡಿಯಾಗಿ ಈ ಹಾಡುಗಳನ್ನು ಮುದ್ರಿಸಿಕೊಂಡಿರುವುದುಂಟು. ಇವರ ಹಾಡುಗಳನ್ನು ಸಮಗ್ರವಾಗಿ, ಶಾಸ್ತ್ರೀಯವಾಗಿ ಪ್ರಕಟಿಸುವ ಕಾರ್ಯ ಆಗಬೇಕಾಗಿದೆ. ಇವರ ೧೭ ಹಾಡುಗಳು ಲೇಖಕನಿಂದ ಪರಿಷ್ಕರಣಗೊಂಡಿವೆ.

ನಂಜುಂಡಶಾಸ್ತ್ರಿ ಎಂಬುವರು ಮೈಸೂರು ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನ ಮಧುವಿನ ಹಳ್ಳಿಯವರು. ಬ್ರಾಹ್ಮಣ ಧರ್ಮೀಯರಾದ ಇವರು ಶರಣಪಥಕ್ಕೆ ಮಾರು ಹೋಗಿ ದೇವನೂರು ಶ್ರೀ ಗುರುಮಲ್ಲೇಶ್ವರರಿಂದ ಅನುಗ್ರಹೀತರಾದರು. ಇವರು ತಮ್ಮ ಗುರುಗಳನ್ನು ಮುದ್ದಾದ ಮಗುವಿಗೆ ಹೋಲಿಸಿಕೊಂಡು ತೋಳುಪದ, ಲಾಲಿಪದಗಳನ್ನು ರಚಿಸಿದ್ದಾರೆ. ಇವರು ಬಹಳಷ್ಟು ಹಾಡುಗಳನ್ನು ರಚಿಸಿರಬೇಕು. ಆದರೆ ಬೆರಳೆಣಿಕೆಯಷ್ಟು ಮಾತ್ರ ಈಗ ಲಭ್ಯವಿವೆ. ಇವರ ಅಂಕಿತ 'ಮಧುಪುರೇಶ' ಎಂದಿದೆ. ಜನಮನವನ್ನು ರಂಜಿಸಿದ ಇವರ ಹಾಡುಗಳಲ್ಲಿ ಅತ್ಯಂತ ಜನಪ್ರಿಯವಾದ ಈ ಹಾಡನ್ನು ನೋಡಿ -

"ಓಂ ಹಂ ನಿಲ್ಲಿಸು ಕಾಯದ ಮಧ್ಯದಿ
ಸೋಹಂ ಸಿದ್ಧಿಯ ಪ್ರಣಮವಿದೆ
ಆಹಾ! ಆಹಾ! ಸಾಮ ಧ್ವನಿಯೊಳು
ಆಉಮಾಕ್ಷರಗಳು ನುಡಿಯುತಿದೆ . . . "

ಹೀಗೆ ಶಿವಷಡಕ್ಷರಮಂತ್ರವನ್ನು ಕುರಿತ ಹಾಡು ಮುಂದುವರಿದಿದೆ.

ಮುಮ್ಮಡಿ ಕೃಷ್ಣರಾಜ ಒಡೆಯರವರ ಆಸ್ಥಾನದಲ್ಲಿ ಗುಣಿಕಾರರಾಗಿದ್ದ ಮಾದಪ್ಪನವರು ಮತ್ತು ಮೈಸೂರು ತಾಲ್ಲೂಕು ದೇವಲಾಪುರ ನಂಜುಂಡ ಕವಿಗಳು ರಚಿಸಿದರೆನ್ನಲಾದ ಕೆಲವು ಹಾಡುಗಳು ದೊರಕುತ್ತವೆ. "ನಿರುತ ನೆನೆವೆ ಗುರುವಿನಂಘ್ರಿ। ಕಮಲಗಳ . . . ." ಎಂಬ ಹಾಡು ಮಾದಪ್ಪನವರ ರಚನೆಯಾದರೆ "ಸ್ತುತಿಸಿ ಬಾಳ್ವೆನು ಪ್ರಮಥರೆಲ್ಲರ। ಪೃಥ್ವಿಯೊಳಗತಿ ಮೆರೆದರು. . . ." ಎಂಬ ಹಾಡು ದೇವಲಾಪುರದ ನಂಜುಂಡನದು ಎನ್ನುವರು. ಈ ಹಾಡು ನಂಜುಂಡನದೊ ಯಾರದೊ ಆಗಿರಲಿ ಆದರೆ,

ಶಿವಪೂಜಾವೇಳೆಯಲ್ಲಿ ಈ ಹಾಡು ಎಲ್ಲರ ಬಾಯಲ್ಲೂ ಕೇಳಿಬರುತ್ತದೆ. ಅಷ್ಟು ಜನಪ್ರಿಯ ಸ್ವರಗೀತೆ ಇದು.

ಬೆಳ್ಳಾವೆ ನರಹರಿಶಾಸ್ತ್ರಿ, ರುದ್ರಶಾಸ್ತ್ರಿ ಮತ್ತು ಪಂಡಿತ ಕರಿಬಸವಶಾಸ್ತ್ರಿಗಳು ಕೂಡಿ ಸ್ವರವಚನಗಳನ್ನು ಬರೆದು ಪರಸ್ಪರ ಪರಿಷ್ಕರಣೆಗೊಳಪಡಿಸಿಕೊಳ್ಳುತ್ತಿದ್ದಿರಬೇಕು. ಆದರೆ ಒಂದು ಹಾಡು ರುದ್ರಶಾಸ್ತ್ರಿಗಳದು ಲಭ್ಯವಿದೆ, ಉಳಿದವರದು ಎನ್ನುವ ಹಾಡುಗಳು ಸಿಗುತ್ತಿಲ್ಲ.

ಪಶಾಲ್ಯ ಗ್ರಾಮದ ಕೃಷ್ಣರಾಜ ಅರಸಿನವರು ನೂರುವರ್ಷದ ಹಿಂದಿನವರು. ಅರಸುಗಳಾದರೂ ಶರಣಧರ್ಮಕ್ಕೆ, ಶಿವಪಥಕ್ಕೆ ತಮ್ಮನ್ನು ಒಡ್ಡಿಕೊಂಡವರು. ೧೮೮೫ರಲ್ಲಿ ಇವರ 'ಭಕ್ತಿಮಾರ್ಗಸರೋವರ' ಮತ್ತು 'ಜ್ಞಾನಮಾರ್ಗಸರೋವರ, ಎಂಬ ಕೃತಿ ಪ್ರಕಟವಾಗಿವೆ. ಇವು ಶಾಲ್ಯದ ಅರಸಿನವರ ಸ್ವರವಚನ ಕೃತಿಗಳು. ಇವರ ಹಾಡಿನಲ್ಲಿ ಶರಣಸತಿ ಲಿಂಗಪತಿಭಾವ ವ್ಯಕ್ತವಾಗಿರುವುದುಂಟು. ಇವರು ಯಳಂದೂರಿನ ಗೌರೀಶಂಕರನ ಭಕ್ತರಿರಬೇಕು ಎಂದು ಕಾಣುತ್ತದೆ. ಇವರದು ಎಂದು ಹೇಳುವ ಈ ಹಾಡನ್ನು ಓದಿ-

"ಏನೆ ನಾಯಕಿ। ಎನ್ನಮೇಲಣ। ಕರುಣ ನಿನಗಿನಿತಿಲ್ಲವೆ"

ಎಂಬ ಈ ಹಾಡಿನ ಅಂತ್ಯಚರಣ ಹೀಗಿದೆ -

". . . . ಬಾಲಚಂದ್ರನ।ಪುರದೊಳನುದಿನ।
ಪಾಲಿಸುವ।ಗೌರೀಶನಾ।ಬಾಲೆ ನೀ ಪೋಗಿ ಕರೆದುತಾರೆ
ಫಲಮನದ।ಭೀಷ್ಟೆ ಕಾಂತನ . . ."

ಎಂಬ ಈ ಚರಣದಿಂದ ಈತ ಬಾಲೆಂದುಪುರದ(ಯಳಂದೂರು) ಗೌರೀಶಂಕರನ ಭಕ್ತನಿರಬೇಕು ಎನಿಸುತ್ತದೆ.

ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿಗಳು ಮೈಸೂರು ಮಹಾರಾಜರ ಆಸ್ಥಾನಕವಿಗಳಲ್ಲಿ ಎದ್ದು ಕಾಣುವ ಹೆಸರು. ಕನ್ನಡ-ಸಂಸ್ಕೃತ ಭಾಷೆಗಳಲ್ಲಿ ಸಮರ್ಥರಾಗಿದ್ದ ಇವರ ಅಭಿಜ್ಞಾನ ಶಾಕುಂತಲ ನಾಟಕ ನಾಡಿನಲ್ಲೆಲ್ಲಾ ಜನಪ್ರಿಯವಾಗಿದೆ. ಇವರು ಸ್ವರವಚನಕಾರರೂ ಆಗಿದ್ದರು. ಇವರು ರಚಿಸಿರುವ "ಕಾಯೌ ಶ್ರೀ ಗೌರಿ। ಕರುಣಾಲಹರಿ. . . " ಎಂಬ ಸ್ವರಗೀತೆ ಈ ಹಿಂದೆ ಹಳೆಯ ಮೈಸೂರು ಪ್ರಾಂತ್ಯದ ನಾಡಗೀತೆಯಾಗಿತ್ತು. ಇವರು ರಚಿಸಿರುವ "ಬಾಲಿಕಾಗೀತ ಮುಕ್ತಾಕಲಾಪ"[೭] ಎಂಬುದು ಇವರ ಸ್ವರಸಾಹಿತ್ಯ ಕೃತಿ. ಪ್ರಸ್ತುತ ಲೇಖಕರು ಇವರ ಯಾವ ಸ್ವರಗೀತೆಗಳನ್ನೂ ಕೇಳಿಲ್ಲ.

ಕವಿಲಿಂಗ, ನಂಜುಂಡಲಿಂಗ ಎಂಬ ಹೆಸರಿನ ಸ್ವರವಚನಕಾರ ನಂಜನಗೂಡು ಅಥವಾ ಇದರ ನೆರೆಹೊರೆಯವನಿರಬೇಕು. ಇವನದು ಎನ್ನುವ "ಹರನಂಜುಂಡೇಶ್ವರ ನಿಮಗೆ ನಮೊ".

೭. ಕರ್ನಾಟಕ ದರ್ಶನ: ಲೇ ಶ್ರೀ.ಬಿ.ಶಿವಮೂರ್ತಿಶಾಸ್ತ್ರಿ.

. . " ಎಂಬ ಹಾಡಿನ ಕೊನೆಯಲ್ಲಿ "ಕಪನೀಪತಿ ನಮೋ. . ." ಎಂದು ಹೇಳಿರುವುದನ್ನು ಗಮನಿಸಿದರೆ ಇವನು ನಂಜನಗೂಡಿನ ನಂಜುಂಡೇಶ್ವರನ ಭಕ್ತನಿರಬೇಕು ಎನಿಸುತ್ತದೆ. ಇವನ ಹಾಡುಗಳು ಹೆಚ್ಚಾಗಿ ದೊರೆಯುತ್ತಿಲ್ಲ.

ಲಿಂಗೈಕ್ಯ ಮಾಸ್ಟರ್ ಪುಟ್ಟಮಲ್ಲಪ್ಪನವರು ದೇವನೂರು ಮಠದ ಭಕ್ತರು. ಕೊಳ್ಳೇಗಾಲದ ದೊಡ್ಡಿಂದುವಾಡಿ ಗ್ರಾಮದವರು. ಹೆಸರಾಂತ ಸ್ವರವಚನಕಾರರು. ಇವರು ತಮ್ಮ ಗುರುಗಳನ್ನು ಕುರಿತು ಅನೇಕ ಸ್ತೋತ್ರದ ಹಾಡುಗಳು, ಮಂಗಳಾರತಿ ಪದ, ಅಕ್ಷರ ಮಾಲಿಕೆ ರೂಪದ ಹಾಡುಗಳನ್ನು ರಚಿಸಿದ್ದಾರೆ. ಇವರು ತಮ್ಮ ಮಠದ ಗುರುಗಳ ಬಗ್ಗೆ ಯಕ್ಷಗಾನವೊಂದನ್ನು ಬರೆದಿದ್ದಾರೆ. ಈ ಕೃತಿಯ ಕೆಲವು ತುಣುಕನ್ನು ಲೇಖಕನು ಗಮನಿಸಿದ್ದಾನೆ. ಇವರು 'ತೋಂಟದಾರ್ಯ' (ಇವರ ಗುರುಗಳು) ಎಂಬ ಕೃತಿಯನ್ನು ಬರೆದಿದ್ದಾರೆ. ಈ ಕಾಲದಲ್ಲೆ ಮಾಸ್ಟರ್ ಪುಟ್ಟಮಲ್ಲಪ್ಪನವರು "ಶ್ರೀ ಗುರುಮಲ್ಲುದೇಶಿಕ ಲಿಂಗ" ಎಂಬ ತ್ರೈಮಾಸಿಕವನ್ನು ಪ್ರಕಟಿಸುತ್ತಿದ್ದರು. ಈ ಸಂಚಿಕೆಯಲ್ಲಿ ಇವರ ಸ್ವರವಚನಗಳು ಪ್ರಕಟವಾಗಿರಬೇಕು.

ನಿನ್ನೆ ಮೊನ್ನೆ ತಾನೆ ತೀರಿಕೊಂಡ ಮಾಜಿ ಶಾಸಕರೂ, ಸಾಹಿತಿಗಳೂ ಆಗಿದ್ದ ಹೆಜ್ಜಿಗೆ ಎಂ. ಲಿಂಗಣ್ಣನವರು ಒಳ್ಳೆಯ ಸ್ವರವಚನ ಸಾಹಿತಿಗಳು. ಇವರು ಬರೆದಿದ್ದ ೧೭ ಸ್ವರವಚನಗಳನ್ನು ಸಂಶೋಧಕರಾದ ಸಿದ್ದಗಂಗಯ್ಯ(ಪೀಪಲ್ಸ್‌ಪಾರ್ಕ್ ಪ. ಪೂ. ಕಾಲೇಜು, ಮೈಸೂರು)ನವರು ಪರಿಷ್ಕರಿಸಿದ್ದುದಾಗಿ ತಿಳಿಸಿದ್ದಾರೆ. ಈ ೧೭ ಸ್ವರವಚನಗಳು ಪ್ರಕಟವಾಗಬೇಕಿದೆ. ಇವರು ತ್ರಿಪದಿಯಲ್ಲಿ ಸಿದ್ಧಹಸ್ತರು. ತಮ್ಮ ಗುರುಗಳಾದ ಮಲ್ಲನಮೂಲೆಮಠದ ಸಿದ್ಧಲಿಂಗಸ್ವಾಮಿಗಳನ್ನು ಮತ್ತು ಆ ಪರಂಪರೆಯವರನ್ನು ಕುರಿತು ಹಲವು ತ್ರಿಪದಿಗಳನ್ನು ರಚಿಸಿದ್ದಾರಲ್ಲದೆ ದೇವನೂರುಮಠ ಮತ್ತು ಸುತ್ತೂರುಮಠದ ಗುರುವರ್ಯರುಗಳ ಬಗ್ಗೆಯೂ ತ್ರಿವಿಧಿಗಳನ್ನು ಬರೆದಿದ್ದಾರೆ. ತ್ರಿವಿಧಿ ಸ್ವರಸಾಹಿತ್ಯಕ್ಕೆ ಬರುವ ಛಂದೋಮಾಧ್ಯಮ. ಹೀಗಾಗಿ ಲಿಂಗಣ್ಣನವರ ಸಮಗ್ರ ತ್ರಿವಿಧಿಗಳನ್ನು ಕಲೆ ಹಾಕಿದರೆ ಇದು ಇವರ ಸ್ವರಸಾಹಿತ್ಯದ ಅಪೂರ್ವ ಕೃತಿಯಾಗುವುದಲ್ಲದೆ ಮಲ್ಲನಮೂಲೆ, ಸುತ್ತೂರು, ದೇವನೂರು ಮಠಗಳ ಮೇಲೆ ಹೆಚ್ಚು ಬೆಳಕುಚೆಲ್ಲುತ್ತದೆ.

ಶ್ರೀ ಬಸವಣ್ಣಸ್ವಾಮಿಗಳು ದೇವನೂರುಮಠದ ಐದನೇ ಗುರುಗಳು. ಆಶುಕವಿತಾ ಶಕ್ತಿಯನ್ನು ಪಡೆದಿದ್ದ ಇವರ ಸ್ವರವಚನಗಳ ಸಂಕಲಿತ ಕೃತಿ 'ಶ್ರೀ ಶಿವಭಜನಾಮೃತ'. ಇವರ ನೂರಾರು ಸ್ವರವಚನಗಳು ಇಲ್ಲಿದ್ದು ಈ ಪರಿಸರದ ಎಲ್ಲಾ ಹಾಡುಗಾರರ ಬಾಯಲ್ಲಿವೆ. ಇವರ ಕೆಲವು ಅಪ್ರಕಟಿತ ಸ್ವರವಚನಗಳು, ಮಂಗಳಗೀತೆಗಳು ಪ್ರಕಟವಾಗಬೇಕಿದೆ.

ನಾಟಕಕಾರರೂ, ಸ್ವರವಚನಕಾರರೂ ಆಗಿದ್ದ ಲಿಂಗೈಕ್ಯ ಹೊಂಡರಬಾಳಿನ ಆರಸಿನವರು ಅನೇಕ ಭಕ್ತಿಪ್ರಧಾನವಾದ ಸ್ವರವಚನಗಳನ್ನು ರಚಿಸಿ ಹಾಡಿದ್ದಾರೆ, ಹಾಡಿಸಿದ್ದಾರೆ. ಇವರ "ಸಂಗನಬಸವೇಶ!ಚಿಜ್ಯೋತಿಯೇ! ಶ್ರೀ ಗುರುಚಿನುಮಯ ರೂಪ ಶಿವಾ" ಎಂಬ ಹಾಡು ಜನಪ್ರಿಯವಾಗಿದೆ.

ಚಿಲಕವಾಡಿ ಶಂಭುಲಿಂಗನಬೆಟ್ಟದ ಕುಮಾರ ನಿಜಗುಣ ಎಂಬ ನಾಮಧೇಯದ ಶ್ರೀ ಪಿ. ಬಸವಣ್ಣನವರು ಸಾಹಿತಿಗಳೂ ಹೌದು, ಸ್ವರವಚನಕಾರರೂ ಆಗಿದ್ದಾರೆ. ಇವರ 'ನಿರೀಕ್ಷೆ', 'ಭಿಕ್ಷೆ', 'ನಿಜಗುಣಸ್ತೋತ್ರಮಾಲೆ' ಈ ಮೂರು ಕೃತಿಗಳೂ ಸ್ವರವಚನ ಸಂಕಲನಗಳಾಗಿವೆ. ನಿಜಗುಣರ ಬಗ್ಗೆ ಆಳವಾಗಿ ಅಭ್ಯಸಿಸಿರುವ ಇವರ 'ತಂದೆ ನಿಜಗುಣ' ಎಂಬ ಸ್ವರಗೀತೆಯನ್ನು ಕೇಳಿಯೇ ಆನಂದಿಸಬೇಕು.

ಕೊನೆಯದಾಗಿ ಉಲ್ಲೇಖನೀಯವಾದ ಮಗುದೊಬ್ಬ ಸ್ವರವಚನಕಾರ ಹಾಗೂ ದೇವನೂರು ಮಠದ ಮೂಲ ಗುರುಗಳಾಗಿದ್ದ ಶ್ರೀ ಶ್ರೀ ಗುರುಮಲ್ಲೇಶ್ವರರು (೧೮೨೮-೧೮೮೯) ಕೆಲವು ಸ್ವರವಚನಗಳನ್ನು ರಚಿಸಿದ್ದಾರೆ. ಈ ಬಗ್ಗೆ ಸಂಶೋಧಕ ಶ್ರೀ ಜಿ. ಜಿ. ಮಂಜುನಾಥರವರು ಪ್ರಸ್ತಾಪಿಸಿದ್ದಾರೆ. ಶ್ರೀ ಗುರುಮಲ್ಲೇಶ್ವರರದು ಎಂದು ಪ್ರಬಲವಾಗಿ ಹೇಳುವ "ಜ್ಞಪ್ತಿ ಚಿದ್ಬಯಲನ್ನೆ ಸೇರು ಕಂಡ್ಯಾ." ಎಂಬ ಸ್ವರಗೀತೆ ಅತ್ಯಂತ ಜನಪ್ರಿಯವಾದ, ಅರ್ಥವತ್ತಾದ ಹಾಡು. ಇವರದು ಎನ್ನುವ "ಮಾಡಿದನೆನ್ನ ಫಕೀರನ. ." ಎಂಬ ಸ್ವರಗೀತೆಯೂ ಅತ್ಯಂತ ಮನೋಜ್ಞವಾಗಿದೆ. ಆದರೆ ಈ ಹಾಡಿನ ಧಾಟಿ, ಬಳಸಿರುವ ಕೆಲವು ಪದಗಳ ಆಧಾರದ ಮೇಲೆ ಇದು ಗುರುಮಲ್ಲೇಶ್ವರರ ರಚನೆಯಲ್ಲವೇನೋ ಎಂದು ಡಾ. ಇಮ್ಮಡಿ ಶಿವಬಸವಸ್ವಾಮಿಗಳು(ಕುಂದೂರುಮಠ ಮತ್ತು ಪಂಚಗವಿಮಠಾಧ್ಯಕ್ಷರು, ಮೈಸೂರು) ಅನುಮಾನ ವ್ಯಕ್ತಪಡಿಸಿದ್ದಾರೆ. ಗುರುಮಲ್ಲೇಶ್ವರರದು ಎಂದು ಹೇಳುವ "ತಾ ಲೀಲೆ ಲಿಂಗ! ತಾ ಲೀಲೆ! . . . " ಎಂಬ ಸ್ವರವಚನ ಮತ್ತು "ಆರು ಅರಿಯರು ನಮ್ಮೂರು . . ." ಎಂಬ ಮಗದೊಂದು ಹಾಡು ಭಜನಾಮೇಳಗಳಲ್ಲಿ ಅರ್ಥಪೂರ್ಣವಾಗಿ, ಇಂಪಾಗಿ ಕೇಳಿಬರುತ್ತವೆ. ಈ ಮೇಲಿನ ನಾಲ್ಕೂ ಸ್ವರವಚನಗಳ ಕರ್ತೃ ಯಾರೇ ಆಗಿರಲಿ ಆ ಮಾತು ಬೇರೆ, ಆದರೆ ಆ ಹಾಡುಗಳ ಮಥಿತಾರ್ಥ ಭಾವಗಮ್ಯ.

ಸಾಹಿತ್ಯ ಕ್ಷೇತ್ರದಲ್ಲಿ ಸಂಶೋಧನೆ, ವಿಮರ್ಶೆಗಳು ಅತಿ ಅವಶ್ಯಕವಾದುವು. ಇವು ಸಾಹಿತ್ಯವನ್ನು ರಕ್ಷಿಸುತ್ತವೆ ಮತ್ತು ಗುಣಮಟ್ಟವನ್ನು ಹೆಚ್ಚಿಸುತ್ತವೆ, ಓರೆ-ಕೋರೆಗಳನ್ನು ತಿದ್ದಿತೀಡಿ ಸರ್ವಾಂಗಸುಂದರವನ್ನಾಗಿಸಲು ಯತ್ನಿಸುತ್ತವೆ. ಆದರೆ, ಸ್ವರಸಾಹಿತ್ಯವನ್ನು ಗಮನದಲ್ಲಿಟ್ಟುಕೊಂಡು ಮಾತನಾಡ ಹೋದಾಗ ಇಲ್ಲಿ ವಿಮರ್ಶೆ ಮತ್ತು ಸಂಶೋಧನೆಗಳು ಅತ್ಯಂತ ಗೌಣ. ಸ್ವರಸಾಹಿತ್ಯವನ್ನು ಹಾಡುತ್ತಾ ಬರೆದಿದ್ದಾರೆ. ಇದನ್ನು ಹಾಡಬೇಕು, ಹಾಡಿನ ಮೂಲಕ ಕೇಳಬೇಕು.

## ಕೊನೆಯ ಮಾತು

ಮೈಸೂರು ಕರ್ನಾಟಕದಲ್ಲಿ ಸ್ವರವಚನಗಳನ್ನು ಮನೆಮನೆಗೂ ಹೋಗಿ ಇಂಪಾಗಿ ಹಾಡುವ ಜಂಗಮರುಗಳ ಸಂಖ್ಯೆ ಬಹಳಷ್ಟಿದೆ. ಈಗ ಈ ಹಾಡುವಯ್ಯಗಳ ಸಂಖ್ಯೆ ಕಡಿಮೆಯಾಗಿದೆ. ನಿಜವಾಗಿ ಈ ಸ್ವರವಚನಗಳ ಪೋಷಕರೂ, ಸಂವಾಹಕರೂ ಆಗಿರುವ ಈ ಜಂಗಮರ ಬಾಯಲ್ಲಿ ಲಾಸ್ಯವಾಡುವ ಸ್ವರವಚನಗಳನ್ನು ಇತ್ತೀಚೆ ಯಾರೂ ಗಮನಿಸುತ್ತಿಲ್ಲ. ಸ್ವರಸಾಹಿತ್ಯಕ್ಕೆ ಮೌಖಿಕ ಆಸರೆಯನ್ನಿತ್ತಿರುವ ಈ ಜಂಗಮಯ್ಯಗಳನ್ನು ಮತ್ತು ಈ ಪರಿಸರದಲ್ಲಿ ಸ್ವರವಚನಗಳನ್ನು ಹಾಡುತ್ತಿರುವ ಕೆಲವು ಯುವಪೀಳಿಗೆಯನ್ನು ಮತ್ತು

ಭಜನೆಗೆಂದೇ ಆರಂಭವಾಗಿರುವ ಭಜನಾ ಮೇಳಗಳನ್ನು ಪ್ರೋತ್ಸಾಹಿಸಿ, ಗುರುತಿಸಿ ಅವರಿಂದ ಲಾಭ ಪಡೆಯಬೇಕಿದೆ. ಮೈಸೂರು ಜಿಲ್ಲೆಯಲ್ಲಿ ಎರಡು ಮೂರು ಗ್ರಾಮಗಳಿಗೊಂದರಂತೆ ಒಂದು 'ಭಜನಾ ಸಂಘ' ಇದೆ. ಹೀಗಾಗಿ ಈ ಪರಿಸರದಲ್ಲಿ ೫೦೦ಕ್ಕೂ ಹೆಚ್ಚು ಭಜನಾಮೇಳಗಳಿವೆ. ಇವುಗಳಿಗೆ ಪುರಸ್ಕಾರ ಸಿಕ್ಕಿದರೆ ಸ್ವರಸಾಹಿತ್ಯದ ಬಗ್ಗೆ ಭರವಸೆ ಮೂಡಬಹುದು. ಈ ಜರೂರು ಇಂದು ಅಗತ್ಯವಾಗಿದೆ.

ಈ ಬಗ್ಗೆ ಪ್ರಶಂಸೆಗೆ ಪಾತ್ರವಾಗಿರುವ ಮೈಸೂರು ಪ್ರಾಂತ್ಯದ ಎರಡು ಮಠಗಳು ಇಲ್ಲಿ ಉಲ್ಲೇಖನೀಯ. ಒಂದು ದೇವನೂರುಮಠ, ಮಗುದೊಂದು ಸುತ್ತೂರುಮಠ. ದೇವನೂರುಮಠದವರಿಗೆ ಭಜನೆ ನಿತ್ಯಕಾಯಕವಾಗಿದೆ. ಸುಮಾರು ಶತಮಾನದ ಅವಧಿಯಿಂದಲೂ ಈ ಮಠದಲ್ಲಿ ಸ್ವರವಚನಗಳನ್ನು ಹಾಡುವ-ಆಡುವ ಪದ್ಧತಿ ಸಂಪ್ರದಾಯವಾಗಿ ಬೆಳೆದುಬಂದಿದೆ. ಈ ಮಠದಲ್ಲಿ ಸ್ವರವಚನಕಾರರು, ಗಾಯಕರು, ಭೃಂಗಿವೇಷದಲ್ಲಿ ಕುಣಿಯುವವರು ನೂರಾರು ಮಂದಿ ಉತ್ತೇಜನಗೊಳ್ಳುತ್ತಿದ್ದಾರೆ. ಸ್ಫೂರ್ತಿ ಪಡೆದಿದ್ದಾರೆ. ಹೀಗಾಗಿ ದೇವನೂರುಮಠ ಸ್ವರವಚನದ ಕೇಂದ್ರವಾಗಿದೆ.

ಶ್ರೀ ಸುತ್ತೂರುಮಠ ಮಗುದೊಂದು ರೀತಿಯಲ್ಲಿ ಸ್ವರವಚನದ ಸ್ಫೂರ್ತಿಯ ಕೇಂದ್ರವಾಗಿದೆ. ಈ ಮಠದವರು ಪ್ರತಿವರ್ಷವೂ ನಡೆಸುತ್ತಿರುವ ಸುತ್ತೂರು ಜಾತ್ರಾ ಮಹೋತ್ಸವದಲ್ಲಿ ಈ ಪ್ರಾಂತ್ಯದ ಸ್ವರಸಾಹಿತ್ಯಗಾಯಕರಿಗೆ ಭಜನಾ ಸ್ಪರ್ಧೆಯನ್ನು ಏರ್ಪಡಿಸಿ ಸ್ಪರ್ಧೆಯಲ್ಲಿ ಭಾವಪೂರ್ಣವಾಗಿ, ರಸಮಯವಾಗಿ, ಅರ್ಥವತ್ತಾಗಿ ರಾಗ-ತಾಳಗಳಿಗನುಗುಣವಾಗಿ ಹಾಡುವ ಗಾಯಕರನ್ನು ಗುರುತಿಸಿ ಅವರನ್ನು ಸನ್ಮಾನಿಸುವ, ಬಹುಮಾನಗಳನ್ನು, ಬಿರುದನ್ನು, ಧನವನ್ನು, ವಸ್ತ್ರಾದಿಗಳನ್ನು ನೀಡುತ್ತಿರುವುದು ಜನಜನಿತವಾದ ಮಾತು. ಈ ಸ್ಪರ್ಧೆಯಲ್ಲಿ ಭಾಗವಹಿಸುವ ಮೇಳಗಳು, ಗಾಯಕರುಗಳ ಸಂಖ್ಯೆ ಅಪಾರವಾಗಿದ್ದು ತೀರ್ಪುಗಾರರಿಗೆ ಯಾರಿಗೆ ಬಹುಮಾನ ಕೊಡಬೇಕು ಎಂಬ ಬಗ್ಗೆ ತಲೆ ತುರಿಸಿಕೊಳ್ಳುವಂತಹ ಇಕ್ಕಟ್ಟನ್ನು ಸೃಷ್ಟಿಮಾಡುವಂತಹ ಸುಶ್ರಾವ್ಯವಾಗಿ ಹಾಡುವ ಗಾಯಕರ ಸಮಾವೇಶವನ್ನು ಗಮನಿಸಿದರೆ ಸ್ವರಸಾಹಿತ್ಯಕ್ಕೆ ಮತ್ತು ಸ್ವರವಚನಗಳನ್ನು ಹಾಡುವ ಹಾಡುವಯ್ಯಗಳಿಗೆ ಸುತ್ತೂರುಮಠದವರು ನೀಡುತ್ತಿರುವ ಗೌರವ ವ್ಯಕ್ತವಾಗುತ್ತದೆ. ಅಷ್ಟೇ ಅಲ್ಲ ನಾನು ಈ ಹಿಂದೆ ಭಾವಿಸಿದಂತೆ "ಕತ್ತಲೆ ಮನೆಯೊಳು ಕಣ್ಣು ತೆರೆದು ನೋಡು ಹೊತ್ತು ಮೂಡುತಲಿದೆ. . . ." ಎಂಬಂತೆ ಈ ಕ್ಷೇತ್ರದಲ್ಲಿ ಹೊತ್ತು ಮತ್ತೊಮ್ಮೆ ಉದಯವಾಗುತ್ತಿದೆ. ಈ ಮಾತಿಗೆ ಪೂರಕವಾಗಿ ಸುತ್ತೂರು ಮಹಾವಿದ್ಯಾಸಂಸ್ಥೆಯ ಆಶ್ರಯದಲ್ಲಿ "ಶ್ರೀ ಶಿವರಾತ್ರೀಶ್ವರ ಧಾರ್ಮಿಕ ದತ್ತಿ"ಯ ನೆನಪಿನಲ್ಲಿ ಅಖಂಡ ಕರ್ನಾಟಕದಲ್ಲಿ ಪ್ರಕಟವಾಗಿರುವ, ಪ್ರಕಟವಾಗಬೇಕಾದ, ಮೌಖಿಕವಾಗಿರುವ ಸ್ವರವಚನಗಳನ್ನು ಆಮೂಲಾಗ್ರವಾಗಿ ಸಂಗ್ರಹಿಸಿ, ಸಂಕಲಿಸಿ, ಪರಿಷ್ಕರಿಸಿ ಹಲವಾರು ಸಂಪುಟಗಳಲ್ಲಿ ಪ್ರಕಟಿಸುವ ಮತ್ತು ಈ ಎಲ್ಲಾ ಹಾಡುಗಳನ್ನು ಧ್ವನಿಮುದ್ರಿಸಿಕೊಳ್ಳುವ ಒಂದು ಬೃಹದ್ಯೋಜನೆಯನ್ನು ಹಮ್ಮಿಕೊಂಡಿರುವುದು ಸಂತಸದ ಸಂಗತಿ. ಜ್ಞಾನಪಿಪಾಸುಗಳಿಗೆ ಈ ಯೋಜನೆ ಒಂದು ವರದಾನ.

## ಗ್ರಂಥಋಣ

೧. ಶಿವದಾಸ ಗೀತಾಂಜಲಿ-ಡಾ. ಎಲ್. ಬಸವರಾಜು
೨. ಬಸವಪಥ, ಸಂ. ೧೬, ಸಂಚಿಕೆ-೫ ಆಗಸ್ಟ್ ೧೯೯೫
೩. ನಿಜಗುಣರ ಸಮಗ್ರ ಕೃತಿಗಳು-ಡಾ. ಎಸ್. ವಿದ್ಯಾಶಂಕರ್
೪. ಕರ್ನಾಟಕ ದರ್ಶನ-ಬಿ. ಶಿವಮೂರ್ತಿಶಾಸ್ತ್ರಿ
೫. ಸುಬೋಧಸಾರ-ಸಂಗ್ರಾಹಕ:ಹರ್ಡೇಕರ್ ಮಂಜಪ್ಪ
೬. ಕರ್ನಾಟಕ ಸಂಸ್ಕೃತಿ ಸಮೀಕ್ಷೆ-ಡಾ. ಹೆಚ್. ತಿಪ್ಪೇರುದ್ರಸ್ವಾಮಿ
೭. ಸ್ವರಸಾಹಿತ್ಯ ಪ್ರಕಟಣೆಗಳು-ಶ್ರೀ ತೋಂಟದಾರ್ಯಮಠ, ಗದಗ.

## ವ್ಯಕ್ತಿಋಣ

೧. ಶ್ರೀ ಸುಬ್ಬೇದೇವರು, ದೇವನೂರುಮಠ
೨. ಶ್ರೀ ಮಾಜಿಭಿಕ್ಷದವರು, ದೇವನೂರುಮಠ
೩. ಸಂಗೀತ ವಿದ್ವಾನ್ ಶಿವಣ್ಣನವರು, ಚಿಕ್ಕಕವಲಂದೆ
೪. ಮಾ|| ಓ. ಗುರುಸಿದ್ದಯ್ಯನವರು, ದೇವನೂರು
೫. ಸ್ವರವಚನ ಹಾಡುಗಾರ ಶಿವಬಸಪ್ಪನವರು, ಕಾಮಗೆರೆ
೬. ಶ್ರೀ ಗುರುಮಲ್ಲೇಶ್ವರ ಭಜನಾ ಮಂಡಲಿಯ ಗಾಯಕರು, ದೇವನೂರುಮಠ.



# ಮದ್ರಾಸ ಕರ್ನಾಟಕದ ಮೌಖಿಕ ಸ್ವರವಚನಗಳು

*ಮೃತ್ಯುಂಜಯ ರುಮಾಲೆ*

"ನಡುಗನ್ನಡ ಸಾಹಿತ್ಯದಲ್ಲಿ ಹೊಸ ಹಾದಿ ತೆರೆದವರು, ಈ ಜಿಲ್ಲೆಯ ಹರಿಹರ ರಾಘವಾಂಕರು. ಆದನ್ನು ಪಟ್ಟು ಹಿಡಿದು ಮುಂದುವರಿಸಿಕೊಂಡು ಹೋದವರು ಪ್ರೌಢದೇವರಾಯನ ಕಾಲದ ವೀರಶೈವ ವಿರಕ್ತರು ಮತ್ತು ಕೃಷ್ಣದೇವರಾಯನ ಕಾಲದ ವೈಷ್ಣವ ಕೀರ್ತನಕಾರರು .... ಧಾರ್ಮಿಕಕ್ಕೆ ಬಂದರೆ ವೀರಶೈವ ವಿರಕ್ತ ಆಂದೋಲನ, ಮಾಧ್ವ ದಾಸ ಆಂದೋಲನ, ಹುಟ್ಟಿದ್ದು-ಬೆಳೆದದ್ದು ಇದೇ ಜಿಲ್ಲೆಯಲ್ಲಿ. ಶಿಲ್ಪದಲ್ಲಿಯೂ ವಿಜಯನಗರಶೈಲಿ ಆವಿಷ್ಕಾರಗೊಂಡದ್ದು, ಈ ಜಿಲ್ಲೆಯಲ್ಲಿ. ಹೀಗೆ ಮಧ್ಯಕಾಲೀನ ಕರ್ನಾಟಕದ ಎಲ್ಲ ಮುಖಗಳ ಇತಿಹಾಸವೆಂದರೆ ಬಳ್ಳಾರಿ ಜಿಲ್ಲೆಯ ಇತಿಹಾಸವೇ ಆಗಿದೆ"[೧] ಎಂಬ ಚಾರಿತ್ರಿಕ ಪ್ರಶಂಸೆ ಈ ಜಿಲ್ಲೆ ಪಡೆದಿದೆ.

ಮೂರುಜಾವಿಪಂಡಿತ (೧೦೫೯), ಬಳ್ಳೇಶ ಮಲ್ಲಯ್ಯ (೧೧೪೦), ಮರುಳಸಿದ್ಧ (೧೧೬೨), ಕುರುಗೋಡು ರಾಚಮಲ್ಲ (೧೧೮೧-೮೪), ಹರಿಹರ (೧೨೩೦), ರಾಘವಾಂಕ (೧೨೩೦), ಮಳೆಯ ಮಲ್ಲೇಶ್ವರ (೧೪೨೫), ಮಹಾಲಿಂಗದೇವ (೧೪೨೫), ಶಿವತತ್ತ್ವ ಚಿಂತಾಮಣಿಯಲ್ಲಿ ಉಕ್ತವಾದ ನೂತನ ಶರಣರು (೧೩೦೦-೧೫೫೦), ಕುಮಾರ ಬಂಕನಾಥ (೧೪೩೦), ಜಕ್ಕಣ್ಣ (೧೪೩೦), ಮಗ್ಗೆಯ ಮಾಯಿದೇವ (೧೪೩೦), ಲಕ್ಕಣ್ಣ ದಂಡೇಶ (೧೪೩೦), ಕಲ್ಲುಮಠದ ಪ್ರಭುದೇವ (೧೪೩೦), ಚಾಮರಸ (೧೪೩೦) ನೂರೊಂದು ವಿರಕ್ತರು (೧೪೩೦), ಹೊಸಕೋಟೆ ಚೆನ್ನವೀರೇಶ (೧೫೦೦), ಹಂಪಸಾಗರದ ಚೆನ್ನವೀರೇಶ (೧೫೦೦), ಗವಿಸಿದ್ಧೇಶ್ವರ (೧೫೦೦), ಹೊನ್ನಯ್ಯ (೧೫೩೦), ಎಮ್ಮೆಯ ಬಸವ (೧೫೪೩), ವಿರೂಪಾಕ್ಷ ಪಂಡಿತ (೧೫೮೪), ಮೋಳಿಗೆ ಚಿಕ್ಕಯ್ಯ (೧೫೯೦), ಮದ್ದಾನೆಯ ಸಿದ್ಧಲಿಂಗಯ್ಯ (೧೫೯೦), ಬಾಚಿಗೊಂಡನ ಹಳ್ಳಿ ಕೌದಿಮಹಾಂತೇಶ್ವರ (೧೬೨೩), ಯಾದವಗಿರಿ ಶೂನ್ಯಪೀಠದ ಗುರುಸಿದ್ಧಸ್ವಾಮಿ (೧೬೨೫), ಯಾದವಗಿರಿ ಶಿವಾನುಭವ ಚರ ಮಠಾಧಿಪತಿ ಹಿರಿಯ ರಾಚೋಟಿ ಸ್ವಾಮಿ (೧೬೯೦), ಬಳ್ಳಾರಿಯ ರಾಘವಾಂಕಸ್ವಾಮಿ (೧೬೯೦), ಚಿದಾನಂದಾವಧೂತ (೧೭೫೦), ಲಿಂಗನಾಯ್ಕನಹಳ್ಳಿ ಚೆನ್ನವೀರೇಶ (೧೬೬೦), ಕುರುಗೋಡು ನೀಲಮ್ಮ (೧೬೭೦), ಗದ್ದಿಕೆರೆ ದೊಡ್ಡ ಬಸಪ್ಪ (೧೭೭೦), ಸಿದ್ಧಮಲ್ಲಯ್ಯ (೧೭೭೦), ಮರಿಸ್ವಾಮಿ(೧೭೦-೧೮೪೨), ಸಕ್ಕರಿ ಕರಡೆಪ್ಪ (೧೮೧೫-೧೮೭೫), ಮೈಲಾರ

೧. ಡಾ. ಎಂ.ಎಂ. ಕಲಬುರ್ಗಿ, ಇತಿಹಾಸದರ್ಶನ-೧೦, ೧೯೯೫, ಪುಟ-XVIII

ಬಸವಲಿಂಗ ಶರಣ(೧೭೮೦-೧೮೫೦), ಉಡಗೋಳ ಮದ್ದಾನೇಶ್ವರ (೧೮ನೆಯ ಶತಮಾನ) ಶರಣತತ್ತ್ವವನ್ನು ಬದುಕಿದ ಈ ಶರಣರು,[೨] ಶರಣ ಸಾಹಿತ್ಯಕ್ಕೆ ತಮ್ಮ ಕಾಣಿಕೆ ಸಲ್ಲಿಸಿದ್ದಾರೆ.

ಸ್ವರವಚನಕ್ಕೆ ಸಂಬಂಧಿಸಿದಂತೆ, ನಡೆ-ನುಡಿಯ ಸಮನ್ವಯವನ್ನು ಸಾರುವ ಕರಸ್ಥಲದ ನಾಗಿದೇವ(೧೮೩೦), ಬದುಕಿನ ವ್ಯಾವಹಾರಿಕತೆ, ವ್ಯರ್ಥತೆ ಮತ್ತು ಪಡೆಯಬೇಕಾದ ಸಾಫಲ್ಯವನ್ನು ತಿಳಿಸುವ ನಿರ್ವಾಣಿ ಬೋಳೇಶ (೧೮೩೦), ಲಿಂಗ, ದಾಸೋಹ, ಅಲೌಕಿಕಾನಂದ ಪ್ರಸ್ತುತ ಪಡಿಸುವ ಮಗ್ಗೆಯ ಮಾಯಿದೇವ (೧೮೩೦), ಕಾಮಕ್ಕೆ ನಿರ್ಲಿಪ್ತವಾದ ಬಾಳು ಶ್ರೇಷ್ಠ ಎನ್ನುವ, ಆತ್ಮಾವಲೋಕನವನ್ನು ಚಿಂತಿಸುವ ಕವಿಲಿಂಗ (೧೮೯೦), ಲಿಂಗಾಂಗ ಸಾಮರಸ್ಯ, ಅಷ್ಟಾವರಣ, ಪಂಚಾಚಾರಗಳ ಮಹತ್ವ ತಿಳಿಸುವ ಕಾರುಗಹಳ್ಳಿ ಶಾಂತಯ್ಯ (೧೫೩.೩)ಗಳಂಥ ಪ್ರಮುಖರು ಚಾರಿತ್ರಿಕವಾಗಿ ಮಹತ್ವವನ್ನು ಪಡೆದುಕೊಂಡಿದ್ದಾರೆ.

* * * * *

ಪಂಚಗಣಾಧೀಶ್ವರರೆಂದು ಹೆಸರು ಪಡೆದಿರುವ ಕೊಟ್ಟೂರು ಗುರುಬಸವ, ನಾಯಕನಹಟ್ಟಿಯ ತಿಪ್ಪೇರುದ್ರಸ್ವಾಮಿ, ಕೂಲಹಳ್ಳಿಯ ಮದ್ದಾನೇಶ್ವರ, ಅರಸೀಕೇರೆಯ ಕೋಲಶಾಂತೇಶ್ವರ ಮತ್ತು ಹರಪನಹಳ್ಳಿಯ ಕೆಂಪೇಶ, ಜೊತೆಗೆ ಗೋಣಿ ಬಸವೇಶ್ವರರ ಬದುಕು ಇಲ್ಲಿಯ ಜನಗಳಿಗೆ 'ದಿವ್ಯಸ್ವರೂಪ'ವೆನಿಸಿವೆ.[೩] ಕೊಟ್ಟೂರು ಗುರುಬಸವನ ಕೆಲವು ಪ್ರಕಟಿತ ಸ್ವರವಚನಗಳ, ಕೋಲಶಾಂತ(?)ನ ಅಂಕಿತ ಬರುವ ಕೆಲವು ಅಪ್ರಕಟಿತ ಮತ್ತು ಕಾರುಗಹಳ್ಳಿ ಶಾಂತನ (?)ನ ಅಂಕಿತದ ಕೆಲವು ಅಪ್ರಕಟಿತ ಸ್ವರವಚನಗಳು ಸಮ್ಮಿಶ್ರವಾಗಿಯೂ, ಅಪೂರ್ಣವಾಗಿಯೂ ಅಸ್ಪಷ್ಟವಾಗಿಯೂ ಕೆಲವರ ಬಾಯಿಯಲ್ಲಿ ಬದುಕಿವೆ. ಆದರೆ ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿಯ ಕುರಿತ ಭಜನೆ, ಭಕ್ತಿಗೀತೆಗಳು ಪ್ರಚಲಿತದಲ್ಲಿದ್ದಂತೆ ಆತನಿಂದ ರಚಿಸಲ್ಪಟ್ಟಿರಬಹುದಾದ ಒಂದೂ ಸ್ವರವಚನ ಸಿಗಲಾರದು. ಕೂಲಹಳ್ಳಿ ಮದ್ದಾನೇಶ್ವರನದು ಇದೇ ಪರಿಸ್ಥಿತಿಯಾದರೆ, ಹರಪನಹಳ್ಳಿ ಕೆಂಪೇಶನ ಉಲ್ಲೇಖ ಎಲ್ಲೂ ಇಲ್ಲ.

ಪಂಚಗಣಾಧೀಶ್ವರರ ಚಾರಿತ್ರಿಕ ವ್ಯಕ್ತಿತ್ವ, ಪೌರಾಣಿಕ ಉಲ್ಲೇಖದ ಮೂಲಕ ದೈವತ್ವವನ್ನು ಪಡೆದ ಪರಿಣಾಮವಾಗಿ, ಅವರ ಸ್ವರವಚನಗಳ ಉಳಿಕೆ ಸಾಧ್ಯವಾಗಿಲ್ಲ.

ಈ ಭಾಗದ ಮುಖ್ಯ ಸ್ವರವಚನಕಾರ 'ಎತ್ತಿನ್ಹಟ್ಟಿ ಈಶ', 'ಎತ್ತಿನ್ಹಟ್ಟಿವೀರ' ಅಂಕಿತಗಳ ಮಲ್ಲಿಕಾರ್ಜುನ.[೫] ಈತನ ಸ್ವರವಚನವೊಂದರಲ್ಲಿರುವ ಕುರುಗೋಡು,

---

೨. ಬಳ್ಳಾರಿ ಜಿಲ್ಲೆಯ ಶಿವಶರಣರು-ಶಾಂತರಸ

೩. ಈ ಐವರು ಶರಣರೊಂದಿಗೆ ಗೋಣಿ ಬಸವೇಶ್ವರನನ್ನು ಚಾರಿತ್ರಿಕವಾಗಿ ದಾಖಲಿಸುವ ಕೆಲಸವಾದರೆ ಇವರ ಬದುಕಿನೊಂದಿಗೆ ಬರೆದ-ಸಂದೇಶಗಳೂ ಸಿಗುವ ಸಾಧ್ಯತೆಯಿದೆ.

೪. ಹರಪನಹಳ್ಳಿಯ ಸಂಡೂರು ಕೇರಿಯ ದುರುಗಪ್ಪ ಹಾಡುವ ಒಂದು ಸ್ತುತಿ ಪದ್ಯದಲ್ಲಿ ಐವರೂ ಪಂಚಗಣಾಧೀಶ್ವರರ ಉಲ್ಲೇಖದಲ್ಲಿ ಈತನ ಹೆಸರು ಬರುತ್ತದೆ. ಆದರೆ ಇದು ಸ್ವರವಚನವಲ್ಲ.

೫. ಸ್ವರವಚನ ಸಂಪುಟ-೧ರಲ್ಲಿ ಶ್ರೀ ಎಸ್. ಶಿವಣ್ಣನವರು ಈತನ ೨೮ ಸ್ವರವಚನಗಳನ್ನು ಪ್ರಕಟಿಸಿದ್ದಾರೆ. ನೋಡಿ, (ಪುಟ ೧-೩೦)

ಬಸವರಾಜ ಉಲ್ಲೇಖಿಗಳನ್ನು ಗಮನಿಸಿದರೆ ಬಹುಶಃ ಕುರಗೋಡು ದೊಡ್ಡ ಬಸವ ಈತನ ಆರಾಧ್ಯದೈವ, ಮನೆದೇವರಾಗಿರಬೇಕು. ಬಳ್ಳಾರಿ ಪರಿಸರದಲ್ಲಿ ಈತನ ಸ್ವರವಚನಗಳನ್ನು ಸಂಡೂರಿನ ಶ್ರೀ ಹಗರಿ ಕೊಮರಪ್ಪನವರನ್ನು ಬಿಟ್ಟರೆ ಯಾರೂ ಹಾಡುತ್ತಿಲ್ಲ.[೬] ಈತನ 'ಅರಿವ ನೀ ಅರಿಯೋ ಹರಣವ' ಮತ್ತು 'ಶೀಲವ ಮಾಡಬೇಡಣ್ಣ! ನೀನು ಮಾಡುವುದೆಲ್ಲಾ ಸೂಳೇರ ಬಣ್ಣ' ಎಂಬ ಪ್ರಕಟಿತ ವಚನಗಳ ಜೊತೆಗೆ ಮತ್ತೊಂದು ಅಪ್ರಕಟಿತ ಸ್ವರವಚನ ಅವರ ಬಾಯಿಯಲ್ಲಿ ಮನೆ ಮಾಡಿಕೊಂಡಿದೆ. ಶರಣತತ್ತ್ವದ ಜೊತೆಗೆ ಗೂಢಾರ್ಥದಲ್ಲಿ ಜೀವನ ನಶ್ವರತೆ, ದೇಹರಚನೆ, ಅದರ ಸದುಪಯೋಗದ ಕುರಿತೇ ಹೇಳುವ ಈತನ ವಚನಗಳಲ್ಲಿ ಜೀವನ ನೀತಿಯನ್ನು ಸಾರುವ 'ದುಷ್ಟರ ಸಂಗವ ಮಾಡಬಾರದು' (ಅನುಬಂಧ ನೋಡಿ)- ಮಹತ್ತ್ವದ್ದೆನಿಸಿದೆ. ದುರದೃಷ್ಟವೆಂದರೆ ಸಂಡೂರು ಬಳಿಯ ಎತ್ತಿನ್ಹಟ್ಟಿ (ತಾರಾನಗರವೆಂಬುದು ಈಗಿನ ಹೆಸರು) ಎಂಬ ಸಣ್ಣ ಹಳ್ಳಿಗೇ ಈತ ಅಪರಿಚಿತ.

ಈ ಶತಮಾನದ ಪೂರ್ವಾರ್ಧದಲ್ಲಿದ್ದ (೧೯೭೭ರಲ್ಲಿ ಲಿಂಗೈಕ್ಯ) ಬಳ್ಳಾರಿಯ ಗಡಿಗಿ ಪರಪ್ಪ ಅಥವಾ ಪರಸಪ್ಪ ಒಬ್ಬ ಪ್ರಮುಖ ಶರಣ. 'ಎಂಥ ಗಡಿಗಿಯ ಪರಸನೇ ಚಿಂತೆಯೊಳಗೇ ಮರೆವನೇ ....' ಎಂದು ಪ್ರಾರಂಭವಾಗುವ ಒಂದು ಸ್ವರವಚನವು ಸಂಡೂರಿನ ನೀಲಮ್ಮ ರಾಗವಾಗಿ ಹೇಳುತ್ತಾಳೆ. ಕೇವಲ ಎರಡು ಸಾಲುಗಳಷ್ಟು ನೆನಪಿನಲ್ಲಿರುವ ಈ ಸ್ವರವಚನದ ಪಾಠ ಅಲಭ್ಯವಾದರೂ ತನ್ನ ಪೂರ್ವಿಕರು ಈತನ ಬಗ್ಗೆ ಹೇಳುತ್ತಿದ್ದ ಮಾಹಿತಿಯ ಬಗ್ಗೆ ನೀಲಮ್ಮ ಸಾಕ್ಷಿಯಾಗಿದ್ದಾಳೆ. 'ಸಿರಿವಂತನಾದರೂ ಆತನಿಗೆ ಪಾರಲೌಕಿಕದ ಚಿಂತೆ ಕಾಡುತ್ತಿತ್ತು. ಶಿವನ ಧ್ಯಾನದ ಶ್ರೇಷ್ಠತೆಯನ್ನು ಬದುಕಿನಲ್ಲಿ ಮೆರೆದವನು.'

'ಲೌಕಿಕತೆಗೆ ಶಿವಪಾರಮ್ಯದ ಸ್ತುತಿಯೇ ಪರಿಹಾರ' ಎಂಬ ಭಾವದ ಆತನ 'ಎಂತ ಗುರುವರ ಬಂದನೂ! ನಿಶ್ಚಿಂತ ನಿತ್ಯನಂದನೆ! ಭ್ರಾಂತಿ ಅಳಿದು ನಿರಂತರಲಿ ಸ್ವಾತಂತ್ರ್ಯದಿಂ ನೆಲೆಸಿಪನು!' - ಎಂಬ ಈ ಸ್ವರವಚನ(ಅನುಬಂಧ ನೋಡಿ) ಆತನ ಬಗ್ಗೆ ಇರುವ ಸಧ್ಯದ ಏಕೈಕ ದಾಖಲೆಯಾಗಿದೆ. ಸಂಡೂರಿನ ಮಾಳ್ಗಿ ಷಣ್ಮುಖಪ್ಪನ ಸಂಗ್ರಹದಲ್ಲಿ 'ಬಳ್ಳಾರಿಪುರ ಪರಸಪ್ಪ' ಎಂಬ ಮುದ್ರಿಕೆಯ ಸ್ವರವಚನ ಆತನಿಗೆ ಸಾಕ್ಷಿಯಾಗಿದೆ.

ಸಂಡೂರು ಬಳಿಯ ಯಶವಂತನಗರದ ವಾಸಿ (?) ಶ್ರೀಗುರು ಸಿದ್ಧರಾಮೇಶ್ವರರ ಕೆಲವು ಸ್ವರವಚನಗಳನ್ನು ಇದೇ ಊರಿನ ಶ್ರೀಪರಶುರಾಮಪ್ಪ ಮತ್ತು ಶ್ರೀ ರಾಜಶೇಖರಗೌಡ ಹಾಡುತ್ತಾರೆ. ಸಾಹಿತ್ಯದ ದೃಷ್ಟಿಯಿಂದಲೂ ಮಹತ್ವಪೂರ್ಣವೆನಿಸುವ ಈತನ ಸ್ವರವಚನ ಹನ್ನೆರಡನೇ ಶತಮಾನದ ಶರಣ ಮಡಿವಾಳ ಮಾಚಿದೇವ ಬದುಕಿನ ಕಾಯಕತತ್ತ್ವವನ್ನು ನೆನಪು ಮಾಡಿಕೊಡುತ್ತದೆ. (ಅನುಬಂಧ ನೋಡಿ). ದೇಹದ ಶುಚಿಗೆ ಬಳಸಬೇಕಾದ ಪರಿಕರಗಳು, ಅದನ್ನು ಶುಚಿ ಮಾಡಬೇಕಾದ ಬಗೆ ಇವುಗಳನ್ನು ಕುರಿತ ಮನನೀಯವಾದ ಸ್ವರವಚನವಿದು.

---

೬ ಶ್ರೀ ತಿಂದಪ್ಪ (೮೫ ವರ್ಷ), ಹುಡುಗನಾಗಿದ್ದಾಗ 'ಎತ್ತಿನ್ಹಟ್ಟಿ ಈಶ' ಅಂಕಿತದ ಕೆಲವು ಸ್ವರವಚನಗಳನ್ನೂ ಹಾಡುತ್ತಿದ್ದನಂತೆ. ಈಗ ಅವಾವೂ ಆತನ ನೆನಪಿನಲ್ಲಿ ಉಳಿದಿಲ್ಲ.

ಹರಪನಹಳ್ಳಿ ಪ್ರಾಂತದವನೆನ್ನಲಾದ 'ನೀರಲಕೇರಿ ಶಿವಯೋಗಿ' ಮುದ್ರಿಕೆಯ ಸ್ವರವಚನಗಳು ಬಳ್ಳಾರಿ, ಸಂಡೂರು, ಯಶವಂತನಗರ ಪರಿಸರದಲ್ಲಿ ಸಿಕ್ಕುತ್ತವೆ.

'ಬಂಡೆಗುರು' ಮುದ್ರಿಕೆಯ ಸ್ವರವಚನಗಳು ಸಂಡೂರು ಪರಿಸರದಲ್ಲಿ ಯಥೇಚ್ಛವಾಗಿ ಲಭ್ಯವಾಗುತ್ತವೆ. ಅರ್ಥಗಾಂಭೀರ್ಯದಿಂದ ಕೂಡಿರುವ ಈ ಸ್ವರವಚನಗಳು ಗಮನಾರ್ಹವಾದವುಗಳು.

ಪ್ರಮುಖ ಸ್ವರವಚನಕಾರರನ್ನೂ, ಅವರ ಮುದ್ರಿಕೆಗಳನ್ನೂ ಸಂಗ್ರಾಹ್ಯವಾಗಿ ಇಲ್ಲಿ ಹೀಗೆ ಗಮನಿಸಬಹುದು. 'ಗಡವಡರೇ ಈಶ'; 'ಹಾಸ್ಕರೀಶಾ ಶಾಂತ'[೭]; 'ಗುರುಭೀಮ ತಿಳಿಸ್ಯಾನ ಶೀಲ;[೮] ಹೇರೂರು ವಿರೂಪನಗೌಡರು 'ಷಟ್ಪುರ', 'ಚಂದ ಸಿದ್ಧ'(?) ಅಂಕಿತದಲ್ಲಿ ರಚಿಸಲಾದವುಗಳು.('ಏಡಮೂರಿ ಶಾಸ್ತ್ರ' ಎಂಬುದು ಈತನ ಜನಪ್ರಿಯ ರಚನೆಯಾಗಿದೆ. ಅನುಬಂಧ ನೋಡಿ); ಆರಾಳು ರುದ್ರಯ್ಯಸ್ವಾಮಿ; ಇಂಗಳಗಿ ದೊಡ್ಡ ಊರು ಬಡೆಸಾಬರ ಸ್ವರವಚನಗಳು; 'ಸಾಧು ಗುರುಶಾಂತ'ರ ಸ್ವರವಚನ;[೯] 'ಚಂದ್ರಶೇಖರ' ಅಂಕಿತ; ಇಮ್ಮಡಗೀ ಪ್ರಭುದೇವ; 'ಕೊಳಗಲ್ಲು ಪುರದೊಳು ಗುರುವೀರಿಸ್ವಾಮಿ'; ಆನೆಗುಂದಿ ಅಮರೇಶ; ಹರಗುರು ಶರಭನ ಶರಣನಾಗ; ಅರ್ಸಿಕೇರಿ ಬಸವ; ಕಂಬಳೇಶ; ನಂದನಮಠದ ಗುರು; ಚೆನ್ನಬಸವೇಶ; ಅಥಣಿಪುರ ಸಾಂಬ ಮುರುಗೇಶ್ವರ; ಕರಸ್ಥಳಲಿಂಗ; ಗುರುಮಲ್ಲೇಶ; - ಹೀಗೆ ಅಪ್ರಕಟಿತ ಸ್ವರವಚನಗಳ ನಿಧಿಯೇ ಇಲ್ಲಿ ಲಭ್ಯವಾಗುತ್ತದೆ. ಅಂಕಿತಾನ್ವಯ ಸ್ವರವಚನಕಾರರನ್ನು ಮತ್ತು ಕೇವಲ ಅಂಕಿತದಲ್ಲಿಯೇ ಉಳಿದಿರುವ ಸ್ವರವಚನಗಳನ್ನು ಹಿಡಿದಿಡಬೇಕಾದ ಕೆಲಸದ ಮೂಲಕ ಸ್ವರವಚನ ಸಾಹಿತ್ಯಚರಿತ್ರೆಯ ಕತ್ತಲು ಭಾಗಗಳ ಮೇಲೆ ಬೆಳಕು ಹರಿಸಬಹುದಾಗಿದೆ.

ದೇಹರಚನೆ, ಇದರೊಳಗಿನ ಅದ್ಭುತ ಲೋಕವನ್ನು ಈ ಭಾಗದ ಬಹುತೇಕ ಸ್ವರವಚನಗಳು ಒಳಗೊಂಡಿವೆ. 'ವೈರಾಗ್ಯಮಾರ್ಗದ ವಚನಗಳು' ಹೇರಳವಾಗಿವೆ. ಕಡಕೋಳ ಮಡಿವಾಳೇಶ, ಶಿಶುನಾಳ ಶರೀಫರಂಥ ಕೆಲವರ ರಚನೆಗಳು ಇಲ್ಲಿ ಪ್ರಭಾವ ಬೀರಿರುವುದರಿಂದ ಸ್ಥಳೀಯವಾಗಿ ಅವರ ರಚನೆಗಳು ಕೆಲವು ಸಂದರ್ಭಗಳಲ್ಲಿ ನೆನಪಿಗೆ ಬರುತ್ತವೆ.

ಅದ್ವೈತಸೂತ್ರವನ್ನು 'ಬಂಡೆಗುರು', 'ಷಟ್ಪುರ', 'ಮೃಡಸಿದ್ಧೇಶ' ಮುಂತಾದ ಅಂಕಿತದ ಸ್ವರವಚನಗಳು ಪ್ರತಿಪಾದಿಸುತ್ತವೆಯಾದರೂ 'ಲಿಂಗಾಂಗ ಸಮರಸ' ತತ್ತ್ವಕ್ಕೇ ಅಂಟಿಕೊಳ್ಳುತ್ತವೆ. ನಾನು ಕ್ಷೇತ್ರಕಾರ್ಯದಲ್ಲಿ ತೊಡಗಿದ್ದಾಗ ಕೆಲವರು ಈ ಸ್ವರವಚನಗಳನ್ನು ತಮ್ಮ ಬದುಕಿಗೂ ಅನ್ವಯಿಸಿಕೊಂಡಂತೆ ಭಾವುಕರಾಗಿದ್ದುದನ್ನು ಗಮನಿಸಿದರೆ, ಇವು ಅವರ ಮೇಲೆಮಾಡಿದ ಪರಿಣಾಮ ತಿಳಿದುಬರುತ್ತದೆ.

---

೭. ಬಹುಶಃ ಇದು 'ಅರಸೀಕೇರಿ ಈಶ) ಅಂದರೆ 'ಅರಸೀಕೇರ ಕೋಲ ಶಾಂತವಿರಬಹುದೇ?

೮. ಸಂಡೂರು ಬಳಿಯ ಧರ್ಮಾಪುರದ ಹುಲಗಪ್ಪ 'ಜಡಿಗಲ್ಲು ಭೀಮೇಶ' ಅಂಕಿತದ ಸ್ವರವಚನವೊಂದನ್ನು ಹಾಡುತ್ತಾನೆ. ಇವರಿಬ್ಬರೂ ಒಂದೇ ಇರಬಹುದೇ?

೯. ಅರಸೀಕೇರಿ ಕೋಲ ಶಾಂತ(?)

ಈ ಭಾಗದಲ್ಲಿ ಪ್ರಚಾರದಲ್ಲಿರುವ ಸ್ವರವಚನಗಳ ಶೈಲಿ ಸರಳವಾಗಿದೆ. ಸುಲಭಗ್ರಾಹ್ಯವಾಗಿದೆ. ಉಪಮಾಲಂಕಾರ, ರೂಪಕಾಲಂಕಾರಗಳು ಸಂದರ್ಭೋಚಿತವಾಗಿ ಕೆಲವೆಡೆ ಬಂದರೆ, ಕೆಲವೆಡೆ ಉತ್ಪ್ರೇಕ್ಷೆ ಬಳಕೆಯಾಗಿದೆ. ತಾತ್ತ್ವಿಕ ವಿಷಯದಲ್ಲಿ, ಮಾನವಿಕ ವಿಷಯದಲ್ಲಿ ಆಳವಾದ ತಿಳುವಳಿಕೆಯನ್ನೂ ಕೆಲವು ಹೊಂದಿವೆ. ಕೆಲವರು ಗಂಭೀರವಾಗಿ ಕಂಡರೆ, ಕೆಲವರು ಲಘುವಾಗುತ್ತಾರೆ. ಮತ್ತೆ ಕೆಲವರು ಬಸವಾದಿ ಶರಣರ ಸ್ತುತಿಗೆ ಶರಣು ಹೋಗುತ್ತಾರೆ.

ಸಂಗೀತಕ್ಕೆ ಸಂಬಂಧಿಸಿದಂತೆ ಯಾವುದೇ ರಾಗತಾಳಾದಿ ನಿರ್ದೇಶನವಿಲ್ಲ. ಬಾಯಿಂದ ಬಾಯಿಗೆ ಹರಿದು ಬಂದ ರಾಗವೇ ಪ್ರಾದೇಶಿಕವಾಗಿ ಮಾರ್ಪಾಡಾಗುತ್ತ ಸಾಗಿಬಂದಿದೆ. ಇಲ್ಲಿ ಕೆಲವು ಮುಖ್ಯ ಸ್ವರವಚನಗಳನ್ನು ಅನುಬಂಧದ ರೂಪದಲ್ಲಿ ನೀಡಲಾಗಿದೆ.

## ಅನುಬಂಧ[೧೦]

**ಮಲ್ಲಿಕಾರ್ಜುನ (ಎತ್ತಿನ್ನಟ್ಟಿ ಈಶ):**

ದುಷ್ಟರ ಸಂಗವ ಮಾಡಬಾರದು। ದೂರದೃಷ್ಟಿಯನು ನೋಡಣ್ಣ।
ಕಷ್ಟ ಪಡಿಸದೇ ಬಿಡದದು ಮತ್ತೆ। ದಿಟವು ಇದು ಎಂದು ನಂಬಣ್ಣ। ||೧||

ಎರೆದ ಬೇಲಿಯೊಳ್ ಎಕ್ಕಿಯ ಗಿಡವಿರೆ ಅರಿಯದೇ ಬಿಟ್ಟಿತೇನಣ್ಣ।
ಉರಿವ ಕಿಚ್ಚಿನೊಳು ಕರಗಳ ನಿಟ್ಟಾರೆ ಕರಗದ ಬಿಟ್ಟಿತೇನಣ್ಣ। ||೨||

ಸೊಕ್ಕಾದ ಆನೆಯ ಸ್ಮರಿಸಲು ಅದು ಒಡಲೊಳಗಿಕ್ಕದೇ ಬಿಟ್ಟಿತೇನಣ್ಣ।
ಮರೆವ ಸರ್ಪನ ಎಡೆಯ ಮೆಟ್ಟಲದು ಕಡಿಯದೇ ಬಿಟ್ಟಿತೇನಣ್ಣ। ||೩||

ಮೇಲಿನ ನೋಟವ ನೋಡುತ ನಡೆದರೆ ಕಾಲಿಗೆ ಮುಳ್ಳಿಲ್ಲೇನಣ್ಣ।
ಕಾಲಿನ ಬಾಧೆಯು ತಿಳಿದು ಮತ್ತೆ ನೀ ಮೇಲು ಬುದ್ಧಿಯನು ಗ್ರಹಿಸಣ್ಣ। ||೪||

ಹುಚ್ಚರೊಳಗೆ ಕೂಡ್ಯಾಡಲು ಮತ್ತೆ ರಚ್ಚೆಯು ತಪ್ಪುವುದಿಲ್ಲಣ್ಣ।
ಎತ್ತಿನ್ನಟ್ಟಿಯ ಈಶನ ಪಾದವ ಎಡಬಿಡದೇ ಕೊಂಡಾಡಣ್ಣ। ||೫||

---

೧೦. i) ಇಲ್ಲಿ ಬರುವ ಅಪ್ರಕಟಿತ ಮತ್ತು ಮೌಖಿಕ ಸ್ವರವಚನಗಳಿಗೆ ನಿರ್ದಿಷ್ಟವಾದ ಸಂಗೀತ ನಿರ್ದೇಶನಗಳಿಲ್ಲ. ಛಂದಸ್ಸು, ಪ್ರಾಸಾದಿಗಳಿಗೆ ಸಂಬಂಧಿಸಿದಂತೆಯೂ ಇಲ್ಲಿ ಅಸ್ಪಷ್ಟತೆ ಇದೆ. ಸಕ್ರಮವಾಗಿ ಇಂಥ ಎಲ್ಲ ಸ್ವರವಚನಗಳನ್ನು ಪ್ರಕಟಿಸಬೇಕಾಗಿದೆ.
ii) ಪ್ರಮುಖವಾದ ಸ್ವರವಚನಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸಿದೆ. ಸಾಕಷ್ಟು ಅಪ್ರಕಟಿತ ಸ್ವರವಚನಗಳು ಈ ಭಾಗದಲ್ಲಿ ಲಭ್ಯವಾಗುತ್ತವೆ.

ಗಡಗಿ ಪರಸಪ್ಪ (ಪರಪ್ಪ):

ಎಂತ ಗುರುವರ ಬಂದನೊ। ನಿಶ್ಚಿಂತ ನಿತ್ಯ ನಿಂದನು
ಭ್ರಾಂತಿ ಅಳಿದು ನಿರಂತರಲಿ ಸ್ವಾತಂತ್ರದಿಂ ನೆಲಸಿಪನು । ||ಪ||

ಗಡಿಯೊಳು ತಿರಿದುಂಡನೊ। ಅಡಿಗಡಿಗೆ ತಾ ಶರಣನೆಂಬನೋ ಬೊ
ಗಡಿ ನೆಲವು ತೌಡಿ ಮಾಡಿ। ಅರ್ತಿಯಿಂ ಕುಳಿತಿರ್ಪನೋ । ||೧||

ಕೂಗಿ ರ್‍ಹಾಗವ ಮಾಳ್ಪನೋ ವಿರಾಗದಿಂದಲಿರ್ಪನೋ।
ರಾಗದ್ವೇಷ ನೀಗಿ ನಿಂತು ರಾಜಯೋಗಿಯಾಗಿರ್ಪನೋ । ||೨||

ಅತ್ತಲಿತ್ತ ನೋಡ್ಪನೋ। ಮನತತ್ತ್ವದಲ್ಲಿರ್ಪನೋ।
ದಿವ್ಯನದೇಕಾಗುದೀ। ವನ ನಿಷ್ಠೆಯಿಂ ಕುಳತಿರ್ಪನೋ। ||೩||

ಉಪ್ಪು ಹುಳಿಕಾರೆಂಬನೋ। ಮನವಪ್ಪಿ ತಾ ಸವಿದಿರ್ಪನೋ।
ಕಪ್ಪು ನೆರಳವರಸಿಬಾನೋಳು। ಚಂದದಿಂ ಸವಿದುಂಡನೋ। ||೪||

ಆಸೆಯೆಂಬುದು ಅಳಿದನೋ। ಲೋಕೇಶನನ್ನು ಸ್ಮರಿಸ್ಯನೋ।
ವಾಸ ಶ್ರೀ ಬಳ್ಳಾರಿಪುರದೊಳು ಪರಸಪ್ಪ ಮೆರೆವನೋ। ||೫||

'ಶ್ರೀಗುರು ಸಿದ್ಧರಾಮ' ಅಂಕಿತ:[೧೧]

ಅಗಸನೂ ನಾನೊಬ್ಬಗಸನು ಇಂಥ ಹೊಗೆ ಮಾಸಿದಂಗಿಯ
ಸೊಗಸಲಿ ಗಂಜಿಯ ಮಾಡುವಂಥ ||ಪ||

ತನುವ ತಸ್ತವ ಮಾಡಿ ಮನದ ಮೈಲಿಗೆ ಸೋಸಿ
ಇಂಥ ಬಿನಗು ಸಂಶಯಗಳನ್ನೆಲ್ಲ ಅನುಸರಿಸಿ ಹಿಂಡುವಂಥ। ||೧||

ಆರು ಮೂರೊಂಭತ್ತು ಅರಿವಿ ಗಂಟನೆ ಕಟ್ಟಿ
ಇಂಥ ಘೋರೆಂಬ ನದಿಯೊಳು ಮುರಿದು ಮುರಿದಿಡುವಂಥ। ||೨||

ದಿಟ್ಟತನದಿಂದ ಗಟ್ಟಿಸಿ ಗಳಿಗೆಯಾ ಮಾಡಿ
ನಮ್ಮ ಶ್ರೀ ಗುರು ಸಿದ್ಧರಾಮರ ಚರಣಕ್ಕರ್ಪಿಸುವಂಥ। ||೧||

ಹೇರೂರು ವಿರೂಪನಗೌಡ(?) : [೧೨]

೧. ಭಳಿರೇ ಭಳಿರೇ ಭಳಿರೇ ಭಳರೇ ರುದ್ರೇಶ।
ನಿಮ್ಮೊಲವು ತಿಳಿಯದು ಈ ಜನರಿಗೆ ಪಾಶ।
ಕೆಲಸದೊಳಿರುವರು ಬಹುಕ್ಲೇಶ।
ತಾವು ಹಲುಬಿ ಸಾಯುವರು ಪರಮೇಶ ||ಪ||

---

೧೧. ಯಶವಂತನಗರದ ಶ್ರೀ ಸಿದ್ಧರಾಮೇಶ್ವರರಿಂದ ಬಹುದು.

೧೨. ಈ ರಚನೆಯ ಕರ್ತೃ ಗೌಡರನ್ನಲಾಗುತ್ತಿದೆ. ಆದರೆ ಈಶವದೇ ಎನ್ನಬಹುದಾದ ವಿವಿಧ ಅಂಕಿತಗಳು ಹಲವಾರು ರಚನೆಗಳಲ್ಲಿ ಬರುತ್ತವೆ. ಪ್ರಸ್ತುತ ರಚನೆ 'ಎಡಮೂರಿ ಶಾಸ್ತ್ರದ ಹಾಡು' ಎಂದು ಹೆಸರಾಗಿದೆ.

ಕಲಲಲಲಲಲಲಲಲಲಲೆಂಬುವರು ತಾವ್ ಹೊಲೆಯ ಮಾರ್ಗದಲಿ ನಡೆಯುವರು।
ಸುಲಭಮೂರ್ತಿಯೆಂದರಿಯರು ಮಲಮೂತ್ರ ಕುಣಿಯೊಳ್ ಮುಳುಗುವರು। ||೧||

ಕುಂದು ನಿಂದೆಗಳ ನುಡಿಯುವರು ತಾವ್ ಹಂದಿಯ ಜನ್ಮಕೆ ಬೀಳುವರು।
ಚಂದುಳ್ಳ ಮೂರ್ತಿಯ ಹಿಂದು ಅರಿಯರು ಯಮಬಂಧನ ಕೈವಶ ಆಗುವರು। ||೨||

ಹೊಟ್ಟೆಕಿಚ್ಚು ತಾವ್ ಪಡುತಿಹರು ಎಡವಟ್ಟಿನ ಮಾತುಗಳಾಡುತಿಹರು।
ದಿಟ್ಟ ಸಿದ್ಧನೆಂದರಿಯರು ಇವರು ಎಡಮೂರಿ ಶಾಸ್ತ್ರ ತಿಳಿಯಾರು। ||೧||

೨. ಆಡುತ್ತೈತಿ ವಾಯಿ ಈ ಘಟದೊಳಾಡುತ್ತೈತಿ ವಾಯಿ
ಈಡಾ ಪಿಂಗಳು ಸುಷುಮ್ನ ಕೂಡಿ ಮೂಡಲ ಪಡುವಣ ಏರುತ ಇಳಿಯುತಾ ||ಪ||

ಆದಿ ಅನಾದಿ ತಾನಾಗಿ ಆನಂದದಿ ಆದರ ಮಧ್ಯದಿ ಮೂಲ
ಪೀಠದೊಳು ನಾದವ ಕೇಳುತ, ಕರ್ಣದಿ ಕಾರಣವಾದ ಸುರಾಳ ನಿರಾಳ ನಿಃಶೂನ್ಯದಿ
ಬ್ರಹ್ಮ ವಿಷ್ಣು ರುದ್ರೇಶ ಸದಾಶಿವಗಮ್ಯವಾಗಿ ತಾನಿಲ್ಕದಲ್ಯೆತೆ
ಸುಮ್ಮನೆ ಸೂಕ್ಷ್ಮದಿ ಗಮ್ಯ ಗಗ್ರನೆ ಹಿಂದಿರುಗಿ ತಾ ತಿರುಗತಲ್ಯೆಕ್ಕದಿ। ||೨||

ಇಪ್ಪತ್ತು ಸಾವಿರದಾರುನೂರಾ ಆರವತ್ತು ಜಪವನು ಸಪ್ಪಳಿಲ್ಲದೇ ನಡೆಸುತ್ತೈತೆ।
ಇಪ್ಪತ್ತು ಎರಡು ಸಾವಿರ ನಾಡಿಗೆ ತಗ ಮೊಡದಪ್ಪ ಸಿದ್ಧನ ಕೂಡುತಾ
ಉನ್ಮನಿಯೊಳಗಾಡುತ್ತೈತೆ ವಾಯಿ। ||೩||

೩. ಮುಟ್ಟಿ ನೋಡಿಕೊಳ್ಳೋ ನೀನು ಹುಟ್ಟಿದ್ದಲ್ಲಿ ಮುಂದೆ ಘಟದಲ್ಲಿ
ನಟ್ಟ ನಡುವೆಯಾಯಿತೋ ಸೃಷ್ಟಿಯಲ್ಲಿ ಶಿವನ ದೃಷ್ಟಿಯಲ್ಲಿ ||ಪ||

ಜೀವ ಪರಮರ್ಕೈಕ್ಯರೆಂಬೋರಿರುವರಿಲ್ಲಿ ಅವರು ಮರೆವರಲ್ಲ
ಸಾವು ಹುಟ್ಟು ಎಂಬೆರಡು ಹೋದವಲ್ಲಿ ಭವ ನೀಗಿತಲ್ಲಿ ||೧||

ನಾದಬಿಂದು ಕಳಾತೀತ ಆಯಿತಲ್ಲಿ ಅದು ಸೇರಿತಲ್ಲಿ
ಆದಿ ಆಧಾರ ಹಿಡಿದು ಹೋಯಿತಲ್ಲಿ ವಿನೋದದಲ್ಲಿ ||೨||

ತಂದೆ ತಾಯಿ ಹೊಂದಿ ಬಂದ ಸಂದು ಎಲ್ಲಿ ನೀ ನಿಂದುದೆಲ್ಲಿ
ಛಂದ (ಚಂದ) ಸಿದ್ಧಗುರುವಿನ ಪಾದ ಹೊಂದಿದಲ್ಲಿ ಮುಕ್ತಿ ಆಗೋದಲ್ಲಿ ||೩||

'ಕೊಳೂರೇಶ' - ಅಂಕಿತ :

ಶಿವನ ನಿಜವು ಸಿಕ್ಕುವುದಿಲ್ಲಲ್ಲ। ಇಂಥವರಿಗೆಲ್ಲ।
ಷಟ್ಕರ್ಮವ ಮಾಡಿ ಭವಭವದಲಿ ಬಂದು।
ಉಂಡು ಭೋಗ ಸಂಪದ ಬಯಸುವವರಿಗೆ। ಶಿವನ ನಿಜವು . . . ||ಪ||

ಉತ್ತಮ ಕುಲದಲಿ ಹುಟ್ಟಿದರಿಲ್ಲ ವಾಸಿ ಪಂಥವ ಬಿಟ್ಟವರಿಲ್ಲ
ಮರ್ಮದರ್ಥವ ಹೇಳಿದರಿಲ್ಲ ಮತ್ತೆ ವೇದವ ಓದಿದರಿಲ್ಲ
ಚಿತ್ತವರಿದು ಕೇಳಿದರಿಲ್ಲ ಭಕ್ತಿ ಮನದಿ ನಡೆಸದಲ್ಲಿಲ್ಲ
ನಿತ್ಯ ನೀರೊಳು ಮುಳುಗಿದರಿಲ್ಲ ನೇಮವ ಬಿಡದೆ ನಡೆಸಿದರಿಲ್ಲ
ಸತ್ಕಾರ್ಯಂಗಳ ಸಾಧಿಸಲೇನು ಸಂಧ್ಯಕಾಲಾರ್ಚನೆಯಿಂದೇನು
ಹೊತ್ತಿಸಿ ಹೋಮವ ಮಾಡಿದರೇನು ಹಲವು ಮಂತ್ರವ ಜಪಿಸಿದರೇನು
ಸತ್ಯಶರಣನ ನೆನಸಿದರೇನು ಶೀಲವನು ತಿರುಗಿ ಮಾಡಿದರೇನು
ಪೃಥ್ವಿ ಅಗಲ ತಿರುಗಿದರೇನು ಪುಣ್ಯತೀರ್ಥಗಳು ಇದ್ದರೂ ಏನು
ಬತ್ತಲ ಭ್ರಮಿಸದಿದ್ದೊಡೇನು ಬೋಳ ಬೋದಡೆ ಇದ್ದರೂ ಏನು
ತತ್ತ್ವಬಲ್ಲ ಗುರುವಿನ ಒಲಿಸಿ ತನ್ನ ನಿಜವ ತಾ ತಿಳಿಯುವ ತನಕ ||೧||

ರಂಭೆಯರನ್ನು ಬಿಟ್ಟರೂ ಇಲ್ಲ ರಾಗದ್ವೇಷ ತೊರೆದರೂ ಇಲ್ಲ
ಶಂಭೋ ಜಪತಪ ಮಾಡಿದರಿಲ್ಲ ಜಾಗ್ರಸುಷುಪ್ತಿ ಹಳಿದರೂ ಇಲ್ಲ
ತುಂಬಿಸಿ ವೈರಾಗ್ಯವಾದರು ಇಲ್ಲ ತೊಟ್ಟ ವೇಷ ತೊಟ್ಟು ತಿರುಗಿ ಇಲ್ಲ
ಅಷ್ಟಾಂಗ ಯೋಗದೊಳಗಿಲ್ಲ ಕುಂಭಕ ಪೂರಕ ರೇಚಕ ಬಲಿದು
ಕುಳಿತು ಕುಂಡಲಿಯನೊತ್ತಿದರಿಲ್ಲ
ಡಿಂಭವ ಮುರಿದು ಪರ್ವವ ಜರಿದು ತುಂಬಿಸಿ ನಾದವ ಕೇಳಿಸಿದರಿಲ್ಲ
ಒಡವಾಗ್ನಿ ಮುಚ್ಚಿಟ್ಟು ಭ್ರೂಮಧ್ಯದಿ ಆತ್ಮಜ್ಯೋತಿ ನೋಡಿದಡಿಲ್ಲ
ಕುಂಭಿನಿ ಮೇಲೆ ಆಸನ ಬಲಿದು ಅಂಬರಕ್ಕಿಟ್ಟಿಗರಿದರಿಲ್ಲ
ಹಂಬಲಿಸುತಲಿಹ ಹಲವು ಮಾತುಗಳ ಹೊಕ್ಕು ನೋಡಿದರಲ್ಲೇನಿಲ್ಲ
ನಂಬಿಸಿ ಗುರುವಿನ ಪಾದವ ಪರಮೇಶ್ವರನೆಂಬೋ
ನಿಜ ಆಶ್ರಯ ಆದವರಿಗಲ್ಲದೇ ||೨||

ಆರು ಚಕ್ರವು ಭೂತವು ತತ್ತ್ವ ಆದಿದೇವತೆ ಶಕ್ತಿಯರೊಳಗೆ।
ಆರುಸ್ಥಲಗಳಿವು ಆರು ಅಕ್ಷರ ಆರು ವರ್ತನೆಗಳಿಗೇನಿಲ್ಲ।
ಆರು ಅಂಗದ ಗುಣಗಳನಳಿದು ಆರು ನಿರ್ಣಯಿಸುಗಳೇನಿಲ್ಲ।
ಮೂಲುಲಿಂಗಕ್ಕೆ ಕೊಟ್ಟರೇನಿಲ್ಲ। ಮೂರು ತನುವಿನ ಅವಸ್ಥೆಯನಳಿದು
ಮೂರು ಮೂರ್ತಿಯನು ನಿಲಿಸದರಿಲ್ಲ।
ಮೂರು ಅಂಗವನಳಿದು ದಾರದ ಬಿಗಿಯಲಿ ಆಡುವ ಬೊಂಬೆಯಿದು
ಧಾತು ಸುವೃತ್ತಿಕ ನಿಲ್ಲಿಸದರಿಲ್ಲ।
ತೋರುವ ತೊಕ್ಕೆ ನಿಜ ತಾನಲ್ಲ। ಪೂರ್ವಜ್ಞಾನಿಗಳಾದರೂ ಇಲ್ಲ।
ನೀರೊಳು ಸೂರ್ಯ ಸ್ಥಿರವಲ್ಲ। ನಮ್ಮ ಕೊಳೂರೇಶನ ನಿಜ ಬೇರಲ್ಲ॥

**"ಹುಲಕುಂದೆ ಹಿರೇಮಠ ಗುರು" (ಅಂಕಿತ):**

ಶಿವಧ್ಯಾನವನ್ನು ನೀನು ಹರಧ್ಯಾನವನ್ನು ನೀನು
ಮಾಡೋದ್ಯಾವಾಗ ನಿನಗೆ ಕೂಡೋದ್ಯಾವಗ
ಬಾಲ್ಯದಲ್ಲಿ ಮೊಲೆ ಹಾಲನುಂಡು ಮಲಮೂತ್ರದೋಳಗೆ ಕಲಿಸಿ ಚಿಮ್ಮುತಾ।
ಗೋಲಿಗುಂಡು ಚಿಣಿಕೋಲನಾಡುತಾ ಲೀಲೆಯಲಿ ನೀ ಕಾಲಕಳೆದಿಯೋ ||೧||

ಮೀರಿದ ಪ್ರಾಯವು ಸಾರಿ ಬರುತಲಿದೆ ನಾರಿಯ ಮೋಹದಿ ಸೇರಿ ಚರಿಸುತಾ।
ಬಾರಿ ಹೊಲಸು ಪೂರಿತ ಕಾಯ ಶೃಂಗಾರ ವಿಲಾಸದಿ ಕಾಲ ಕಳೆದಿಯೊ ||೨||

ಮುಪ್ಪಿನ ಕಾಲವು ತಪ್ಪದೆ ಬರುತಿದೆ ರೆಕ್ಕೆ ಮುರಿದು ಬಿದ್ದ ಪಕ್ಷಿಯಂದದೀ।
ಕಪ್ಪು ಶರೀರಕೆ ತ್ರಾಣವಿಲ್ಲದೆ ಸರ್ಪನಂತೆ ನೆಲಹಿಡಿದು ಬೀಳುವಿ ||೩||

ಪುಣ್ಯಪುರುಷರ ನೋಡಲಿಚ್ಛಿಸಿ ಕಣ್ಣು ಕಾಣದೆ ಕೈಯಾಡಿಸುವೀ।
ಚೆನ್ನಶಂಕರನ ಗುಡಿಗೆ ಪೋಗಲು ನುಡಿಯಲು ಶಕ್ತಿಯಿಲ್ಲದಾಯಿತೋ ||೪||

ಅಷ್ಟರಲ್ಲಿ ಬಂದು ದುಷ್ಟ ಯಮನರು ಕಟ್ಟಿ ಒಯ್ಯುವಾಗ ಕಷ್ಟಪಡುವೆ ನೀ।
ಶ್ರೇಷ್ಠದ ಹುಲುಕುಂದೆ ಹಿರೇಮಠ ಗುರುವಿನ ಚರಣ ಕಾಣದೆ
ಮರಣ ಹೊಂದಿದೆ ||೫||

**ಗುರುವೇರಿ ಸ್ವಾಮಿ:**

ಬಡಿತವ್ವ ಎನಗೊಂದು ಗುಡ್ಡದೊಳಗ ದೆವ್ವ
ಆರು ಮಂತ್ರ ಕಟ್ಟಿದಂದು ಬಿಡದವ್ವ ||೧||

ಮಡದಿ ಮಕ್ಕಳ ಮೋಹ ಬಿಡಿಸಿದ ದೆವ್ವ
ಅದು ಹಿಂದಕೆ ನೋಡದಂತೆ ಮಾಡಿತಲ್ಲವ್ವ ||೨||

ಆರು ಮಕ್ಕಳಕೆ ಮೀರಿದ ದೆವ್ವ
ಅದು ತಂದೆ ತಾಯಿಯರನೆಲ್ಲ ಮರೆಸಿತವ್ವ ||೩||

ಉತ್ತರಕೆ ಮುಖವಾಗಿ ಕಂಡೆನವ್ವ
ಓರ್ವನೆ ಬಂದರೆ ಹೇಳ್ತಿನಂತವ್ವ ||೪||

ದಕ್ಷಿಣ ಮುಖವಾಗಿ ಹೋಯಿತಾ ದೆವ್ವ
ಅದರ ಹಿಂಬಾಲತ್ತಿ ನಾನು ಹೋದೆನವ್ವಾ ||೫||

ದೇಶಕ್ಕಧಿಕವಾದ ಕೊಳಗಲ್ಲುಪುರದೊಳು
ಗುರುವೇರಿ ಬಸ್ವಸ್ವಾಮಿ ಹೇಳಿದ ವಚನ ಕೇಳವ್ವ ||೬||

**ಆನೆಗುಂದೆ ಅಮರೇಶ:**

ನೀತಿಲಿ ನಡಿಬೇಕಣ್ಣ।
ಅಪನೀತೀಲಿ ನಡೆದರೆ ಮೆಚ್ಚ ಮುಕ್ಕಣ್ಣ ||ಪ||

ವೇದಶಾಸ್ತ್ರಗಳನೋದಿ।
ಅದರ ಭೇದವ ತಿಳಿಯದೆ ತಪ್ಪಿದೆ ಹಾದಿ।
ವಾದಿಜನರ ಕೂಡ ಕಾದಿ।
ಯಮನ ಬಾಧಿ ಸಿಕ್ಕಿಬಿದ್ದು ವ್ಯರ್ಥ ಕೆಟ್ಹೋದಿ। ||೧||

ಸೊಕ್ಕು ಜವ್ವನ ನೀರು ಕುಡಿ ನೀನು।
ಅಕ್ಕ ಅವ್ವನೆಂದು ಸವಿ ಮಾತನಾಡಿ।
ಅಕ್ಕರದಿ ಒಡಗೂಡಿ ನೀನು ವ್ಯರ್ಥ ನರ।
ಕಕ್ಕೆ ನೀ ಬಿದ್ದಿಯಲ್ಲೋ ಕೂಡಿ। ||೨||

ತಂದೆ ತಾಯಿನ ಪೂಜೆಮಾಡೋ ಅವರು।
ನೊಂದು ಕೊಂಡರೆ ನಿನಗೆ ಬಂದಿತೋ ಕೇಡೋ।
ಬಂದ ಜಂಗಮ ಏನಾ ನೀಡೋ। ಆನೆ
ಗುಂದೆ ಅಮರೇಶನ ವರವನ್ನೇ ಬೇಡೋ ||೩||

**ಸಹಾಯ:**

- ಈ ಲೇಖನ ತಯಾರಿಸುವಲ್ಲಿ ಡಾ. ಬಸವರಾಜ ಮಲಶೆಟ್ಟಿಯವರ ಚರ್ಚೆ ಮತ್ತು ಡಾ. ಮೃತ್ಯುಂಜಯ ಹೊರಕೇರಿಯವರ ಸಲಹೆಗಳ ನೆರವು ಪಡೆದಿದ್ದೇನೆ.
- ಶ್ರೀ ಹಗರಿ ಕೊಮರಪ್ಪ, ಶ್ರೀ ಮಾಳ್ಗಿ ಷಣ್ಮುಖಪ್ಪ, ಶ್ರೀ ಅಕ್ಕಸಾಲಿ ತಿಪ್ಪೇಸ್ವಾಮಿ, ಶ್ರೀ ವಡ್ಡಿನ ನಾಗಪ್ಪ, ಶ್ರೀ ತಿಂದಪ್ಪ - ಸಂಡೂರು.
- ಶ್ರೀ ರಾಜಶೇಖರಗೌಡ, ಶ್ರೀ ಪರಶುರಾಮಪ್ಪ - ಯಶವಂತನಗರ
- ಶ್ರೀ ಕಂಪಾಲಪ್ಪ, ಶ್ರೀ ಪೊಂಪಣ್ಣ - ತಾರಾನಗರ
- ಶ್ರೀ ಬೇಲ್ದಾರ ಲಿಂಗಪ್ಪ, ಶ್ರೀ ದುರುಗಪ್ಪ
- ಮತ್ತಿತರರು.[೧೩]



❖ ❖ ❖

---

೧೩. ಇಲ್ಲಿ ದಕ್ಷಿಣ ಕನ್ನಡ ಜಿಲ್ಲೆಯನ್ನು ಪರಿಗಣಿಸಿಲ್ಲ.

# ಈ ಸಂಪುಟದ ಲೇಖಕರು

ಡಾ. ವೀರಣ್ಣ ರಾಜೂರ
ಪ್ರಾಧ್ಯಾಪಕರು, ಕನ್ನಡ ಅಧ್ಯಯಪೀಠ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಶ್ರೀ ಎಸ್. ಶಿವಣ್ಣ
ಸಂಪಾದಕರು, ಕನ್ನಡ ಅಧ್ಯಯನ ಕೇಂದ್ರ,
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ಪ್ರೊ. ಗೌ.ಮ. ಉಮಾಪತಿಶಾಸ್ತ್ರಿ
ನಿರ್ದೇಶಕರು, ಶ್ರೀ ಮಂಜುನಾಥ ಸಂಸ್ಕೃತಿ
ಪ್ರತಿಷ್ಠಾನ, ಧರ್ಮಸ್ಥಳ

ಪ್ರೊ. ಸದಾನಂದ ಕನವಳ್ಳಿ
ನಿವೃತ್ತ ನಿದೇಶಕರು, ಪ್ರಸಾರಾಂಗ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಶ್ರೀ. ಜಿ.ವಿ. ಶಿವಲಿಂಗಯ್ಯ
ನಿವೃತ್ತ ಕನ್ನಡ ಅಧ್ಯಾಪಕರು,
ಮರಿಮಲ್ಲಪ್ಪ ಕಿರಿಯ ಕಾಲೇಜು, ಮೈಸೂರು

ಪ್ರೊ. ಈಶ್ವರಯ್ಯ ಮಠ
ಕನ್ನಡ ಅಧ್ಯಾಪಕರು,
ಎಂ.ಎಸ್.ಐ ಕಾಲೇಜು, ಗುಲ್ಬರ್ಗ

ಶ್ರೀಮತಿ ಸರ್ವಮಂಗಳಾ ಶಂಕರ್
ಪ್ರವಾಚಕರು, ಸಂಗೀತ ವಿಭಾಗ,
ಮಹಾರಾಣಿ ಕಲಾ ಕಾಲೇಜು,
ಬೆಂಗಳೂರು

ಪ್ರೊ. ಬಿ.ವಿ. ಮಲ್ಲಾಪುರ
ನಿವೃತ್ತ ಕನ್ನಡ ಪ್ರಾಧ್ಯಾಪಕರು,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಡಾ. ಎಂ.ಬಿ. ನೇಗಿನಹಾಳ
ಅಧ್ಯಕ್ಷರು, ಕನ್ನಡ ಅಧ್ಯಯನಪೀಠ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರೊ. ಬಿ.ಆರ್. ಹಿರೇಮಠ
ಪ್ರಾಧ್ಯಾಪಕರು, ಕನ್ನಡ ಅಧ್ಯಯನಪೀಠ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಶ್ರೀಮತಿ ವೈ.ಸಿ. ಭಾನುಮತಿ
ಹಿರಿಯ ಸಂಶೋಧನ ಸಹಾಯಕರು,
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ,ಮೈಸೂರು

ಶ್ರೀ ಜಿ.ಜಿ. ಮಂಜುನಾಥನ್
ಹಿರಿಯ ಸಂಶೋಧನ ಸಹಾಯಕರು,
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ,ಮೈಸೂರು

ಪ್ರೊ. ವೀರಣ್ಣ ದಂಡೆ
ಪ್ರವಾಚಕರು, ಕನ್ನಡ ಅಧ್ಯಯನ ಸಂಸ್ಥೆ,
ಗುಲ್ಬರ್ಗ ವಿಶ್ವವಿದ್ಯಾಲಯ, ಗುಲ್ಬರ್ಗಾ

ಶ್ರೀರಾಮ ಇಟ್ಟಣ್ಣವರ
ಜ್ಯೂನಿಯರ ಕಾಲೇಜ
ಬೀಳಗಿ, ಬಿಜಾಪುರ

ಶ್ರೀ ಡಿ.ಎಂ. ಮಹಾದೇವಮೂರ್ತಿ
ಪ್ರಾಂಶುಪಾಲರು,
ಸರ್ಕಾರಿ ಸಂಯುಕ್ತಪದವಿಪೂರ್ವ ಕಾಲೇಜು,
ದೇವನೂರು

ಡಾ. ಮೃತ್ಯುಂಜಯ ರುಮಾಲೆ
ಕನ್ನಡ ಪ್ರಾಧ್ಯಾಪಕರು,
ವಿಜಯನಗರ ಕಾಲೇಜು, ಹೊಸಪೇಟೆ

